# ಸಂಚಯ




ಡಾ. ಹಾ. ಮಾ. ನಾಯಕ



ಶಾರದಾ ಮಂದಿರ
ರಾಮಯ್ಯರ್ ರಸ್ತೆ, ಮೈಸೂರು - ೪

*Sañcaya* (A Collection), a collection of literary essays by Dr. H. M. Nayak; Published by Sharada Mandira, Mysore-4; First Edition 1969; pp. 212; Price: Rs. 4.50 (7.50)

ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು:

H. M. SHANKARANARAYANARAO, M.A.
*Professor and Head of the Department of Kannada*
*Sharada Vilas College, Mysore-4*

ಮೊದಲನೆಯ ಮುದ್ರಣ: ೧೯೬೯





ಬೆಲೆ:
ಸಾದಾ ಪ್ರತಿ: ೪–೫೦
ಕ್ಯಾಲಿಕೊ ಪ್ರತಿ: ೭–೫೦



ಮುದ್ರಕರು:
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು

ಕನ್ನಡರಾಜ್ಯದ ಶಿಕ್ಷಣ ಸಚಿವರು

ಶ್ರೀ ಕೆ. ವಿ. ಶಂಕರಗೌಡ

ಅವರಿಗೆ

ಗೌರವಪೂರ್ವಕ

# ಮೊದಲ ಮಾತು

ವಿವಿಧ ಪತ್ರಿಕೆಗಳಲ್ಲಿ ಪುಸ್ತಕಗಳಲ್ಲಿ ಪ್ರಕಟವಾಗಿದ್ದ ನನ್ನ ಕೆಲವು ಲೇಖನಗಳು ಇಲ್ಲಿ ಸಂಚಯಿಸಲ್ಪಟ್ಟಿವೆ. ಇದು ಸಾಧ್ಯವಾಗಿರುವುದು ಮಿತ್ರರಾದ ಪ್ರೊಫೆಸರ್ ಶಂಕರನಾರಾಯಣರಾಯರ ಸೌಜನ್ಯದಿಂದ. ಅವರು ತಮ್ಮ ಗ್ರಂಥಮಾಲೆಯ ಬೆಳ್ಳಿಹಬ್ಬದ ವರ್ಷದಲ್ಲಿ ನನ್ನದೊಂದು ಪುಸ್ತಕ ಪ್ರಕಟಿಸಲು ಅಪೇಕ್ಷಿಸಿದರು. ಬಿಡಿಲೇಖನಗಳನ್ನು ಸೇರಿಸುವ ಯೋಜನೆಯನ್ನು ಅವರ ಮುಂದಿಟ್ಟೆ. ಅವರು ಒಪ್ಪಿಕೊಂಡರು. ಈ ಸ್ನೇಹಕಾರ್ಯಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದೇನೆ.

ಇಲ್ಲಿನ ಲೇಖನಗಳಲ್ಲಿ ಕೊನೆಯವೆರಡು ಅನುವಾದಗಳಾಗಿವೆ. 'ಇಬ್ಬರು ಐರೋಪ್ಯ ಕಲಾವಿದರು' ಎಂಬುದರಲ್ಲಿ 'ಗಿಯೊಟ್ಟೊ' ಎಂಬುದು ಮಾಲ್ಕಂ ವಾಗನ್ ಅವರ 'ಗಿಯೊಟ್ಟೊ ಪೇಂಟೆಂಡ್ ವಾಟ್ ಹಿ ಸಾ' ಎಂಬ ಲೇಖನ ; 'ಚೊಪಿನ್' ಎಂಬುದು ಕ್ಲೇರ್‌ವಾನ್ ಅಸ್‌ದಾಲ್ ಅವರ 'ಚೊಪಿನ್-ಪೊಯೆಟ್ ಆಫ್ ದಿ ಪಿಯಾನೊ' ಎಂಬ ಲೇಖನ. 'ಸಿಕ್ ಜನಾಂಗದ ಧರ್ಮ, ದೇವರು'—ಶ್ರೀ ಕುಶವಂತ ಸಿಂಗ್ ಅವರ 'ದಿ ಸಿಕ್ ಫೆಯ್ತ್ ಅಂಡ್ ಪ್ರಾಕ್ಟೀಸ್' ಎಂಬ ಲೇಖನವನ್ನೂ, ಸಿಕ್ಕರ ಮುಂಜಾನೆಯ ಪ್ರಾರ್ಥನೆಯ ಮೇಲಿನ ಟಿಪ್ಪಣಿಯನ್ನೂ ಆಧರಿಸಿದ್ದು. ಅವರೇ ಇಂಗ್ಲಿಷಿಗೆ ಅನುವಾದಿಸಿರುವ ಪ್ರಾರ್ಥನೆಗಳನ್ನೂ ಇಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಈ ಲೇಖನವನ್ನು ನಾನು ೧೯೫೩ರಷ್ಟು ಹಿಂದೆಯೇ ಪ್ರಕಟಿಸಿದ್ದೆ. ಈ ವರ್ಷ ಗುರು ನಾನಕ್ಕರ ಐದನೆ ಶತಮಾನೋತ್ಸವ ವರ್ಷ (೧೪೬೯-೧೯೬೯). ಆದ್ದರಿಂದ ಆ ಲೇಖನವನ್ನು ಈ ವರ್ಷ ಪ್ರಕಟವಾಗುತ್ತಿರುವ ನನ್ನ ಪುಸ್ತಕದಲ್ಲಿ ಸೇರಿಸಿರುವುದು ಉಚಿತವೆಂದು ಭಾವಿಸಿದ್ದೇನೆ.

'ನಮ್ಮ ಶಾಸ್ತ್ರೀಯ ಅಥವಾ ವೈಜ್ಞಾನಿಕ ಗ್ರಂಥಗಳ ಗದ್ಯ'-ಉಡುಪಿಯಲ್ಲಿ (೧೯೬೦) ನಡೆದ ಸಾಹಿತ್ಯ ಸಮ್ಮೇಳನಕ್ಕಾಗಿಯೂ, '೧೯೬೫-೬೬ರ ಕನ್ನಡ ಕಥನ ಸಾಹಿತ್ಯ'-ಶ್ರವಣಬೆಳಗೊಳದಲ್ಲಿ (೧೯೬೭)ನಡೆದ ಸಾಹಿತ್ಯ ಸಮ್ಮೇಳನ

ಕ್ಕಾಗಿಯೂ ಸಿದ್ಧಪಡಿಸಿದ ಲೇಖನಗಳು. ಈ ಲೇಖನಗಳಿಗೆ ಕಾರಣರಾದವರು ಮಿತ್ರರಾದ ಪ್ರೊಫೆಸರ್ ಕು. ಶಿ. ಹರಿದಾಸ ಭಟ್ಟರು ಹಾಗೂ ಶ್ರೀ ಹಂಪ. ನಾಗರಾಜಯ್ಯನವರು. ಅವರನ್ನು ನಾನು ಈ ಸಂದರ್ಭದಲ್ಲಿ ನೆನಸಬೇಕು.

'ಭಾಷೆಗಳ ಪ್ರಪಂಚ' ಲೇಖನದಲ್ಲಿ, ನಾನು ಮಿತ್ರ ಶ್ರೀ ರಾ. ವೆಂ. ಶ್ರೀನಿವಾಸಮೂರ್ತಿಯವರು ಸಂಪಾದಿಸಿ ಪ್ರಕಟಿಸುತ್ತಿದ್ದ 'ನಿರ್ಮಲ' ಮಾಸಪತ್ರಿಕೆಯಲ್ಲಿ ಭಾಷೆಗಳ ಭೌಗೋಳಿಕ ಹಂಚಿಕೆ, ಪರಸ್ಪರ ಸಂಬಂಧ, ವರ್ಗೀಕರಣಗಳನ್ನು ಕುರಿತು ಬರೆದ ಮೂರು ಚಿಕ್ಕ ಲೇಖನಗಳು ಸೇರಿವೆ.

ಇಲ್ಲಿನ ಲೇಖನಗಳನ್ನೆಲ್ಲ ಮೊದಲು ಪ್ರಕಟಿಸಿದ ಸಂಪಾದಕ ಮಿತ್ರರನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ. ಈ ಪುಸ್ತಕವನ್ನು ಅಚ್ಚಿಸಿಕೊಟ್ಟ ಗೆ. ಜಿ. ಎಚ್. ಕೃಷ್ಣಮೂರ್ತಿಯವರಿಗೆ ನಾನು ಆಭಾರಿಯಾಗಿದ್ದೇನೆ.

ಪುಸ್ತಕದಲ್ಲಿ ಕೆಲವು ಅಚ್ಚಿನ ತಪ್ಪುಗಳು ಉಳಿದಿರುವುದಕ್ಕಾಗಿ ನನ್ನ ವಿಷಾದವಿದೆ. ಕೊನೆಯ ಲೇಖನದಲ್ಲಿ (ಪು. ೧೯೬) 'ಜಪ್ಪಿ' ಎಂಬುದು 'ಜುಪ್ಪಿ' ಎಂದು ಅಚ್ಚಾಗಿದೆ. ಇದನ್ನು ಗಮನಿಸಬೇಕೆಂದು ಓದುಗರಲ್ಲಿ ಬಿನ್ನಹ.

ಬೆಳ್ಳಿಯ ಹಬ್ಬವನ್ನು ಆಚರಿಸುತ್ತಿರುವ ಶಾರದಾಮಂದಿರ ಕನ್ನಡ ಪ್ರಕಟಣ ಪ್ರಪಂಚದಲ್ಲಿ ಶುದ್ಧವಾದ ಅಭಿರುಚಿ, ವ್ಯವಹಾರಗಳಿಗೆ ಹೆಸರಾಗಿದೆ. ಅದಕ್ಕೆ ಈ ಸಂದರ್ಭದಲ್ಲಿ ಸಕಲ ಶುಭಗಳನ್ನೂ ಕೋರುವುದು ಅತ್ಯಂತ ಸಂತೋಷದ ಕರ್ತವ್ಯವಾಗಿದೆ.

"ಗೋಧೂಳಿ", ಗೋಕುಲಂ ರಸ್ತೆ
ಜಯಲಕ್ಷ್ಮೀಪುರಂ, ಮೈಸೂರು-೨
ಏಪ್ರಿಲ್ ೩೦, ೧೯೬೯

ಹಾ. ಮಾ. ನಾಯಕ

# ಪರಿವಿಡಿ

# ನಮ್ಮ ಶಾಸ್ತ್ರೀಯ ಅಥವಾ ವೈಜ್ಞಾನಿಕ ಗ್ರಂಥಗಳ ಗದ್ಯ

೧

ಕನ್ನಡ ಸಾಹಿತ್ಯದಲ್ಲಿ ಗದ್ಯದ ಉಗಮ ವಿಕಾಸಗಳನ್ನೂ, ಲಲಿತ ಸಾಹಿತ್ಯದಲ್ಲಿ ಅದು ವೈದಾಳಿರುವ ರೀತಿಯನ್ನೂ ಹಲವರು ಬೇರೆ ಬೇರೆ ಸಂದರ್ಭಗಳಲ್ಲಿ ಸ್ವಲ್ಪ ಮಟ್ಟಿಗೆ ವಿಚಾರಮಾಡಿದ್ದಾರೆ. ಶಾಸ್ತ್ರೀಯ ಅಥವಾ ವೈಜ್ಞಾನಿಕ ಸಾಹಿತ್ಯದಲ್ಲಿ ಆ ಗದ್ಯ ಹೇಗೆ ಬಳಕೆಯಾಗಿದೆಯೆಂಬುದನ್ನು ನೋಡುವುದು ಈ ಪ್ರಬಂಧದ ಉದ್ದೇಶ. ಆ ವಿಚಾರದ ನೆಲೆ–ಬೆಲೆಗಳನ್ನು, ಸುಖ–ದುಃಖಗಳನ್ನು ಕನ್ನಡದಲ್ಲಿ ಹಲವಾರು ಶಾಸ್ತ್ರೀಯ ಗ್ರಂಥಗಳನ್ನು ರಚಿಸಿರುವ ಹಿರಿಯರು ಯಾರಾದರೂ ವಿಚಾರ ಮಾಡುವುದು ಸೂಕ್ತ. ಆ ವಿಚಾರದಲ್ಲಿ ಅವರಿಗೆ ನನಗಿಂತಲೂ ಹೆಚ್ಚಿನ ಯೋಗ್ಯತೆ ಅಧಿಕಾರಗಳುಂಟು. ಈ ಪ್ರಬಂಧದಲ್ಲಿ ಸಾಮಾನ್ಯ ವಾಚಕನೊಬ್ಬನ ದೃಷ್ಟಿಕೋನದಿಂದ ಮಾತ್ರ ನಾನು ನಾಲ್ಕು ಮಾತುಗಳನ್ನು ಹೇಳಿದ್ದೇನೆ.

'ಪದ್ಯಂ ಸಮಸ್ತ ಜನತಾ ಹೃದ್ಯಂ' ಎಂಬ ಅಭಿಪ್ರಾಯ ತಲೆಕೆಳಗಾಗಿ 'ಗದ್ಯಂ ಹೃದ್ಯಂ ಪದ್ಯಂ ವಧ್ಯಂ' ಎಂಬುದಾಗಿ ಮಾರ್ಪಡಬೇಕಾದರೆ ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಸಾವಿರ ವರ್ಷಗಳು ಸಂದುಹೋಗಿವೆ. ಈ ಸಾವಿರ ವರ್ಷಗಳ ದೀರ್ಘ ಅವಧಿಯಲ್ಲಿ ಕೈಬೆರಳ ಮೇಲೆ ಎಣಿಸುವಷ್ಟು ಸಂಖ್ಯೆಯ ವೈಜ್ಞಾನಿಕ ಕೃತಿಗಳೂ ನಮ್ಮಲ್ಲಿ ಬರಲಿಲ್ಲ. ಶಸ್ತ್ರಗಳನ್ನು ಹಿಡಿಯಲು ಸಮರ್ಥರಿದ್ದ ನಮ್ಮ ಕವಿಗಳು ಶಾಸ್ತ್ರವನ್ನೂ ಪದ್ಯದ ಎರಕದಲ್ಲಿಯೇ ಸೇರಿಸಿದರು. ಪದ್ಯ ನೆನಪಿನಲ್ಲಿ ಉಳಿಯುವುದು ಸುಲಭವೆಂಬ ಕಾರಣವಾಗಲೀ, ಪದ್ಯ ಬರೆದವನಿಗೆ 'ಕವಿ' ಎಂಬ ಗೌರವ ದೊರೆಯುತ್ತದೆ ಎಂಬ ಅಭಿಮಾನದ ಸಂಗತಿಯು ಕಾರಣವಾಗಲೀ, ಅವರು ಎಲ್ಲ ವಿಷಯಗಳನ್ನೂ ಪದ್ಯದಲ್ಲಿಯೇ ಹೇಳಿದರು. ವ್ಯಾಕರಣವಾಗಲಿ, ಅಲಂಕಾರವಾಗಲಿ, ಶಿಲ್ಪಶಾಸ್ತ್ರವಾಗಲಿ,

ಗಜಶಾಸ್ತ್ರವಾಗಲಿ—ಎಲ್ಲವನ್ನೂ ಪದ್ಯದ ಹೊದಿಕೆಯಲ್ಲಿ ಮುಚ್ಚಿದರು. ಗದ್ಯ ಲೇಖನ ಅವರಿಗೆ ದೊಡ್ಡ ಗೌರವದ ಕೆಲಸವಾಗಿ ತೋರಿರಲಾರದು. ಜೊತೆಗೆ, ವೈಜ್ಞಾನಿಕ ವಿಷಯಗಳನ್ನು ಕುರಿತ ಗ್ರಂಥರಚನೆ ಮಾಡುವ ಅಗತ್ಯವೂ ಅಂದು ಇಂದಿನಂತೆ ಇದ್ದಿರಲಾರದು. ಅವರಿಗೆ ಅಗತ್ಯ ತೋರಿದ ಅಲ್ಪ ಸ್ವಲ್ಪ ಶಾಸ್ತ್ರೀಯ ವಿಚಾರಗಳನ್ನು ತಮ್ಮ 'ಕಾವ್ಯ'ದ ನಡುವೆ ತೇಪೆ ಹಾಕುತ್ತಿದ್ದರು. ಪ್ರತ್ಯೇಕವಾಗಿ ಬರೆಯಲೇಬೇಕಾಗಿ ಬಂದ ಸಂದರ್ಭಗಳಲ್ಲಿ ಅದನ್ನು ಛಂದಸ್ಸಿನ ಚೌಕಟ್ಟಿನೊಳಗೆ ತುರುಕುತ್ತಿದ್ದರು.

ವಿದೇಶೀಯರು ಈ ದೇಶಕ್ಕೆ ಬಂದು ನೆಲಸಿದ ಮೇಲೆ, ಪಶ್ಚಿಮದ ಗಾಳಿ ಈ ದೇಶದ ಜನಜೀವನದ ಮೇಲೆ ಬೀಸಿದ ಮೇಲೆ ನಾನಾ ಕ್ಷೇತ್ರಗಳಲ್ಲಿ ಹೊಸತನ ಮೈದೋರಿತು. ಸಾಮಾಜಿಕ-ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳಿಗಾರಂಭವಾಯಿತು. ಬದಲಾದ ವಿದ್ಯಾಭ್ಯಾಸ ಕ್ರಮ, ಕ್ರೈಸ್ತ ಮತ-ತತ್ವಗಳ ಪ್ರಚಾರ ಇವುಗಳಿಂದ ಭಾರತೀಯ ಸಾಹಿತ್ಯದ ರೂಪರೇಖೆಗಳೂ ಬದಲಾದವು. ಅಚ್ಚುಕೂಟಗಳ ಸ್ಥಾಪನೆ, ಬೈಬಲ್ಲಿನ ಅನುವಾದ, ನಾನಾ ಭಾಷೆಗಳ ವ್ಯಾಕರಣ-ಅರ್ಥಕೋಶಗಳ ರಚನೆ, ವಿದ್ಯಾಭ್ಯಾಸದ ಅಗತ್ಯಕ್ಕೆ ಅನುಗುಣವಾಗಿ ಬೇಕಾದ ಪಠ್ಯಪುಸ್ತಕಗಳು, ಕ್ರೈಸ್ತ ಪಾದ್ರಿಗಳು ಈ ದೇಶದ ಹಳೆಯ ಸಾಹಿತ್ಯಗಳಲ್ಲಿ ತೋರಿದ ಪ್ರೀತಿಯ ಫಲವಾದ ಸಂಶೋಧನೆ—ಇವೇ ಮೊದಲಾದ ಕಾರಣಗಳು ನಮ್ಮ ಸಾಹಿತ್ಯಕ್ಕೆ ಹೊಸ ಬೆಡಗನ್ನೂ, ಬಣ್ಣವನ್ನೂ ಕೊಟ್ಟವು. ವಿಜ್ಞಾನದ ವಿಚಾರಗಳನ್ನು ಕುರಿತ ಗ್ರಂಥಗಳ ರಚನೆಯೂ, ಅದಕ್ಕೆ ಬೇಕಾದ ಹೊಸಗದ್ಯದ ನಿರ್ಮಾಣವೂ ಈ ಕಾಲದಲ್ಲಿಯೇ ಆರಂಭವಾದವು. ಅಗತ್ಯವೇ ಅನ್ವೇಷಣೆಯ ಮೂಲವಷ್ಟೆ!

೨

ಪದ್ಯ ಛಂದಸ್ಸಿನ ಕಟ್ಟಿನಲ್ಲಿ ಸಿಕ್ಕಿಕೊಂಡು ಎಷ್ಟೋ ಸಲ ನರಳುತ್ತದೆ; ಗದ್ಯ ಮನಸ್ಸು ಬಂದ ಹಾಗೆ ಅಡ್ಡಾಡಿ ಬಳಲುತ್ತದೆ. ಪದ್ಯ ವೈಭವಯುಕ್ತವಾಗಿ ಆಕಾಶದೆತ್ತರದಲ್ಲಿ ಸಂಚರಿಸಿದರೆ, ಗದ್ಯ ನೆಲದ ಮೇಲೆ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ನಡೆದಾಡುತ್ತದೆ. ಪದ್ಯದಲ್ಲಿ ರಾಗ ವೈವಿಧ್ಯತೆ ವಿಜೃಂಭಿಸಿದರೆ, ಗದ್ಯದಲ್ಲಿ ಏಕತಾನ ಮೊರೆಯುತ್ತದೆ. ಪದ್ಯದ ಕ್ಷೇತ್ರ ಸೀಮಿತ; ಗದ್ಯದ

ಗಡಿಗೆ ಬೇಲಿಯಿಲ್ಲ. ಪದ್ಯ ಶಿಲಾಬಾಲಿಕೆ; ಗದ್ಯವೊ ಗೋಮಟೇಶ್ವರ. ವಾಸ್ತವವಾಗಿ ಗದ್ಯಪದ್ಯಗಳಿಗಿರುವ ಈ ವ್ಯತ್ಯಾಸಗಳೇ ಲಲಿತ ಸಾಹಿತ್ಯದ ಗದ್ಯಕ್ಕೂ, ಶಾಸ್ತ್ರೀಯ ಸಾಹಿತ್ಯದ ಗದ್ಯಕ್ಕೂ ಇವೆಯೆಂದರೆ ತಪ್ಪಾಗಲಾರದು. ಲಲಿತ ಗದ್ಯ ಕನಸುಣಿ; ವೈಜ್ಞಾನಿಕ ಗದ್ಯ ವಾಸ್ತವ ಜೀವಿ. ಕಥೆ ಕಾದಂಬರಿ ಪ್ರಬಂಧಗಳ ಕ್ಷೇತ್ರ ಸಸ್ಯ ಶ್ಯಾಮಲ; ಶಾಸ್ತ್ರೀಯ ವೈಚಾರಿಕ ಭೂಮಿ ಬೋಳು ನೆಲ. ಮೊದಲನೆಯದಕ್ಕೆ ಕಲ್ಪನೆಯೇ ಜೀವಾಳ; ಎರಡನೆಯದಕ್ಕೆ ಲೋಕಸತ್ಯವೇ ಆಧಾರ.

ಗದ್ಯ—ಲಲಿತ ಸಾಹಿತ್ಯದ್ದೆ ಆಗಲಿ, ವೈಜ್ಞಾನಿಕ ವಿಚಾರಗಳದ್ದೆ ಆಗಲಿ —ಇಂದಿನ ಸ್ಥಿತಿಯಲ್ಲಿ ಕನ್ನಡಕ್ಕೆ ಹೊಸದು. 'ವಡ್ಡಾರಾಧನೆ'ಯಷ್ಟು ಪ್ರಾಚೀನವಾದ ಗದ್ಯ ಪಾಶ್ಚಿಮಾತ್ಯ ಸಂಪರ್ಕದಿಂದ ಹೊಸ ರೂಪತಾಳಿ ನಿಂತಿದೆ. ಚಂಪೂಗ್ರಂಥಗಳಲ್ಲಿ ಪದ್ಯಗಳನ್ನು ಜೋಡಿಸುವ ಕೊಂಡಿಯಾಗಿದ್ದ ವಾಮನಮೂರ್ತಿ ಗದ್ಯ ಇಂದಿನ ಸಾಹಿತ್ಯವನ್ನೆಲ್ಲ ಆಕ್ರಮಿಸಿಕೊಂಡು ತ್ರಿವಿಕ್ರಮನಾಗಿ ಬೆಳೆದಿದೆ. ಕಳೆದ ಶತಮಾನದ ನಡುವೆ ಆರಂಭವಾದ ಈ ನವೀನ ಗದ್ಯ, ವೈಜ್ಞಾನಿಕ ಸಾಹಿತ್ಯ ಮತ್ತು ಲಲಿತ ಸಾಹಿತ್ಯಗಳ ನಡುವೆ ಗಮನಾರ್ಹವಾದ ಅಂತರವನ್ನುಳಿಸಿಲ್ಲ. ಆ ಕಾಲದ ಒಟ್ಟು ಗದ್ಯದಲ್ಲಿ ನಮಗೆ ಎದ್ದುತೋರುವ ಲಕ್ಷಣಗಳೆಂದರೆ ಪ್ರಾದೇಶಿಕವಾದ ಹಾಗೂ ವ್ಯಕ್ತಿ ವಿಶಿಷ್ಟವಾದ ವೈವಿಧ್ಯಗಳನ್ನು ಕುರಿತವು. ಆರಂಭಕಾಲದ ಲೇಖಕರಿಗೆ ಮಾದರಿಯಾಗಿ ಹಿಂದಿನ ಗದ್ಯ ಪರಂಪರೆಯಿರಲಿಲ್ಲ. ಆದುದರಿಂದ, ಎಲ್ಲರೂ ತಮ್ಮ ತಮ್ಮ ಮಾದರಿಗಳನ್ನು ನಿರ್ಮಿಸಿಕೊಳ್ಳಬೇಕಾಗಿತ್ತು. ಇದರಿಂದ ಶೈಲಿ ಪ್ರಾಯೋಗಿಕವೂ, ವಿವಿಧವೂ ಆಯಿತು. ತಮ್ಮ ಆಡುನುಡಿಯನ್ನೇ ಅವರು ಬರೆವಣಿಗೆಯಲ್ಲಿಯೂ ಉಳಿಸಿಕೊಂಡರು. ಸಾಮಾನ್ಯ ಜನರಿಗೆ ತಾವು ಹೇಳುವುದು ತಿಳಿಯಬೇಕು ಎಂಬುದೇ ಮಹತ್ವದ ಉದ್ದೇಶವಾಗಿದ್ದುದರಿಂದ ಹೀಗಾದದ್ದು ಸಹಜವೇ. ಆಡುನುಡಿಗೆ ಸಾಹಿತ್ಯಪೀಠ ಲಭ್ಯವಾದದ್ದು ಹೀಗೆ.

ಆಡುವ ಮಾತು ಬರೆವಣಿಗೆಯಲ್ಲ; ಬರೆವಣಿಗೆ ಆಡುವ ಮಾತಲ್ಲ. ಬರೆವಣಿಗೆಯನ್ನುಳ್ಳ ಲೋಕದ ಎಲ್ಲ ಭಾಷೆಗಳ ವಿಚಾರದಲ್ಲಿಯೂ ಇದು ವಾಸ್ತವ ವಿಚಾರ. ಕನ್ನಡದ ಇಂದಿನ ಗ್ರಾಂಥಿಕ ಭಾಷೆಯಲ್ಲಿ ಎದ್ದುತೋರುವ ಈ ವ್ಯತ್ಯಾಸ ಆರಂಭ ಕಾಲದ ಬರೆವಣಿಗೆಯಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ. ಅಂದಿನ

ಬರೆವಣಿಗೆ ಬಾಯಿಮಾತಿನ ಪ್ರತಿರೂಪವೇನಲ್ಲ. ಆದರೆ ಇಂದಿಗಿಂತ ಹೆಚ್ಚಾಗಿ ಆಡುನುಡಿಗೆ ಹತ್ತಿರಾಗಿರುವುದು ಕಂಡುಬರುತ್ತದೆ. ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಈ ಬಳಕೆಮಾತು ಬೇರೆ ಬೇರೆ ತೆರನಾಗಿರುವುದು ಎಲ್ಲರಿಗೂ ತಿಳಿದ ವಿಚಾರ. ಆದ್ದರಿಂದ ಬರೆವಣಿಗೆಯೂ ಹಾಗೆಯೇ ಇರುವುದು ಆಶ್ಚರ್ಯ ವೇನಲ್ಲ. ಕನ್ನಡದಲ್ಲಿ ಪ್ರಮಾಣಭೂತವಾದ, ಏಕರೂಪವಾದ ಗದ್ಯಶೈಲಿ ಎಂಬುದಿಲ್ಲ. ರಾಜಕೀಯ ಏಕೀಕರಣ ಮಾತ್ರದಿಂದ ಸಾಧಿತವಾಗಲಾರದ ಹಲವು ವಿಚಾರಗಳಲ್ಲಿ ಶೈಲಿಯೂ ಒಂದು ಎನ್ನಬಹುದು. ಸಾಂಸ್ಕೃತಿಕ ಏಕೀ ಕರಣದ ಸಾಧನೆಯಿಂದ, ವಿದ್ಯಾಭ್ಯಾಸ ಕ್ರಮದ ಏಕರೂಪತೆಯಿಂದ ಇದು ನಿಧಾನವಾಗಿ ಸಿದ್ಧಗೊಳ್ಳಬೇಕು. ಇದಕ್ಕಿಂತ ಮಿಗಿಲಾಗಿ, ಜನತೆಯ ಭಾಷೆ ಯಲ್ಲಿ ಅಗತ್ಯವಾದ ಸಂಸ್ಕರಣವಾಗಬೇಕು. ಆಗ ಆಡುನುಡಿಯೂ ಬರೆವಣಿ ಗೆಯೂ ಒಂದಕ್ಕೊಂದು ಹತ್ತಿರ ಬರುತ್ತವೆ.

ಮಾತು-ಬರೆವಣಿಗೆ ಒಂದಾಗಬೇಕು ಎಂಬುದು, ವ್ಯಕ್ತಿನಿಷ್ಠವಾದ, ಪ್ರಾದೇಶಿಕವಾದ ವ್ಯತ್ಯಾಸಗಳು ಇರಬಾರದು ಎಂಬುದು ನನ್ನ ಅಭಿಪ್ರಾಯ ವಲ್ಲ. ಅದು ಭಾಷೆಯ ಸಹಜ ಸ್ಥಿತಿಗೆ ವಿರುದ್ಧವಾಗುತ್ತದೆ. ಆದರೆ ಬಗೆ ಬಗೆಯ ವೈಯಕ್ತಿಕ, ರುಚಿ-ರೀತಿಗಳು, ವರ್ಣ-ರಾಗಗಳು ಲಲಿತ ಸಾಹಿತ್ಯದಲ್ಲಿ ಮಾತ್ರ ಇರಬೇಕು. ಅಲ್ಲಿ ಬೇಕಾದರೆ ಬಳಕೆಯ ಮಾತನ್ನೇ ತದ್ರೂಪವಾಗಿ ಉಪ ಯೋಗಿಸಬಹುದು. ವೈಜ್ಞಾನಿಕ ವಿಚಾರಗಳಿಗೆ ಸಂಬಂಧಿಸಿದಂತೆ ಮಾತ್ರ ಕನ್ನಡ ಭಾಷೆಗೆ ಸಾರ್ವತ್ರಿಕವಾದ ಏಕರೂಪವಾದ ಶೈಲಿ ಸಿದ್ಧಗೊಳ್ಳಬೇಕು. ವಿಚಾರ ಸಾಹಿತ್ಯದ ಬರೆವಣಿಗೆಯಲ್ಲಿ ಪ್ರಾದೇಶಿಕ ವ್ಯತ್ಯಾಸಗಳು ಹೆಚ್ಚಾಗಿ ಬರಬಾರದು; ಕನ್ನಡ ನಾಡಿನಲ್ಲೆಲ್ಲ ಪ್ರಮಾಣಭೂತವಾದ ಶೈಲಿ ನಿಲ್ಲಬೇಕು.

೩

ಕಳೆದ ಶತಮಾನದ ಮಧ್ಯಭಾಗದ ವೇಳೆಗೆ ರಚಿತವಾದ ಕೆಲವು ಶಾಸ್ತ್ರೀಯ ಗ್ರಂಥಗಳಲ್ಲಿ ನಾವು ಸ್ಪಷ್ಟವಾದ ಪ್ರಾದೇಶಿಕತೆಯನ್ನು ಗುರುತಿಸಬಹುದಾಗಿದೆ. ಹಳೆಯ ಮೈಸೂರು ಪ್ರದೇಶದ ಲೇಖಕರು ಉದ್ದೇಶಪೂರ್ವಕವಾಗಿ, ಆಡು ಮಾತಿನಿಂದ ಬೇರೆಯಾದ ಬರೆವಣಿಗೆಯ ಪ್ರಯತ್ನಪಟ್ಟಿರುವುದು ಗೋಚರಕ್ಕೆ ಬರುತ್ತದೆ. ಉಳಿದ ಭಾಗಗಳ ಲೇಖಕರ ಶೈಲಿಯಲ್ಲಿ ಆಯಾ ಪ್ರದೇಶಗಳ

ವಿಶಿಷ್ಟತೆಯ ಸೊಗಸು ಮಿಂಚುವುದನ್ನು ನಾವು ನೋಡಬಹುದು. ಮೈಸೂರು ಪ್ರದೇಶದ ಕನ್ನಡ ಮಾತ್ರ ಶುದ್ಧವಾದುದು, ಉಳಿದ ಭಾಗಗಳಲ್ಲಿ ಬೇರೆ ಬೇರೆ ಭಾಷೆಗಳ ಸಂಪರ್ಕ ಗಳಿಸಿಕೊಂಡಿರುವುದರಿಂದ ಆ ಕನ್ನಡ ಶುದ್ಧವಾದುದಲ್ಲ ಎಂಬ ಒಂದು ಅಭಿಪ್ರಾಯವೂ ಮೊದಲಿನಿಂದ ಬೆಳೆದುಬಂದಿರುವುದು ಗಮನಾರ್ಹ. ೧೮೩೮ರಷ್ಟು ಹಿಂದೆ ಶ್ರೀ ಕೃಷ್ಣಮಾಚಾರ್ಯರೆಂಬುವರು ತಮ್ಮ ವ್ಯಾಕರಣ ಗ್ರಂಥದ ಪೀಠಿಕೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಅಂದಿನ ಗದ್ಯದ ಒಂದು ಮಾದರಿಗಾಗಿಯೂ ಈ ಮಾತುಗಳನ್ನು ನಾವು ಗಮನಿಸಬಹುದು :

"ಕನ್ನಡ ದೇಶದಲ್ಲಿಯೂ ಅಚ್ಚಗನ್ನಡ ಮೈಸೂರು ಪ್ರಾಂತ್ಯದ್ದೇ ಹೊರ್ತು ಕಡಮೆ ಎಲ್ಲಾ ಅಚ್ಚಗನ್ನಡವಲ್ಲವು. ಬೆಂಗಳೂರು ಬಳ್ಳಾರಿ ಮೊದಲಾದ ಶೀಮೆಯೂ ತೆಲುಗು ರಾಜ್ಯದ ಸಮೀಪದಲ್ಲಿರುವದ್ದರಿಂದ ಅಲ್ಲಿಯ ಕನ್ನಡವು ತೆಲುಗು ಕಲೆತುಹೋಯಿತು. ಕೊಯಮುತ್ತೂರು ಶೀಮೆಯು ತಿಗುಳು ರಾಜ್ಯದ ಸಮೀಪದಲ್ಲಿರುವದ್ದರಿಂದಲ್ಲಿ ತಿಗುಳು ಕಲೆತುಹೋಯಿತು. ಮಂಗಳೂರು ಜಿಲ್ಲಾ ಕನ್ನಡವು ಕೊಂಕಣ ಮಲಯಾಳ ತುಳುವ ಭಾಷೆಗಳು ಕಲೆತುಹೋಯಿತು. ಮತ್ತೂ ಆ ದೇಶಗಳಲ್ಲಿ ಪ್ರಬಲವಾದ ಕರ್ಣಾಟಕ ಸಂಸ್ಥಾನವಿಲ್ಲದ್ದರಿಂದ ವಿದ್ವಾಂಸರುಗಳೂ ದುರ್ಲಭವಾಗಿ ಹೋಯಿತು; ಆದ್ದರಿಂದ ಆ ದೇಶಗಳಲ್ಲಿ ಪರಿಶುದ್ಧವಾದ ಕನ್ನಡವಿಲ್ಲದೇ ಹೋಯಿತು."

ವ್ಯಾಕರಣವನ್ನು ಬರೆಯುತ್ತಿದ್ದ ಕೃಷ್ಣಮಾಚಾರ್ಯರು ವ್ಯಾಕರಣದ ನಿಯಮಗಳಿಗೆ ತಮ್ಮ ಬರೆವಣಿಗೆಯಲ್ಲಿ ಅಷ್ಟಾಗಿ ಗಮನಕೊಟ್ಟಂತೆ ಕಾಣುವುದಿಲ್ಲ. ಹೊರ್ತು, ಹ್ಯಾಂಗೆ, ಶೇರಿ, ಉಂಟಾಗಿಯದೆ – ಈ ಮುಂತಾದ ಪ್ರಯೋಗಗಳು ಅವರಲ್ಲಿ ಹೇರಳವಾಗಿ ದೊರೆಯುತ್ತವೆ. ಒಟ್ಟಿನಲ್ಲಿ, ಅದನ್ನು ಓದುವ ಯಾರಿಗಾದರೂ ಇಂದು ನಗೆ ಬರೆಸುವ ಸ್ವಾರಸ್ಯ ಅವರ ಗದ್ಯದಲ್ಲಿ ಕಂಡುಬರುತ್ತದೆ.

ಕಳೆದ ಶತಮಾನದ ಕೊನೆಯ ದಶಕಗಳಲ್ಲಿ ಮುಂಬೈ ಸರ್ಕಾರದ ಶಿಕ್ಷಣ ಖಾತೆಯವರು ಪ್ರಕಟಿಸಿದ Science Primers in Kanarese ಅಥವಾ ಶಾಲಾರಂಭ ಕನ್ನಡ ವಹಿಗಳು ಎಂಬ ಮಾಲೆಯ ಪಠ್ಯಪುಸ್ತಕಗಳು ಕನ್ನಡ

ವೈಜ್ಞಾನಿಕ ಸಾಹಿತ್ಯದಲ್ಲಿ ಗಮನಾರ್ಹವಾದ ಬೆಳವಣಿಗೆಯನ್ನು ಸೂಚಿಸುತ್ತವೆ. ಅವುಗಳಲ್ಲಿ ಬಹುಪಾಲು ಪುಸ್ತಕಗಳು ಮರಾಠಿ, ಇಂಗ್ಲಿಷ್ ಭಾಷೆಗಳಿಂದ ಅನುವಾದಿಸಿದ ಪಠ್ಯಪುಸ್ತಕಗಳಾಗಿವೆ. ಆದರೂ ಅವು ಸ್ವತಂತ್ರ ಕೃತಿಗಳಷ್ಟೇ ಸ್ವಾರಸ್ಯವಾಗಿವೆ; ಸೊಗಸಾಗಿವೆ. ಶಾಸ್ತ್ರೀಯ ಗ್ರಂಥಗಳಿಗೆ ಅಗತ್ಯವಾಗಿ ಬೇಕಾದ ಭಾಷಾ ಸ್ಪಷ್ಟತೆಯೂ, ಸರಳತೆಯೂ ಅವುಗಳ ಶೈಲಿಯಲ್ಲಿ ಕಂಡುಬರುತ್ತವೆ. ಜೊತೆಗೆ ಉತ್ತರ ಕನ್ನಡದ ದೇಶೀಯ ಗಡಸೂ, ಚೆಲುವೂ ಬೆರೆತಿವೆ. ಈ ಗದ್ಯ ಕೃಷ್ಣಮಾಚಾರ್ಯರ ಗದ್ಯಕ್ಕಿಂತ ಬೇರೆಯಾದುದಾಗಿದೆ. ಇವುಗಳಲ್ಲಿ ಗ್ರಾಂಥಿಕತೆ ತಲೆ ಹಾಕಿದ್ದರೂ, ಕೃತಕತೆಯಿಲ್ಲ. ಹೇಳುವ ವಿಷಯ ವಿದ್ಯಾರ್ಥಿಗಳಿಗೆ ನೇರವಾಗಿ ಮುಟ್ಟಬೇಕು; ಸ್ವಾರಸ್ಯವಾಗಿರಬೇಕು ಎನ್ನುವುದು ಗ್ರಂಥಕರ್ತರ ಆಶಯವಾಗಿದೆ. Physics ಎನ್ನುವುದು "ಪದಾರ್ಥ ವಿಜ್ಞಾನ ಶಾಸ್ತ್ರ"ವಾಗಿಯೂ, Zoology ಎನ್ನುವುದು "ಜಂತುಶಾಸ್ತ್ರ" ವಾಗಿಯೂ ಇದ್ದ ಕಾಲ ಅದು. ಸಾರ್ವಜನಿಕರ ಉಪಯೋಗಕ್ಕೆಂದು ಶಾಸ್ತ್ರೀಯ ಗ್ರಂಥಗಳ ರಚನೆ ಮಾಡುವ ಅಗತ್ಯ ಆಗ ಇರಲಿಲ್ಲ. ಏನಿದ್ದರೂ ಅವು ಪಠ್ಯ ಪುಸ್ತಕಗಳು. ಲೇಖಕರ ಎದುರಿಗಿರುತ್ತಿದ್ದವರು ವಿದ್ಯಾರ್ಥಿಗಳು. ೧೮೮೦ರ ವೇಳೆಯ ಭೌತಶಾಸ್ತ್ರ ಗ್ರಂಥದಲ್ಲಿ ಉಷ್ಣಮಾಪಕ ಯಂತ್ರವನ್ನು ವರ್ಣಿಸಿರುವ ರೀತಿಯಿದು:

"ಈ ಉಷ್ಣತಾಮಾಪಕ ಯಂತ್ರದ ಬುಡದಲ್ಲಿ ಪಾರಜ ತುಂಬಿದ್ದೊಂದು ಕಾಜಿನ ಪೊಳ್ಳು ಗೋಲವಿರುತ್ತದೆ. ಅದಕ್ಕೆ ಒಂದು ಉದ್ದವಾದ ಕಾಜಿನ ಕೊಳವೆಯನ್ನು ಹಚ್ಚಿದ್ದಾರೆ. ಆ ಕೊಳವೆಯ ರಂಧ್ರವು ಬಹಳ ಸಣ್ಣದುಂಟು. ಆ ಕೊಳವೆಯ ಮೇಲಿನ ತುದಿಯು ಮುಚ್ಚಿರುತ್ತದೆ. ಗೋಲದೊಳಗಿನ ಪಾರಜವು ಕೊಳವೆಯೊಳಗೆ ಕೆಲವು ಎತ್ತರದವರೆಗೆ ಏರಿದೆ. ಅದರ ಮೇಲಿನ ಪ್ರದೇಶವೆಲ್ಲ ನಿರ್ವಾತವದೆ. ಈ ಕೊಳವೆಯನ್ನು ಒಂದು ಹಿತ್ತಾಳಿಯ ತಗಡಿನ ಮೇಲೆ ಕೂಡ್ರಿಸಿ, ಆ ತಗಡಿನಲ್ಲಿ ಕೊಳವೆಗೆ ಹೊಂದಿ ಸಮಾನಾಂತರವಾಗಿ ಅಡ್ಡ ಗೆರೆಗಳನ್ನು ಕೊರೆದಿದ್ದಾರೆ. ಹತ್ತತ್ತು ಜಿಣುಗು-ಗೆರೆಗಳ ಅಂತರದಿಂದ ಒಂದೊಂದು ಹೆಚ್ಚಿಗೆ ಉದ್ದಾದ ಗೆರೆಯುಂಟು. ಗೋಲದ ಹತ್ತರ ಇರುವ ದೊಡ್ಡ ಗೆರೆಯ ಮೇಲೆ (೦) ಶೂನ್ಯ ಹಾಕಿ

ಮುಂದಿನ ಗೆರೆಗಳ ತುದಿಯಲ್ಲಿ ಕ್ರಮವಾಗಿ ೧೦, ೨೦, ೩೦ ಇತ್ಯಾದಿ ೧೦೦ರವರೆಗೆ ಹಾಕಿದ್ದಾರೆ."

ಸುಮಾರು ಇದೇ ಕಾಲದ ಪ್ರಾಕೃತಿಕ ಭೂಗೋಳ ಶಾಸ್ತ್ರದಲ್ಲಿ ಇಬ್ಬನಿ, ಮಂಜು, ಮೋಡಗಳನ್ನು ಕುರಿತು ಬರೆದಿರುವ ಈ ವಾಕ್ಯಗಳನ್ನು ನೋಡಿ:

"ಆಕಾಶವು ಸ್ವಚ್ಛವಿದ್ದಾಗ ಹೊತ್ತು ಮುಳುಗಿದ ಬಳಿಕ ಹುಲ್ಲಿನ ಮೇಲೆ ಇಬ್ಬನಿಯು ಬೀಳುವದನ್ನು ನೀವು ನೋಡಿರಬಹುದು. ಇದೇ ಪ್ರಕಾರ ಬೆಳಿಗ್ಗೆ ಹೊಳೆಗಳ ಮೇಲೆಯೂ ಗುಡ್ಡಗಳ ಮೇಲೆಯೂ ಒಮ್ಮೊಮ್ಮೆ ಮಂಜು ಕಾಣಿಸುತ್ತಿರುತ್ತದೆ; ಅದನ್ನೂ ನೀವು ನೋಡಿರಬಹುದು. ಆ ಮಂಜು ಹೊತ್ತು ಏರಿದ ಹಾಗೆ ಕರಗುತ್ತ ಹೋಗುತ್ತದೆ. ಮೋಡಗಳು ಬಹುತರ ಸರ್ವಕಾಲವು ಮುಗಿಲಲ್ಲಿ ಕಾಣಿಸುತ್ತಿರುತ್ತವೆ. ಅವು ಕೂಡುವ ದನ್ನೂ, ಒಂದು ಕಡೆಯಲ್ಲಿ ಕರಗಿ ಬೇರೊಂದು ಕಡೆಯಲ್ಲಿ ಮತ್ತೆ ಕೂಡಿ ಕೊಳ್ಳುವುದನ್ನೂ, ಅವುಗಳ ಆಕಾರ ಪರಿಮಾಣಗಳು ಆಗಾಗ್ಗೆ ಬದಲಾಗು ವದನ್ನೂ ನೀವು ಬೇಕಾದಾಗ ಪರೀಕ್ಷಿಸಿ ನೋಡಬಹುದು. ಇವೆಲ್ಲ ಘನೀ ಭೂತವಾದ ಉಗಿಯ ಉದಾಹರಣೆಗಳು. ಈ ಘನೀಭವನದ ವ್ಯಾಪಾರವು ಹ್ಯಾಗೆ ನಡೆಯುತ್ತದೆಂಬುದನ್ನು ಇನ್ನು ನೋಡುವ."

೧೮೯೦ರ "ಅರ್ಥಶಾಸ್ತ್ರದ ಮೂಲ ತತ್ತ್ವಗಳು" ಗ್ರಂಥದಲ್ಲಿ ಹಣದ ಸ್ವರೂಪವನ್ನು ಹೇಳುವ ಈ ಕೆಲವು ವಾಕ್ಯಗಳನ್ನು ಗಮನಿಸಿ:

"ಹಣವೆಂದು ಗೊತ್ತುಮಾಡಲ್ಪಟ್ಟ ಪದಾರ್ಥವು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸುಲಭವಾಗಿ ವೈಯುವುದಕ್ಕೆ ಬರುವ ಹಾಗಿರ ಬೇಕೆಂಬುವದು ಸ್ಪಷ್ಟವದೆ. ಕಟ್ಟಿಗೆ ಕಬ್ಬಿಣ ಮೊದಲಾದವುಗಳು ಸ್ವಲ್ಪ ಸ್ಥಳವನ್ನು ವ್ಯಾಪಿಸಿ, ಬಹಳ ಬೆಲೆ ಬಾಳುವಂಥ ಪದಾರ್ಥಗಳಲ್ಲ. ಇಂಥಾ ದ್ದೊಂದು ಪದಾರ್ಥವನ್ನು ಹಣವಾಗಿ ಉಪಯೋಗಿಸಿದರೆ ಅದರಿಂದ ಅದಲು ಬದಲಿನಿಂದ ಉಂಟಾಗುವಷ್ಟೇ ತೊಂದರೆಯಾಗಬಹುದು. ಇಂಥ ಪದಾರ್ಥವನ್ನು ಹಣವಾಗಿ ಉಪಯೋಗಿಸಿದ್ದಾದರೆ, ಸಣ್ಣ ಸಣ್ಣ ಖರೀದಿ ಗಳನ್ನು ಮಾಡಬೇಕಾದಾಗ್ಯೂ ಸಂಗಡ ಹಣವನ್ನು ವೈಯುವದಕ್ಕೆ

ಎತ್ತುಗಳೂ ಬಂಡಿಗಳೂ ಬೇಕಾಗುವವು. ಇದರಿಂದ ಸಿದ್ಧವಾಗುವುದೇನೆಂದರೆ, ಭಂಗಾರ ಇಲ್ಲವೇ ಬೆಳ್ಳಿಯನ್ನೇ ಹಣವಾಗಿ ಉಪಯೋಗಿಸಬೇಕೆಂಬುವದು ಅವಶ್ಯವಿಲ್ಲದಿದ್ದಾಗ್ಯೂ ಬೆಲೆಯ ಪರಿಣಾಮವಾಗಿಯೂ, ವಿನಿಮಯದ ಸಾಧನವಾಗಿಯೂ ಉಪಯೋಗಿಸಲ್ಪಡುವ ಪದಾರ್ಥದಲ್ಲಿ ಇರಲವಶ್ಯವಾದ ಯಾವತ್ತೂ ಗುಣಗಳು ಈ ಎರಡು ಧಾತುಗಳಲ್ಲಿ ವಿಲಕ್ಷಣವಾಗಿ ಒಟ್ಟುಗೂಡಿರುವದರಿಂದ ಸುಧಾರಿಸಿದ ರಾಷ್ಟ್ರಗಳಲ್ಲೆಲ್ಲ ವಾಡಿಕೆಯಾಗಿ ಈ ಧಾತುವನ್ನೇ ಉಪಯೋಗಿಸುತ್ತಾರೆ."

ಹತ್ತು ವರ್ಷಗಳ ನಂತರ ೧೯೧೦ರಲ್ಲಿ ಎಚ್. ವಿ. ನಂಜುಂಡಯ್ಯನವರು ರಚಿಸಿದ 'ಐಶ್ವರ್ಯ ಸಾಧಕ'ಗಳ ವಿಷಯವಾದ "ಅರ್ಥಶಾಸ್ತ್ರ" ಗ್ರಂಥದಲ್ಲಿ ಇದೇ ಭಾಗಕ್ಕೆ ಸಂಬಂಧಿಸಿದ ಕೆಲವು ವಾಕ್ಯಗಳನ್ನು ನೋಡೋಣ :

"ಧಾನ್ಯವನ್ನು ಹಣದ ಕೆಲಸಕ್ಕೋಸ್ಕರ ಉಪಯೋಗಿಸುತ್ತಿದ್ದರೆ, ನೂರು ರೂಪಾಯನ್ನು ಕೊಡಬೇಕಾದರೆ ಮೂರು ನಾಲ್ಕು ಬಂಡಿಯಲ್ಲಿ ಅದನ್ನು ಹೇರಿಕೊಂಡು ಹೋಗಬೇಕು. ರೂಪಾಯನ್ನಾದರೆ ಜೋಬಿನಲ್ಲಿ ಹಾಕಿಕೊಂಡು ಹೋಗಬಹುದು. ಬೆಂಗಳೂರಿಂದ ಮದ್ರಾಸಿಗೆ ನೂರು ರೂಪಾಯನ್ನು ತೆಗೆದುಕೊಂಡು ಹೋದರೆ, ಇದಕ್ಕೆ ಒಂದು ರೂಪಾಯಿನೊಳಗಾಗಿ ಖರ್ಚಾಗಬಹುದು. ನಾಲ್ಕು ಬಂಡಿ ಧಾನ್ಯವನ್ನು ಹೊರಬೇಕಾದರೆ ಪದಾರ್ಥದ ಬೆಲೆಯಷ್ಟು ಖರ್ಚು ಮಾಡಬೇಕಾಗಬಹುದು. ಚಿನ್ನ ಬೆಳ್ಳಿಗೆ ಬದಲಾಗಿ ವಜ್ರಗಳನ್ನು ಉಪಯೋಗಿಸಿದರೆ ಇವು ಆತುರದಲ್ಲಿ ಬಹು ಸೂಕ್ಷ್ಮವಾಗಿರುವುದರಿಂದ, ಕೈಲಿ ನಿಲ್ಲದೆ ಬಹುಬೇಗ ಕಳೆದುಹೋಗಬಹುದು. ಒಂದು ಕಾಸನ್ನು ಕೊಡಬೇಕಾದಾಗ, ತಾಮ್ರದ ನಾಣ್ಯವಿಲ್ಲದೆ ಬೆಳ್ಳಿಯಲ್ಲಿಯೇ ಕೊಡಬೇಕಾದರೆ ಕಾಸಿನ ಬೆಳ್ಳಿಯು ಕೈಗೆ ಸಿಕ್ಕಲಾರದು ; ಚಿನ್ನವೊಂದೇ ನಾಣ್ಯವಾದರೆ ಕಾಸಿನ ಚಿನ್ನವು ಕಣ್ಣಿಗೇ ಕಾಣಿಸಲಾರದು."

ಇದನ್ನೆ ಕುರಿತು ಮೂವತ್ತೇಳು ವರ್ಷಗಳ ನಂತರ, ಹೊಸಗನ್ನಡ ಗದ್ಯ ನಿರ್ಮಾಪಕರಲ್ಲಿ ಒಬ್ಬರಾದ ವಿ. ಸೀ. ಅವರು ಬರೆದಿರುವುದು ಇದು :

"ಮೂಲತಃ ಜನಜೀವನಕ್ಕೆ ಬೇಕಾದ ಎಲ್ಲ ಪದಾರ್ಥ, ಶಕ್ತಿ, ಅನುಕೂಲ, ಸೇವಾಸೌಕರ್ಯ ಸೇರಿ ಧನವೆನಿಸಿಕೊಳ್ಳುವುದು. ಆದರೂ, ಸಾಮಾನ್ಯವಾಗಿ ಯಾವ ಪದಾರ್ಥದ ಪ್ರಭಾವದಿಂದ ಇತರ ಎಲ್ಲ ಪದಾರ್ಥಗಳನ್ನು ಪಡೆಯುವ ಅಧಿಕಾರವೂ ಸೌಲಭ್ಯವೂ ದೊರೆಯುವುವೋ, ಯಾವ ವಸ್ತುಗಳಿದ್ದರೆ ವ್ಯಕ್ತಿಯ ಮತ್ತು ಕುಟುಂಬದ ಸುಖ, ಸೌಕರ್ಯ, ಶಕ್ತಿ, ಪುಷ್ಟಿ, ಪ್ರತಿಷ್ಠೆ ಉಂಟಾಗುವುವೋ ಆ ಎಲ್ಲ ವಸ್ತು ನೆರವುಗಳ ಸಮುದಾಯಕ್ಕೆ ಧನ ಎನ್ನುವುದು ವಾಡಿಕೆ. ವಸ್ತುಗಳ ಬೆಲೆಯನ್ನು ಅಳೆದು ಎಲ್ಲವನ್ನೂ ಬೇಕು ಬೇಕಾದಂತೆ ಸಂಗ್ರಹಿಸಬಲ್ಲ ಧನದ ಪ್ರತಿನಿಧಿ—ಹಣ. ಹಣವೆಂದರೆ ಮೂಲತಃ ಯಾವುದಾದರೊಂದು ರಾಜ್ಯದಲ್ಲಿ ಅಲ್ಲಿನ ಅಧಿಕಾರಿಗಳು ತಮ್ಮ ಮುದ್ರೆ ಒತ್ತಿ ಬಳಕೆಗೆ ತರುವ ಒಂದು ಬಗೆಯ ಪದಾರ್ಥ ವಿಶೇಷ. ಎಲ್ಲ ಲೆಕ್ಕ ಅದರ ಎಣಿಕೆಯಲ್ಲಿ ನಡೆಯುವುದು. ಕೊಳ್ಳುವುದು, ಕೊಡುವುದು, ವೆಚ್ಚಮಾಡುವುದು, ಕೂಡಿಡುವುದು, ಹಂಚುವುದು ಎಲ್ಲವೂ ಹಣದ ಮೂಲಕವೇ."

ಲಲಿತ ಸಾಹಿತ್ಯ ನಿರ್ಮಾಣದಲ್ಲಿ ಹಳೆಯ ಮೈಸೂರು ಪ್ರದೇಶದಲ್ಲಿ ವೆಂಕಟಾಚಾರ್ಯರೂ, ಪುಟ್ಟಣ್ಣನವರೂ, ಮಂಗಳೂರು ಕಡೆ ಪಂಜೆ ಮಂಗೇಶರಾಯರೂ, ಉತ್ತರ ಕರ್ಣಾಟಕದಲ್ಲಿ ವಾಸುದೇವಾಚಾರ್ಯರೂ, ಗಳಗನಾಥರೂ ತೊಡಗಿದ್ದಂತೆಯೇ ವೈಜ್ಞಾನಿಕ ಸಾಹಿತ್ಯದ ಗದ್ಯವೂ ವಿಕಸಿಸುತ್ತಲೇ ಇತ್ತು. ಕನ್ನಡದಲ್ಲಿ ಏನಿದೆಯೆಂದು ಮೂಗು ಮುರಿಯುತ್ತಿದ್ದ ಕಾಲದಲ್ಲಿಯೇ ತಾಯ್ನುಡಿಯ ಮೋಹ ಕೆಲವರನ್ನಾದರೂ ಈ ಬಗೆಯ ಕೆಲಸದಲ್ಲಿ ತೊಡಗಿಸಿತು. ಮೇಲೆ ನಾವು ನೋಡಿದ ಕೆಲವು ಉದಾಹರಣೆಗಳಿಂದ ಕನ್ನಡದ ಶಾಸ್ತ್ರೀಯ ಸಾಹಿತ್ಯದ ಗದ್ಯವು ಶಿಥಿಲತೆಯಿಂದ ಬಿಗಿಯ ಕಡೆಗೆ ನಡೆಯುತ್ತಿರುವುದು ಸುಸ್ಪಷ್ಟವಾಗಿ ಗೋಚರಿಸುತ್ತದೆ. ವಿಷಯ ಪ್ರತಿಪಾದನೆಯಲ್ಲಿ ತೊಡಗಿದವರು ಆಯಾ ವಿಷಯಗಳನ್ನು ಮೊದಲು ಚೆನ್ನಾಗಿ ಅರ್ಥ ಮಾಡಿಕೊಂಡು ಆಮೇಲೆ ಬರೆವಣಿಗೆಗೆ ಇಳಿದಿರುವುದು ಕಂಡುಬರುತ್ತದೆ. ತನಗೇ ವಿಷಯ ಸ್ಪಷ್ಟವಾಗದ ಲೇಖಕ ಬೇರೆಯವರಿಗೆ ಏನನ್ನು ತಾನೆ ತಿಳಿಸಿಯಾನು ?

ಆರಂಭ ಕಾಲದ ಈ ಗದ್ಯಶೈಲಿಯಲ್ಲಿ ಹಲವು ಬಗೆಯ ರೂಪಗಳು

ಹೊಯ್ದಾಡುತ್ತಿರುವಂತೆ ಕಂಡುಬರುತ್ತದೆ. ಶುದ್ಧವಾದ ಪ್ರೌಢ ಶೈಲಿಯಲ್ಲಿ ಶಿಥಿಲವಾದ ಅಶುದ್ಧ ದೇಶೀ ಸೇರುತ್ತದೆ. ಸಂಸ್ಕೃತ ಭೂಯಿಷ್ಠತೆಯೊಂದಿಗೆ ಸರಳ ಕನ್ನಡವು ಕೂಡಿಕೊಳ್ಳುತ್ತದೆ. ಶಾಸ್ತ್ರೀಯ ಗದ್ಯದ ವಿಕಾಸದಲ್ಲಿ ಬರಬರುತ್ತಾ ಈ ದೋಷಗಳು ಮರೆಯಾಗುತ್ತಾ ಹೋಗಿವೆ. ಕನ್ನಡ ಸಂಸ್ಕೃತ ಹಾಳತವಾಗಿ ಸೇರಿಕೊಂಡವು. ಇಂಗ್ಲಿಷಿನ ಪ್ರಭಾವದಿಂದ ವಾಕ್ಯರಚನೆಯಲ್ಲಿ ಹೊಸ ರೀತಿ, ಮಾರ್ಪಾಡು, ಬಿಗಿ ಇವು ಕಾಣಿಸಿಕೊಂಡವು. ಬೇರೆ ಬೇರೆ ಭಾಗಗಳ ಲೇಖಕರು ತಮ್ಮ ಪ್ರಾಂತದ 'ದೇಶಿ'ಯನ್ನು ತಮಗೆ ಸರಿಕಂಡ ರೀತಿಯಲ್ಲಿ ಸಂಸ್ಕರಿಸಿ ಉಪಯೋಗಿಸುವುದೇ ಉತ್ತಮವೆಂದು ನಂಬಿದ್ದರೂ ಆ ಶೈಲಿ ಕನ್ನಡದ ಪ್ರಮಾಣಭೂತವಾದ ಶೈಲಿಯ ಕಡೆಗೇ ವಾಲುತ್ತಾ ಹೋಗಿರುವುದನ್ನು ಗಮನಿಸಬಹುದಾಗಿದೆ.

೪

ಶಾಸ್ತ್ರೀಯ ವಿಚಾರಗಳನ್ನು ಪ್ರತಿಪಾದಿಸುವ ಶೈಲಿಗೆ ಅಲಂಕಾರದ ಬೆಡಗು, ಬಣ್ಣ ಇರಬೇಕಾದುದಿಲ್ಲ. ಅದಕ್ಕೆ ಬೇಕಾದುದು ಸ್ಪಷ್ಟತೆ, ನಿಷ್ಕೃಷ್ಟತೆ, ಖಚಿತತೆ. ಆಧುನಿಕ ಭಾರತೀಯ ಭಾಷೆಗಳಲ್ಲಿಯೇ ಗದ್ಯ ಈಚಿನದು. ಮೊದಲು ಅದರ ಉಪಯೋಗವಾದದ್ದು ಲಲಿತ ಸಾಹಿತ್ಯದಲ್ಲಿಯೇ. ಆಮೇಲೆ ವಿರಳವಾಗಿ ಸಾಹಿತ್ಯ ಕಲೆಗಳಿಗೆ ಸಂಬಂಧಿಸಿದ ವಿಚಾರಗಳನ್ನು, ಸಮಾಜ ವಿಜ್ಞಾನದ ವಿಷಯಗಳನ್ನು ಕುರಿತು ಗ್ರಂಥಗಳು ಪ್ರಕಟವಾಗ ತೊಡಗಿದವು. ಶುದ್ಧವಿಜ್ಞಾನ (Pure science) ವನ್ನು ಕುರಿತ ಗ್ರಂಥಗಳು ಮೊದಲಿನಿಂದಲೂ ಕಡಮೆಯೇ. ಅವನ್ನು ವಿಲಾಸಕ್ಕಾಗಿ ಯಾರೂ ಓದರು. ಶಾಲಾ ಕಾಲೇಜುಗಳಲ್ಲಿ ಓದಬೇಕಾದವರಿಗೆ ಬೇರೆ ಭಾಷೆಯ ಪುಸ್ತಕಗಳಿದ್ದವು. ಆದುದರಿಂದ ಕನ್ನಡದಲ್ಲಿ ಅಂಥ ಗ್ರಂಥಗಳನ್ನು ರಚಿಸುವುದೂ, ಪ್ರಕಟಿಸುವುದೂ ಲಾಭದಾಯಕವಾಗಿರಲಿಲ್ಲ; ಕೆಲವು ಸಂದರ್ಭಗಳಲ್ಲಿ ಉಪಯೋಗ ರಹಿತವಾಗಿದ್ದರೂ ಆಶ್ಚರ್ಯವಿಲ್ಲ. ಆದರೂ ಅಲ್ಲೊಬ್ಬರು ಇಲ್ಲೊಬ್ಬರು ಈ ಕೆಲಸವನ್ನು ಮಾಡುತ್ತಲೇ ಬಂದಿದ್ದಾರೆ. ಹಾಗೆ ಕೆಲವರಾದರೂ ಸಮರ್ಥರಾದವರು ಆ ಕೆಲಸ ಮಾಡಿದ್ದರಿಂದಲೇ ಇವತ್ತು ಕನ್ನಡಗದ್ಯ ಯಾವುದೇ ವಿಷಯವನ್ನಾದರೂ ಸಮರ್ಥವಾಗಿ ಪ್ರತಿಪಾದಿಸಲು ಶಕ್ತಿಯನ್ನು ಸಂಪಾದಿಸಿ

ಕೊಂಡಿದೆ. ಬೆಳ್ಳಾವೆ ವೆಂಕಟನಾರಣಪ್ಪನವರು ಪ್ರಕಟಿಸಿದ "ವಿಜ್ಞಾನ" ಪತ್ರಿಕೆಯನ್ನು ನಾವು ಇವತ್ತು ಹೆಮ್ಮೆಯಿಂದ ಸ್ಮರಿಸಿಕೊಳ್ಳಬೇಕು. ಸರ್ಕಾರದ, ವಿಶ್ವವಿದ್ಯಾನಿಲಯದ ನೆರವು ಪ್ರೋತ್ಸಾಹಗಳು ಲಭಿಸುತ್ತಿದ್ದರೂ ಇಂದು ವಿಜ್ಞಾನಕ್ಕೇ ಮೀಸಲಾದ ಪತ್ರಿಕೆ ಒಂದೂ ನಮ್ಮಲ್ಲಿಲ್ಲ ಎನ್ನುವುದನ್ನು ಗಮನಿಸಿದರೆ, ನಮ್ಮ ಹಿಂದಿನವರು ಮಾಡಿದ ಮಹತ್ಕಾರ್ಯದ ಅರಿವು ನಮಗಾಗುತ್ತದೆ. ವಿಷಯ ತಿಳಿದವರಿಗೆ ಅದರ ಪ್ರತಿಪಾದನೆಯಲ್ಲಿ ಭಾಷೆ ಅಡ್ಡ ಬರುವುದಿಲ್ಲ ಎಂಬುದನ್ನು ಅವರು ಬಹಳ ಹಿಂದೆಯೇ ತೋರಿಸಿಕೊಟ್ಟರು.

ಅಣು-ಪರಮಾಣುಗಳಿಗಿರುವ ವ್ಯತ್ಯಾಸವನ್ನು ಜೆ. ಆರ್. ಲಕ್ಷ್ಮಣರಾಯರು ಹೀಗೆ ವಿವರಿಸಿದ್ದಾರೆ:

"ಒಂದು ಮೂಲ ವಸ್ತುವನ್ನೇ ಆಗಲಿ ಸಂಯುಕ್ತ ವಸ್ತುವನ್ನೇ ಆಗಲಿ ಚಿಕ್ಕದಾಗಿ ಭಾಗಮಾಡುತ್ತಾ ಹೋದರೆ, ನಮಗೆ ದೊರಕುವ ಕನಿಷ್ಠವಾದ ಕಣ ಪರಮಾಣುವಲ್ಲ; ಅಣು. ಅಣುಗಳು ರಾಸಾಯನಿಕ ಪರಿವರ್ತನೆ ಗಳಲ್ಲಿ ವಿನಾ ಇತರ ಸಾಮಾನ್ಯವಾದ ಯಾವ ಸಂದರ್ಭದಲ್ಲೂ ಭಾಗ ವಾಗುವುದಿಲ್ಲ. ರಾಸಾಯನಿಕ ಪರಿವರ್ತನೆಗಳಲ್ಲಿ ಮಾತ್ರ ಅಣುಗಳು ವಿಭಾಗವಾಗಿ, ಅವುಗಳಲ್ಲಿರುವ ಪರಮಾಣುಗಳು ಉಪಯೋಗವಾಗುವುವು. ಮೂಲ ವಸ್ತುವಿನ ಅಣು ವಿಭಾಗವಾದಾಗ ದೊರೆಯುವುದು, ಬರೀ ಆ ಮೂಲ ವಸ್ತುವಿನ ಪರಮಾಣುಗಳು. ಸಂಯುಕ್ತ ವಸ್ತುವಿನ ಅಣು ವಿಭಾಗವಾದಾಗ ದೊರೆಯುವುದು ಬೇರೆ ಬೇರೆ ಮೂಲ ವಸ್ತುಗಳ ಪರಮಾಣುಗಳು. ಆದುದರಿಂದ ಪರಮಾಣು ಶಬ್ದವು ಮೂಲ ವಸ್ತುಗಳಿಗೆ ಅನ್ವಯಿಸುವುದೇ ಹೊರತು ಸಂಯುಕ್ತ ವಸ್ತುಗಳಿಗೆ ಅನ್ವಯಿಸುವುದಿಲ್ಲ. ಅಣುಗಳನ್ನು ಮಾತ್ರ ನಾವು ಮೂಲ ವಸ್ತುಗಳಲ್ಲಿಯೂ ಕಾಣಬಹುದು; ಸಂಯುಕ್ತ ವಸ್ತುಗಳಲ್ಲಿಯೂ ಕಾಣಬಹುದು. ಎರಡು ಅನಿಲಗಳನ್ನು ಸಮಗಾತ್ರದಲ್ಲಿ ಅಳೆದುಕೊಂಡರೆ ಅವುಗಳಲ್ಲಿ ನಮಗೆ ದೊರಕುವ ಅಣು ಗಳ ಸಂಖ್ಯೆ ಸಮವೇ ಹೊರತು, ಪರಮಾಣುಗಳ ಸಂಖ್ಯೆ ಸಮವಲ್ಲ."

ಧೂಮಕೇತುಗಳನ್ನು ಕುರಿತು ಆರ್. ಎಲ್. ನರಸಿಂಹಯ್ಯನವರು ಬರೆದಿರುವುದು ಇದು:

"ಧೂಮಕೇತುಗಳು ಸೂರ್ಯನ ಪರಿವಾರಕ್ಕೆ ಸೇರಿದ ಕಾಯಗಳಾದರೂ ಅವು ಪ್ರಾಯಶಃ ಆಗಂತುಕ ಕಾಯಗಳಿರಬೇಕು ಎಂದು ಲಪ್ಲಾಸನ ವಾದ. ಧೂಮಕೇತುಗಳ ಪಥಗಳೆಲ್ಲ ಅಧಿಕ ವಿಕೇಂದ್ರೀಯ ದೀರ್ಘ ವೃತ್ತಗಳು, ಕೆಲವಂತೂ ಪರವಲಯಗಳಾಗಿ ತೋರಿವೆ. ಆದರೆ ಅತಿ ಪರವಲಯದ ಪಥದ ಒಂದು ಧೂಮಕೇತವೂ ವೀಕ್ಷಣೆಗೆ ಸಿಕ್ಕಿಲ್ಲ. ಧೂಮಕೇತುಗಳು ಸೌರವ್ಯೂಹದ ಹೊರಗಡೆಯಿಂದ ಬಂದಿದ್ದರೆ ಒಂದೆರಡರ ಪಥಗಳಾದರೂ ಅತಿ ಪರವಲಯಗಳಾಗಿರುತ್ತಿದ್ದುವು. ಆದಕಾರಣ ಲಪ್ಲಾಸನ ವಾದ ಸರಿಯಲ್ಲ. ಅನೇಕ ಧೂಮಕೇತುಗಳನ್ನು ಗುರು ಗ್ರಹವು ಅವರ ಪ್ರಬಲವಾದ ಗುರುತ್ವಾಕರ್ಷಣ ಬಲದಿಂದ ಸೆರೆ ಹಿಡಿದಿದೆ. ಅಂಥವುಗಳ ಪಥಗಳ ಒಂದು ನಾಭಿ ಸೂರ್ಯ, ಮತ್ತೊಂದು ಗುರುಪಥದಲ್ಲೊಂದು ಬಿಂದು ಆಗಿವೆ. ಸುಮಾರು ೨೫ ಧೂಮಕೇತುಗಳ ಪಥಗಳು ಮಾತ್ರ ೩ ರಿಂದ ೬೫ ವರ್ಷಗಳ ಪ್ರದಕ್ಷಿಣ ಕಾಲಗಳೊಳಗಿವೆ. ಸುಮಾರು ೪೫ ರ ಪಥಗಳು ಎಷ್ಟು ದೀರ್ಘ ವೃತ್ತಗಳೆಂಬುದು, ಅವುಗಳ ಪ್ರದಕ್ಷಿಣ ಕಾಲ ಸಾವಿರ ವರ್ಷಕ್ಕಿಂತ ಹೆಚ್ಚಿಗೆ ಎಂಬುದರಿಂದ ತಿಳಿಯುತ್ತದೆ. ಧೂಮಕೇತುಗಳು ಸಣ್ಣ ಸಣ್ಣ ಕಣಗಳ ವಿರಳ ವ್ಯೂಹಗಳಾದ್ದರಿಂದ ಅವು ಪದಚ್ಯುತವಾಗುವುದು ಬಹಳ ಸುಲಭ. ಆದ್ದರಿಂದ ನಿಷ್ಕೃಷ್ಟವಾಗಿ ಪಥ ನಿರ್ಣಯವಾದ ಮೇಲೂ ಧೂಮಕೇತುವು ಸಕಾಲಕ್ಕೆ ಹಿಂದಿರುಗಿ ನಮಗೆ ದರ್ಶನ ಕೊಡುತ್ತದೆಂಬ ಭರವಸೆಯಿಲ್ಲ."

ಆಲೋಚನೆ ಎಂದರೆ ಏನು ಎಂಬುದನ್ನು ಕುರಿತು ಜಿ. ಹನುಮಂತರಾಯರು ಬರೆದಿರುವುದು ಇದು:

"ನಾವು ಆಲೋಚಿಸಿದಲ್ಲದೆ ನಮಗೆ ಜ್ಞಾನ ಉಂಟಾಗುವುದಿಲ್ಲ.... ಆಲೋಚನೆ ಎಂಬ ಪದವನ್ನು ನಾವು ಅನೇಕ ಅರ್ಥಗಳಲ್ಲಿ ಬಳಸುತ್ತೇವೆ. ನಮ್ಮ ಮನಸ್ಸಿಗೆ ಹೊಳೆಯುವ ಅಥವಾ ಮನಸ್ಸಿನಲ್ಲಿ ಹಾದುಹೋಗುವ ವ್ಯಾಪಾರಗಳೆಲ್ಲ ಆಲೋಚನೆಗಳೆಂದು ಹೇಳುತ್ತೇವೆ. ಈ ಆಲೋಚನೆಗಳು ಹಗಲುಗನಸುಗಳಾಗಿರಬಹುದು, ಕಲ್ಪನೆಗಳಾಗಿರಬಹುದು, ಗೊತ್ತುಗುರಿಯಿಲ್ಲದ ಭಾವನೆಗಳ ಪರಂಪರೆಯಾಗಿರಬಹುದು. ಮಾನಸಿಕ ಕ್ರಿಯೆಗಳ

ನ್ನೆಲ್ಲ ಆಲೋಚನೆ ಎಂದು ಹೇಳಿದಾಗ ಅದಕ್ಕೆ ನಿರ್ದಿಷ್ಟವಾದ ಸ್ಪಷ್ಟವಾದ ಅರ್ಥವಿಲ್ಲ. ನಮಗೆ ಸಾದೃಶ್ಯವಾಗಿ ಗೋಚರವಾಗದ, ನಮ್ಮ ಕಣ್ಣಿಗೆ ಕಾಣದ ವಿಚಾರಗಳನ್ನು ತಿಳಿಯುವುದು ಆಲೋಚನೆ ಎಂದು ಹೇಳುವುದುಂಟು. ಇದು ಆಲೋಚನೆಯ ಎರಡನೆಯ ಅರ್ಥ. ನಾವು ಯಾವುದನ್ನು ನಂಬುತ್ತೇವೆಯೋ ಅದು ನಮ್ಮ ಆಲೋಚನೆ ಎಂಬುದು ಮೂರನೆ ಅರ್ಥ. ನಾವು ನಂಬಿದ್ದು ಆಧಾರ ಇಲ್ಲದ್ದೂ, ಪರೀಕ್ಷೆ ಮಾಡದ್ದೂ ಆಗಿರಬಹುದು. ಅಥವಾ ಸಕಾರಣವಾಗಿ ವಿಚಾರಮಾಡಿ ನಿಶ್ಚಯಿಸಿದ್ದಾಗಬಹುದು. ಒಬ್ಬನು ಕರಿಯಪ್ಪ ಕಳ್ಳ ಎಂದು ನಂಬಬಹುದು. ಅದು ಹೇಗೆ ಎಂದು ಕೇಳಿದಾಗ ಅವನು "ಇವನನ್ನು ಕಂಡರೆ ನನಗೆ ಹಾಗೆ ಅನ್ನಿಸುತ್ತದೆ" ಎಂದು ಉತ್ತರ ಕೊಡಬಹುದು. ಅಥವಾ "ಇಲ್ಲಿ ಒಡೆದು ತೆಗೆದ ಕಿಟಕಿಯ ಮೇಲಿರುವ ಹೆಬ್ಬೆಟ್ಟಿನ ಗುರುತು ಇವನದೇ. ಇಲ್ಲಿ ಹೆಜ್ಜೆಯಲ್ಲಿ ಕಾಣುವ ಲಾಳದ ಗುರುತು ಇವನ ಜೋಡಿಗೆ ಕಟ್ಟಿರುವ ಲಾಳದ ಗುರುತು ಒಂದೇ. ಆದ್ದರಿಂದ ಇವನೇ ಕಳ್ಳ." ಎಂದು ಹೇಳಬಹುದು. ಮೊದಲನೆಯ ನಂಬಿಕೆ ಸರಿಯಾದ ಕಾರಣವಿಲ್ಲದ್ದು ; ಎರಡನೆಯದು ಸರಿಯಾದ ಆಧಾರ ಉಳ್ಳದ್ದು. ತರ್ಕಶಾಸ್ತ್ರ ವಿಚಾರಮಾಡುವ ನಂಬಿಕೆಗಳು ಹೀಗೆ ಆಧಾರಯುತವಾದುವು ; ಸರಿಯಾದ ಕಾರಣ ಉಳ್ಳವು ; ಸದ್-ಹೇತು ಉಳ್ಳವು. ತರ್ಕಶಾಸ್ತ್ರದಲ್ಲಿ ನಾವು ಯೋಚನೆ ಎಂಬ ಪದವನ್ನು ಉಪಯೋಗಿಸುವುದು ಸರಿಯಾದ ಕಾರಣವುಳ್ಳ ನಂಬಿಕೆಗಳು ಎಂಬ ಅರ್ಥದಲ್ಲಿ. ನ್ಯಾಯಬದ್ಧವಾದ ನಂಬಿಕೆಗಳಿಗೆ ಕಾರ್ಯಕಾರಣ ಸಂಬಂಧ, ಆಧಾರ-ಆಧೇಯ ಸಂಬಂಧ, ಗುಣ-ಗುಣಿ ಸಂಬಂಧ, ಅವಯವ-ಅವಯವಿ ಸಂಬಂಧ ಮುಂತಾದವು ತಳಹದಿಯಾಗಿವೆ."

卐

ಮೇಲಿನ ಮೂರೂ ಉದಾಹರಣೆಗಳು ಹೇಗೆ ಇಂದಿನ ಗದ್ಯ ಶಕ್ತಿಯುತವಾಗಿ, ವೈಜ್ಞಾನಿಕ ವಿಚಾರಗಳಿಗೆ, ಶಾಸ್ತ್ರೀಯ ವಿವೇಚನೆಗೆ ಅಳವಡಬಲ್ಲದೆಂಬುದನ್ನು ತೋರಿಸುತ್ತವೆ. ಮೊದಲನೆಯದರಲ್ಲಿ ಅಣು-ಪರಮಾಣುಗಳಿಗಿರುವ ಸೂಕ್ಷ್ಮ ವ್ಯತ್ಯಾಸವನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಎರಡನೆಯದ

ರಲ್ಲಿ ಧೂಮಕೇತುವಿನ ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ. ಕೊನೆಯುಪರಲ್ಲಿ ಆಲೋಚನೆಯೆಂಬ ಅಸ್ಪಷ್ಟ ಭಾವವನ್ನು ಸೋದಾಹರಣವಾಗಿ ವಿವರಿಸಲಾಗಿದೆ. ಪಾರಿಭಾಷಿಕ ಭಾಷೆಗೆ ಸಂಬಂಧಿಸಿದಂತೆ ಕನ್ನಡಕ್ಕೆ ಸಂಸ್ಕೃತದ ಅವಲಂಬನವಿರುವುದರಿಂದ ಈ ಕೆಲಸ ಸುಲಭವಾಗಿವೆ; ಸಮರ್ಥವಾಗಿದೆ. ಸಂಸ್ಕೃತವನ್ನು ಎಷ್ಟರಮಟ್ಟಿಗೆ ಹಾಕತವಾಗಿ ಉಪಯೋಗಿಸಿಕೊಳ್ಳಬೇಕು ಎಂಬುದು ಲೇಖಕರ ವಿವೇಚನೆಗೆ ಸಂಬಂಧಿಸಿದ ವಿಚಾರವಾಗಿದೆ. ಕನ್ಯಾವಜ್ರ, ಕನ್ಯಾವಕುಂಠನ, ಜ್ಯೋತಿರ್ನೀಘೆ, ಕೃಷ್ಣತಾರೆ ಇಂಥ ಪದಗಳನ್ನು ಕನ್ನಡದಲ್ಲಿ ಕಂಡು ಕೆಲವರು ಬೆಚ್ಚಿಬೀಳುತ್ತಾರೆ. ಆದರೆ ವಾಸ್ತವವಾಗಿ ಅವು ಮೂಲದಲ್ಲಿ Diamond of Virgin, Bridal Veil, Nebula, Dark star ಎಂಬುದಾಗಿಯೇ ಇವೆ. ಈ ಪ್ರಯೋಗಗಳನ್ನು ಕುರಿತು ಟೀಕೆ ಮಾಡುವವರು "ಹೊಸ ಮಾದರಿಯ ಬಾಲಕಿಯರ ಪಾಠಶಾಲೆ" ಎಂದರೆ ಹಾಸ್ಯ ಮಾಡುತ್ತಾರೆ. "New type girls' school" ಎಂಬುದನ್ನು ಅವರು ಗಮನಿಸಿರುವುದಿಲ್ಲ !

ಶಾಸ್ತ್ರೀಯ ಗ್ರಂಥಗಳ ಗದ್ಯದ ಪ್ರಮುಖ ಸಮಸ್ಯೆಯೆಂದರೆ ಈ ಪಾರಿಭಾಷಿಕ ಪದಗಳದೇ. ಅಖಿಲ ಭಾರತ ಮಟ್ಟದಲ್ಲಿ ಒಂದು ವ್ಯವಸ್ಥೆ ಪ್ರಭಾವಪೂರ್ಣವಾಗಿ, ಅಂಗೀಕಾರಾರ್ಹವಾಗಿ ನಡೆಯುವವರೆಗೂ ಇದು ನಮ್ಮ ಎಲ್ಲ ಭಾಷೆಗಳ ಸಮಸ್ಯೆಯೂ ಆಗಿರುತ್ತದೆ. ಸಂಸ್ಕೃತದಂಥ ಪರಿಪುಷ್ಟವಾದ ಭಾಷೆ ನಮ್ಮ ಭಾಷೆಗಳ ಅವಲಂಬನಕ್ಕಿರುವುದು ಸುಯೋಗವೇ. ಆಧುನಿಕ ಐರೋಪ್ಯ ಭಾಷೆಗಳಾದರೂ ಈ ವಿಚಾರದಲ್ಲಿ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳನ್ನು ಕಡೆಗಣಿಸಿ ತಮ್ಮ ಪ್ರಗತಿಯನ್ನು ಸಾಧಿಸಿಲ್ಲ. ಭಾರತೀಯ ಭಾಷೆಗಳಾದರೂ ಕೂಡ ಸಂಸ್ಕೃತವನ್ನು ಬಿಟ್ಟು ಬದುಕುವುದು ಸಾಧ್ಯವಿಲ್ಲ. ಒಂದು ದೃಷ್ಟಿಯಿಂದ ನೋಡಿದರೆ ಸಂಸ್ಕೃತ ಜೀವಂತವಾಗಿರುವುದೇ ಆಧುನಿಕ ಭಾರತೀಯ ಭಾಷೆಗಳಿಂದ !

ಪ್ರತಿಯೊಂದು ಭಾಷೆಗೂ ಎರಡು ಮುಖಗಳಿರುತ್ತವೆ: ದಿನಬಳಕೆಯ ಆತ್ಮೀಯ ಮುಖ ಒಂದು; ಸಾಂಸ್ಕೃತಿಕ ಮುಖ ಮತ್ತೊಂದು. ಮೊದಲನೆಯದರಲ್ಲಿ ಭಾಷೆಯ ತನ್ನತನವನ್ನು ನಾವು ಗುರುತಿಸಬಹುದು. ಅದಿಲ್ಲದೆ ಆ ಭಾಷೆಯ ವ್ಯವಹಾರ ನಡೆಯಲಾರದು. ಎರಡನೆಯದರ ಬಹು ಪಾಲು

ನಾನಾ ಮೂಲಗಳಿಂದ ಬಂದದ್ದು; ಅನುಕೂಲ ಅಗತ್ಯಗಳಿಗೆ ತಕ್ಕಂತೆ ರೂಪಿತವಾದದ್ದು. ವೈಜ್ಞಾನಿಕ ವಿಚಾರ, ಶಾಸ್ತ್ರೀಯ ಪ್ರತಿಪಾದನೆ—ಈ ಎರಡನೆಯ ವರ್ಗಕ್ಕೆ ಸೇರಿದ್ದು. ಯಾವುದೇ ಭಾಷೆ ಬೆಳೆಯುತ್ತಿರುವ ವಿಜ್ಞಾನದೊಡನೆ, ಒಗ್ಗುತ್ತಿರುವ ವಿಶ್ವದೊಡನೆ ಒಂಟಿಯಾಗಿ ನಿಂತು ಸ್ಪರ್ಧಿಸಲಾರದು. ಅದು ಶಕ್ತವೂ, ಸಮರ್ಥವೂ ಆಗಿ ದಿನಕ್ಕೆ ತಕ್ಕಂತೆ ಬೆಳೆಯಬೇಕಾಗಿದ್ದರೆ, ಎರವಲು ಪಡೆಯಲು ಹಿಂದೆಗೆಯಬೇಕಾದುದಿಲ್ಲ. ನಮ್ಮ ಲೇಖಕರು ಪಾರಿಭಾಷಿಕ ವ್ಯವಹಾರದಲ್ಲಿ ಸಂಸ್ಕೃತದ ನೆರವನ್ನು ಪಡೆದಿದ್ದಾರೆ, ನಿಜ. ಆದರೆ ಇದು ವ್ಯವಸ್ಥಿತ ರೀತಿಯಲ್ಲಿ ನಡೆದಿಲ್ಲ. ಕಾಲಕಾಲಕ್ಕೆ ಪಾರಿಭಾಷಿಕ ಪದಗಳನ್ನು ಬೇರೆ ಬೇರೆಯಾಗಿ ಉಪಯೋಗಿಸಿರುವುದನ್ನು ಗಮನಿಸಬಹುದು. ಪ್ರಾದೇಶಿಕವಾಗಿ ಲೇಖಕರು ಬೇರೆ ಬೇರೆ ಪಾರಿಭಾಷಿಕ ಪದಗಳನ್ನು ಬಳಸುತ್ತಿದ್ದಾರೆ. ಉದಾಹರಣೆಗೆ, metal, catalytic agent, law of conservation of man—ಈ ಪದಗಳಿಗೆ ಎರಡು ಸಮಕಾಲೀನ ರಸಾಯನಶಾಸ್ತ್ರಗಳಲ್ಲಿ ಕ್ರಮವಾಗಿ ಧಾತು-ಲೋಹ; ಉತ್ಪ್ರೇರಕ-ವೇಗವರ್ಧಕ; ಪದಾರ್ಥ ಅವಿನಾಶಿತಾ ನಿಯಮ-ವಸ್ತು ನಿತ್ಯತ್ವ ನಿಯಮ—ಹೀಗೆ ಬೇರೆ ಬೇರೆ ಪದಗಳನ್ನು ಬಳಸಲಾಗಿದೆ. ಇವು ಅತಿ ಸಾಮಾನ್ಯವಾದ ಉದಾಹರಣೆಗಳು. ಹೆಚ್ಚು ಹೆಚ್ಚು ಉದಾಹರಣೆಗಳನ್ನು ಹುಡುಕಿದಂತೆ ಅವುಗಳ ನಡುವಿನ ಅಂತರ ಹೆಚ್ಚುತ್ತಾ ಹೋಗುತ್ತದೆ. ಈ ಜೊತೆಗಳಲ್ಲಿ ಒಂದು ಸರಿ ಇನ್ನೊಂದು ತಪ್ಪು ಎಂಬುದಿಲ್ಲ. ಆಮ್ಲಜನಕ-ಪ್ರಾಣವಾಯು ಬೇರೆ ಬೇರೆಯಲ್ಲ, ನಿಜ. ಆದರೆ ಅವೆರಡೂ ಒಂದೇ ಎಂದು ಗೊತ್ತಾಗಬೇಕಷ್ಟೆ? ಆದ್ದರಿಂದಲೇ ಇಂಥ ವಿಚಾರಗಳಲ್ಲಿ ಭಾಷೆ ಏಕರೂಪತೆಯನ್ನು ಸಾಧಿಸಬೇಕೆಂಬುದು ಅಪೇಕ್ಷಣೀಯ. ಇನ್ನೂ ಸ್ಥಿಮಿತಕ್ಕೆ ಸಿಕ್ಕದ ಪಾರಿಭಾಷಿಕ ಪದಗಳ ವಿಚಾರವೊಂದನ್ನುಳಿದರೆ ನಮ್ಮ ಶಾಸ್ತ್ರೀಯ ಅಥವಾ ವೈಜ್ಞಾನಿಕ ಗ್ರಂಥಗಳ ಗದ್ಯದಲ್ಲಿ ಕೊರತೆಯಿಲ್ಲವೆಂದು ತೋರುತ್ತದೆ. ಬರೆಯುವ ಲೇಖಕ ಸಮರ್ಥನಾಗಿದ್ದರೆ ಯಾವ ವಿಷಯವನ್ನಾದರೂ ಕನ್ನಡದಲ್ಲಿ ಪ್ರತಿಪಾದಿಸಬಲ್ಲ. ಈಚೆಗೆ ಕನ್ನಡದಲ್ಲಿ ಪ್ರಕಟವಾಗುತ್ತಿರುವ ವೈಜ್ಞಾನಿಕ ಗ್ರಂಥಗಳ ಗುಣ-ಗಾತ್ರ ಕನ್ನಡಗದ್ಯದ ಬೆಳವಣಿಗೆಯಲ್ಲಿ ಹೊಸ ಆಸೆಯನ್ನು ಮೂಡಿಸಿವೆ.

೬

ಮೈಸೂರು ವಿಶ್ವವಿದ್ಯಾನಿಲಯದವರು ಕನ್ನಡದಲ್ಲಿ ವೈಜ್ಞಾನಿಕ ಗ್ರಂಥಗಳನ್ನು ಪ್ರಕಟಿಸಲು ಆರಂಭಮಾಡಿದ್ದು ಕನ್ನಡ ಗದ್ಯದ ಬೆಳವಣಿಗೆಯಲ್ಲಿ ಒಂದು ಗಮನಾರ್ಹವಾದ ಮೈಲಿಗಲ್ಲು ಎಂದು ಹೇಳಬೇಕು. ಅಲ್ಲೊಬ್ಬರು ಇಲ್ಲೊಬ್ಬರು, ದೇಶಭಾಷೆಗಳಲ್ಲಿ ಶಿಕ್ಷಣಮಾಧ್ಯಮವಾಗಬೇಕು ಎಂದು ಹೇಳುತ್ತಿದ್ದ ಕಾಲದಲ್ಲಿ, ಮೈಸೂರು ವಿಶ್ವವಿದ್ಯಾನಿಲಯ ಶಿಕ್ಷಣಮಾಧ್ಯಮದ ವಿಚಾರ ಮಾಡದೆ ಕನ್ನಡ ಭಾಷೆಯಲ್ಲಿ ವೈಜ್ಞಾನಿಕ ಹಾಗೂ ಶಾಸ್ತ್ರೀಯ ಗ್ರಂಥಗಳನ್ನು ಪ್ರಕಟಿಸಲು ಆರಂಭಮಾಡಿತು. ಅವರ ಪ್ರಚಾರ ಪುಸ್ತಿಕೆಗಳ ಪ್ರಕಟಣೆ ಭಾರತೀಯ ವಿಶ್ವವಿದ್ಯಾನಿಲಯಗಳ ಕಾರ್ಯನಿರ್ವಹಣೆಯಲ್ಲಿಯೇ ಒಂದು ನವೀನವಾದ ಹಾಗೂ ಮಹತ್ವದ ಯೋಜನೆ. ಆ ಮಾಲೆಯಲ್ಲಿ ಇದುವರೆಗೆ ಪ್ರಕಟವಾಗಿರುವ ನೂರಾರು ಪುಸ್ತಿಕೆಗಳಲ್ಲಿ ಬಹುಪಾಲು ವೈಜ್ಞಾನಿಕ ವಿಷಯಗಳನ್ನೇ ಕುರಿತಿವೆ. ಈ ಆದರ್ಶವನ್ನು ಈಚೆಗೆ ಕರ್ನಾಟಕ ವಿಶ್ವವಿದ್ಯಾನಿಲಯದವರೂ ಅನುಸರಿಸಿರುವುದು ಅಭಿನಂದನೀಯ. ಆಯಾ ವಿಷಯಗಳಲ್ಲಿ ಪರಿಣತರಾದವರು ಮೊದಲು ಹಲವು ಕಡೆ ಭಾಷಣ ಮಾಡಿ ಆಮೇಲೆ ಈ ಪುಸ್ತಕಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ವಿದ್ಯಾರ್ಥಿಗಳಿಗೆ ಪಾಠಹೇಳುವ ಅವಕಾಶ ಆ ಪಂಡಿತರುಗಳಿಗೆ ಇಲ್ಲದಿದ್ದರೂ, ಸಾರ್ವಜನಿಕರೆದುರಿಗೆ ಭಾಷಣ ಮಾಡುವ ಅನುಕೂಲ ಅವರ ಪಾಲಿಗಿತ್ತು. ಆದುದರಿಂದ ವಿಜ್ಞಾನವನ್ನು ಕನ್ನಡದಲ್ಲಿ ಹೇಳಿದರೆ, ಯಾವ ರೀತಿ ಹೇಳಿದರೆ ಯಾವ ಬಗೆಯ ಪ್ರತಿಕ್ರಿಯೆಯಿರುತ್ತದೆಂಬುದನ್ನು ಅವರು ಗ್ರಹಿಸಲು ಸಮರ್ಥರಾಗಿದ್ದರು.

ಈಗ ಶಿಕ್ಷಣಮಾಧ್ಯಮ ಕನ್ನಡವೇ ಆಗಬೇಕೆಂಬ ಎಚ್ಚರದಲ್ಲಿ ವಿಶ್ವವಿದ್ಯಾನಿಲಯದವರು ನಾನಾ ಬಗೆಯ ಪಠ್ಯಪುಸ್ತಕಗಳನ್ನು ಪ್ರಕಟಿಸಿದ್ದಾರೆ. ರಸಾಯನಶಾಸ್ತ್ರ, ಭೌತಶಾಸ್ತ್ರ, ಗಣಿತಶಾಸ್ತ್ರ, ಸಸ್ಯಶಾಸ್ತ್ರ, ತರ್ಕಶಾಸ್ತ್ರ, ಅರ್ಥಶಾಸ್ತ್ರ ಮುಂತಾದ ಹಲವಾರು ಶಾಸ್ತ್ರಗಳನ್ನು ಕುರಿತ ಗ್ರಂಥಗಳು ಪ್ರಕಟವಾಗುತ್ತಿವೆ. ಈ ಗ್ರಂಥಗಳನ್ನು ಸ್ಥೂಲವಾಗಿ ನಾವು ಎರಡು ಭಾಗಗಳನ್ನಾಗಿ ವಿಭಾಗಿಸಿ ನೋಡಬಹುದು. ಮೊದಲನೆಯದು, ಹಲವು ವರ್ಷಗಳ ಅನುಭವದ ಫಲ; ಎರಡನೆಯದು, ಅವಸರಕ್ಕೆ ಮಾಡಿಬಡಿಸಿದ ಅಡುಗೆ. ಲೇಖಕನಿಗೆ ವಿಷಯಜ್ಞಾನ ಎಷ್ಟೇ ಚೆನ್ನಾಗಿರಲಿ, ಅವನು ಎಂಥ ದಕ್ಷನಾದ

ಅಧ್ಯಾಪಕನೇ ಆಗಿರಲಿ, ಅವನಿಗೆ ಭಾಷಾಜ್ಞಾನವೂ ಚೆನ್ನಾಗಿರಬೇಕು. ಭಾಷೆಯನ್ನು ಕುರಿತ ಅವನ ತಿಳಿವಳಿಕೆ ಸಾಮಾನ್ಯವಾದುದಾಗಿದ್ದರೆ ಅವನ ಬರೆವಣಿಗೆ ಚೆನ್ನಾಗಿರಲಾರದು. ಪದಗಳ ಬಳಕೆಯಲ್ಲಿ ಅನಿರ್ದಿಷ್ಟತೆಯೂ, ವಾಕ್ಯಗಳ ರಚನೆಯಲ್ಲಿ ಶಿಥಿಲತೆಯೂ ತಲೆದೋರಬಹುದು. ಅವನು ಏನನ್ನು ಹೇಳಲು ಬಯಸುತ್ತಾನೆಯೋ, ಆ ಉದ್ದೇಶ ಸಾಧಿತವಾಗದೆ ಹೋಗಬಹುದು. ಬರೆವಣಿಗೆಯಲ್ಲಿ ಬಿಗಿಯಿಲ್ಲದೆ, ಸ್ವಾರಸ್ಯವಾಗಿರಬಹುದಾದ ಕಡೆಗಳಲ್ಲೆಲ್ಲ ಕಾಂತಿಹೀನವಾಗಿರುವುದಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆಗಳಲ್ಲಿ 'ಕಮ್ಯುನಿಸಂ', 'ಪ್ರಜಾಸರ್ಕಾರ', 'ಕಲನಶಾಸ್ತ್ರ', 'ಭೌತಿಕ ಭೂಗೋಳ', 'ಭೂಗೋಳಶಾಸ್ತ್ರ'—ಮೊದಲಾದ ಕೆಲವು ಗ್ರಂಥಗಳನ್ನು ಉದಾಹರಿಸಬಹುದು. ಈ ಗ್ರಂಥಗಳನ್ನು ಬರೆದಿರುವ ಲೇಖಕರು ಆಯಾ ವಿಷಯಗಳಲ್ಲಿ ಪರಿಣತರಾಗಿದ್ದರೂ, ಅವರ ಕನ್ನಡ ಪಕ್ವವಾಗಿಲ್ಲ. ಇಂಗ್ಲಿಷಿನಲ್ಲಿ ವಿಚಾರಮಾಡಿ ಅದಕ್ಕೆ ಹಾಗೆಯೇ ಕನ್ನಡದ ವೇಷ ತೊಡಸಿದಂತೆ ಕಾಣುತ್ತದೆ. ಇದಕ್ಕೆ ಪ್ರತಿಯಾಗಿ ಆದರ್ಶಯುತವಾದ ಪಠ್ಯಪುಸ್ತಕಗಳು ಹೇಗಿರಬೇಕೆಂಬುದಕ್ಕೆ ಇದೇ ಮಾಲೆಯ 'ರಸಾಯನಶಾಸ್ತ್ರ', 'ಭೌತಶಾಸ್ತ್ರ', 'ಗಣಿತಶಾಸ್ತ್ರದ ಚರಿತ್ರೆ', 'ಪ್ರಾಣಿಶಾಸ್ತ್ರ', 'ತರ್ಕಶಾಸ್ತ್ರ'—ಮುಂತಾದ ಕೆಲವು ಗ್ರಂಥಗಳನ್ನು ಹೆಸರಿಸಬಹುದು. ನಮ್ಮ ಉತ್ತಮವಾದ ವೈಜ್ಞಾನಿಕ ಗದ್ಯಕ್ಕೆ ಇವು ಉದಾಹರಣೆಗಳೂ ಆಗಬಲ್ಲವು.

ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಪಠ್ಯಪುಸ್ತಕಗಳಲ್ಲಿ ದೋಷಗಳೇನೇ ಇರಲಿ ಅವು ಸಾಮೂಹಿಕವಾಗಿ ಕನ್ನಡಗದ್ಯ ಯಾವುದೇ ಬಗೆಯ ಶಾಸ್ತ್ರೀಯ ವಿಷಯವನ್ನಾದರೂ ಪ್ರತಿಪಾದಿಸಬಲ್ಲುದೆಂಬುದನ್ನು ದೃಢಪಡಿಸುತ್ತವೆ. ಅಸಮರ್ಥರಾದ ಲೇಖಕರು ಯಾವುದೇ ಭಾಷೆಯಲ್ಲಿ ರಚಿಸಿದರೂ ಪರಿಣಾಮ ಒಂದೇ ಆಗಿರುತ್ತದೆ. ಲೇಖಕರ ಅಸಾಮರ್ಥ್ಯವನ್ನು, ಅಜ್ಞಾನವನ್ನು ನಾವು ಭಾಷೆಯ ಮೇಲೆ ಹೊರಿಸಬೇಕಾದುದಿಲ್ಲ. ಒಟ್ಟಿನ ಮೇಲೆ ಈ ಪಠ್ಯಪುಸ್ತಕಗಳು ಗ್ರಾಂಥಿಕವಾದ, ವೈಜ್ಞಾನಿಕ ಸಾಹಿತ್ಯಕ್ಕೆ ಅಗತ್ಯವಾಗಿ ಬೇಕಾದ ಒಂದು ಶೈಲಿಯನ್ನು ರೂಪಿಸಿವೆ. ಕನ್ನಡದಲ್ಲಿ ಬರೆಯುವ ಲೇಖಕರು ಬರೀ ವಿಷಯ ಪ್ರತಿಪಾದನೆಗೆ ಮಾತ್ರ ಗಮನಕೊಡದೆ ಭಾಷೆಯ ಸೌಂದರ್ಯದ ಕಡೆಗೂ ಗಮನಕೊಡಬೇಕಾಗುತ್ತದೆ. ವಿಷಯವನ್ನು ಅರಿತ

ಪರಿಣತರು, ತಮ್ಮ ಸಂಸ್ಕೃತ ಭಾಷೆಯ ಪರಿಚಯದಿಂದಾಗಿ, ಕನ್ನಡದ ಈ ವೈಜ್ಞಾನಿಕ ಗದ್ಯ ಸಂಪತ್ತನ್ನು ಖಂಡಿತವಾಗಿಯೂ ಬೆಳೆಸಿದ್ದಾರೆ; ಬೆಳೆಸುತ್ತಿದ್ದಾರೆ.

ಕನ್ನಡದ ಗದ್ಯಶೈಲಿ ಈಗ, ಓಡುತ್ತಿರುವ ವೈಜ್ಞಾನಿಕ ಜಗತ್ತಿನೊಂದಿಗೆ ತಾನೂ ಓಡಲು ಸಮರ್ಥವಾದುದಾಗಿದೆ. ಅದಕ್ಕೆ ಆಗಬೇಕಾದದ್ದು ಕೃಷಿ. ಹೊಸ ಲೇಖಕರು ಚೆನ್ನಾದ ಸಿದ್ಧತೆಯೊಂದಿಗೆ ಈ ಕ್ಷೇತ್ರದಲ್ಲಿ ಕೆಲಸ ಮಾಡಬೇಕು. ಅನುಭವಿಗಳು ತಮ್ಮ ಅನುಭವದ ಪೂರ್ಣಫಲವನ್ನು ಕನ್ನಡಕ್ಕೆ ಕೊಡಬೇಕು. ಅದಕ್ಕೆ ಬೇಕಾದ ಅನುಕೂಲಗಳನ್ನು ವಿಶ್ವವಿದ್ಯಾನಿಲಯಗಳೂ, ಸರ್ಕಾರಗಳೂ, ಸಾಹಿತ್ಯಪರಿಷತ್ತಿನಂಥ ಸಂಸ್ಥೆಗಳೂ ದೊರಕಿಸಿಕೊಡಬೇಕು. ವಿಜ್ಞಾನಕ್ಕೇ ಮೀಸಲಾದ ಒಂದಾದರೂ ಪತ್ರಿಕೆ ಆರಂಭವಾಗಬೇಕು. ಪಾರಿಭಾಷಿಕ ಪದಗಳ ಬಳಕೆಯಲ್ಲಿ ಒಂದು ವ್ಯವಸ್ಥಿತ ಮಾರ್ಗವನ್ನು ಕಂಡುಕೊಂಡರೆ, ಯಾವ ವಿಜ್ಞಾನವನ್ನಾದರೂ ಕನ್ನಡದಲ್ಲಿ ಹೇಳುವುದು, ಬರೆಯುವುದು ಕಷ್ಟವಾಗುವುದಿಲ್ಲ. ಮೊದಲು ಪ್ರಖ್ಯಾತ ಗ್ರಂಥಗಳ ಅನುವಾದವಾಗಬೇಕು. ಅರಿಸ್ಟಾಟಲ್ಲನ 'ಕಾವ್ಯಮೀಮಾಂಸೆ', ಕೆರಾಲನ 'ಅವ್ಯಕ್ತಮಾನವ', ವೈಟ್‌ಹೆಡ್‌ನ 'ಶಿಕ್ಷಣದ ಧ್ಯೇಯಗಳು'—ಮೊದಲಾದ ಗ್ರಂಥಗಳು ಕನ್ನಡದಲ್ಲಿ ಬಂದಿರುವ ರೀತಿ ನೀತಿಗಳನ್ನು ನೋಡಿದರೆ, ನಮಗೆ ಯಾವ ಗ್ರಂಥವನ್ನು ಬೇಕಾದರೂ ಕನ್ನಡಕ್ಕೆ ತರುವುದು ಕಷ್ಟವಾಗುವುದಿಲ್ಲವೆಂದು ಗೊತ್ತಾಗುತ್ತದೆ. ಕನ್ನಡ ಗದ್ಯ ಶೈಲಿಯ ಮಾರ್ದವತೆಯೂ, ಕಸುವೂ, ಸೊಗಸೂ ಲೋಕದ ಯಾವ ಭಾಷೆಯ ಗದ್ಯಕ್ಕೂ ಕಡಮೆಯಾದುದಲ್ಲ. 'ಭಾರತೀಯ ಕಾವ್ಯಮೀಮಾಂಸೆ', 'ಗ್ರೀಕರ ತತ್ವಶಾಸ್ತ್ರ ಸಾರಸಂಗ್ರಹ', 'ಭಾರತೀಯ ತತ್ವಶಾಸ್ತ್ರ ಸಂಗ್ರಹ'—ಮುಂತಾದ ಗ್ರಂಥಗಳಲ್ಲಿ ಕನ್ನಡದ ಶಾಸ್ತ್ರೀಯ ಅಥವಾ ವೈಜ್ಞಾನಿಕ ಗ್ರಂಥಗಳಲ್ಲಿ ಬಳಸಬಹುದಾದ ಶೈಲಿ ತನ್ನ ಉನ್ನತ ನೆಲೆಯನ್ನು ಮುಟ್ಟಿ ನಿಂತಿದೆ. ಶಿವರಾಮ ಕಾರಂತರು ಕೆಲವು ದಶಕಗಳ ಹಿಂದೆ 'ಬಾಲಪ್ರಪಂಚ'ದಲ್ಲಿ, ಇವತ್ತು 'ಈ ಜಗತ್ತು' ಇನ್ನಿತರ ವಿಜ್ಞಾನಕೋಶಗಳಲ್ಲಿ ಸಾಧಿಸಿರುವ ಪ್ರಗತಿ ಯಾವ ಭಾಷೆಯೂ ಹೆಮ್ಮೆಪಡುವಂಥದು.

ಒಟ್ಟಿನಲ್ಲಿ ಈ ಶತಮಾನದ ಕನ್ನಡದ ಶಾಸ್ತ್ರೀಯ ಅಥವಾ ವೈಜ್ಞಾನಿಕ

ಗ್ರಂಥಗಳ ಬರೆವಣಿಗೆಯನ್ನು ಸ್ಥೂಲವಾಗಿಯಾದರೂ ಪರಿಶೀಲಿಸಿ ನೋಡಿದಾಗ, ಎಂಥ ಶಾಸ್ತ್ರವಿಷಯಗಳಿಗಾದರೂ ಕನ್ನಡ ಮಾಧ್ಯಮವಾಗಬಲ್ಲದೆಂದು ತಿಳಿಯುತ್ತದೆ. ಕೆಲಸ ಮಾಡಿರುವವರು ಕಡಮೆ; ಆದರೆ ಮಾಡಿರುವ ಕೆಲಸ ಕೀಳಾದುದಲ್ಲ. ಇದು ನಾವು ಹೆಮ್ಮೆಪಡುವಂಥ ವಿಚಾರ. ಕನ್ನಡಕ್ಕೆ ಇಂಥ ಶಕ್ತಿಯನ್ನೂ, ತೇಜಸ್ಸನ್ನೂ, ಆತ್ಮವಿಶ್ವಾಸವನ್ನೂ ದೊರಕಿಸಿಕೊಡಲು ನೆರವಾದ ಈ ಕೆಲವರಿಗೆ ನಮ್ಮ ನಮಸ್ಕಾರಗಳಿರಲಿ.

# ೧೯೬೫–೬೬ರ ಕನ್ನಡ ಕಥನ ಸಾಹಿತ್ಯ

೧೯೬೫-೬೬ : ಈ ಎರಡು ವರ್ಷಗಳ ಅವಧಿಯಲ್ಲಿ ಪ್ರಕಟವಾದ ಕನ್ನಡ ಕಥೆ-ಕಾದಂಬರಿಗಳನ್ನು ಅವಲೋಕಿಸುವ ಹೊಣೆ ನನ್ನ ಪಾಲಿನದಾಗಿದೆ. ಯಾವುದೇ ಸಾಹಿತ್ಯದ ಪಾರ್ಶ್ವಿಕವಾದ ಚಿಕ್ಕ ಸಮೀಕ್ಷೆಯು ಅಪೂರ್ಣವಾಗಿರುವುದು ಅನಿವಾರ್ಯ. ಅದರಲ್ಲಿಯೂ ಹೀಗೆ ಕ್ಯಾಲೆಂಡರ್ ವರ್ಷಗಳನ್ನು ಗಮನದಲ್ಲಿಟ್ಟುಕೊಂಡು ಸಮೀಕ್ಷೆಗಳನ್ನು ಸಿದ್ಧಪಡಿಸುವುದಂತೂ ತುಂಬ ಕಷ್ಟದ ಕೆಲಸ. ಏಕೆಂದರೆ ಈ ಅವಧಿಯ ಕೃತಿಗಳನ್ನು ಹಿಂದಿನ ವರ್ಷಗಳ ಕೃತಿಗಳೊಂದಿಗೆ ತೂಗಿ ಮೌಲ್ಯವಿವೇಚನೆ ಮಾಡುವುದಕ್ಕೆ ಇಲ್ಲಿ ಆಸ್ಪದವಿಲ್ಲ; ಹಾಗಾಗಿ ಕೊಟ್ಟ ಅವಧಿಯ ಕೃತಿಗಳ ಗುಣವನ್ನು ಕುರಿತು ವಿಚಾರ ಮಾಡಲು ಅವಕಾಶವಿಲ್ಲ. ಮುಖ್ಯವಾದ ಈ ಅಡಚಣೆಯೊಂದಿಗೆ ನನ್ನ ಇನ್ನೂ ಒಂದೆರಡು ಕಷ್ಟಗಳನ್ನು ಹೇಳಿಕೊಳ್ಳಬೇಕು. ಈ ಎರಡು ವರ್ಷಗಳ ಅವಧಿಯಲ್ಲಿ ಮಿಕ್ಕೆಲ್ಲ ಸಾಹಿತ್ಯ ಪ್ರಕಾರಗಳಿಗಿಂತ ಕಥೆ ಕಾದಂಬರಿಗಳು ಹೆಚ್ಚು ಸಂಖ್ಯೆಯಲ್ಲಿ ಪ್ರಕಟವಾಗಿವೆ.[1] ಇವೆರಡನ್ನೂ ಬೇರೆಬೇರೆಯಾಗಿಯೇ ಸಮೀಕ್ಷಿಸುವ ಅಗತ್ಯವಿತ್ತು. ಕಳೆದ ಸಾಹಿತ್ಯ ಸಮ್ಮೇಳನದಲ್ಲಿ ಹೀಗೆ ಮಾಡಿದ್ದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಹೆಚ್ಚು ಪ್ರಕಟಣೆಗಳನ್ನುಳ್ಳ ಎರಡು ಪ್ರಕಾರಗಳನ್ನು ಒಟ್ಟಿಗೆ ಸೇರಿಸಿರುವುದರಿಂದ ಎರಡಕ್ಕೂ ಅನ್ಯಾಯವಾಗಿದೆಯೆಂದೇ ನನ್ನ ಭಾವನೆ. ಸಮೀಕ್ಷೆಯ ಅಧ್ಯಯನಕ್ಕೆ ಅಗತ್ಯವಾದ ಗ್ರಂಥ

---

[1] ಈ ಲೇಖನವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಈ ಲೇಖಕನ ಗಮನಕ್ಕೆ ಬಂದಂತೆ ಸುಮಾರು ೨೦೦ ಕೃತಿಗಳು ಪ್ರಕಟವಾಗಿವೆ. ಆದರೆ ಒಟ್ಟು ಪ್ರಕಟಣೆಗಳ ಸಂಖ್ಯೆ ಕನಿಷ್ಟಪಕ್ಷ ಮುನ್ನೂರಾದರೂ ಆಗಬಹುದೆಂದು ಅಂದಾಜು ಮಾಡಲು ಅವಕಾಶವಿದೆ. ಬಂಗಾಳಿ ಭಾಷೆಯಲ್ಲಿ ೧೯೬೪–೬೫ ಮತ್ತು ೧೯೬೫–೬೬ ಈ ವರ್ಷಗಳಲ್ಲಿ ಕ್ರಮವಾಗಿ ೨೭೮ ಮತ್ತು ೩೭೬ ಕಥೆ ಕಾದಂಬರಿಗಳು ಪ್ರಕಟವಾದುವು. ಅಲ್ಲಿಯೂ ಈ ಪ್ರಕಾರಗಳಲ್ಲಿಯೇ ಹೆಚ್ಚು ಸಂಖ್ಯೆಯ ಗ್ರಂಥಗಳು ಪ್ರಕಟವಾಗಿವೆ.

C. R. Banerji, 'Indian Publishing: Recent Trends' *Indian Literature*, 9-4 p. 11.

ಗಳನ್ನು ಸಂಗ್ರಹಿಸುವುದು ಎಲ್ಲದಕ್ಕಿಂತ ದೊಡ್ಡ ಕಷ್ಟ. ಕನ್ನಡ ಪುಸ್ತಕಗಳ ವಿಷಯದಲ್ಲಿ ಒಂದಾದರೂ ಸಮರ್ಪಕವಾದ ಗ್ರಂಥಭಂಡಾರವಿಲ್ಲ. ಇದಕ್ಕೆ ಪರಿಷತ್ತೂ ಅಪವಾದವಲ್ಲ. ನಮ್ಮಲ್ಲಿ ಗ್ರಂಥಭಂಡಾರಗಳಲ್ಲಿಯೂ ಕೂಡ ಅಧಿಕಾರಿಗಳ ವೈಯಕ್ತಿಕ ಅಭಿರುಚಿ, ಲಾಭಗಳೇ ಪುಸ್ತಕಗಳ ಆಯ್ಕೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ. ಯಾವ ಒಂದು ಸಂಸ್ಥೆಯಾದರೂ ವಾರ್ಷಿಕ ಪ್ರಕಟಣೆಗಳ ಪಟ್ಟಿಯನ್ನು ಪ್ರಕಟಿಸುವುದಿಲ್ಲ. ಪುಸ್ತಕಗಳ ಪ್ರಕಟಣೆ ವ್ಯಾಪಾರಗಳಲ್ಲಿಯೂ ಈ ನಾಡಿನಲ್ಲಿ ಇನ್ನೂ 'ಏಕೀಕರಣ'ವಾಗಿಲ್ಲ. ಇದರಿಂದ ಪ್ರಕಟವಾದ ಎಷ್ಟೋ ಪುಸ್ತಕಗಳು ಆಸಕ್ತರ ಗಮನಕ್ಕೆ ಬರದೆ ಹೋಗುತ್ತವೆ. ಪತ್ರಿಕೆಗಳ ಸಾದರ ಸ್ವೀಕಾರ ವಿಭಾಗದಲ್ಲಿ ಹಲಕೆಲವು ಗ್ರಂಥಗಳು ಆಗಾಗ ಕಾಣಿಸಿಕೊಳ್ಳುತ್ತವೆ. ಆದರೆ ಎಷ್ಟೋ ಸಂದರ್ಭದಲ್ಲಿ ಒಂದು ಗ್ರಂಥ ಕಥೆಯೆ ಕಾದಂಬರಿಯೆ ಎಂದು ತಿಳಿಯುವುದಿಲ್ಲ.[1] ಪ್ರಕಟಣೆಯ ವರ್ಷವನ್ನಂತೂ ಪತ್ರಿಕೆಯವರು ಸೂಚಿಸುವುದೇ ಇಲ್ಲ. ಹಲವು ಗ್ರಂಥಗಳಲ್ಲಿಯೇ ಪ್ರಕಟಣೆಯ ವರ್ಷ ನಮೂದಾಗದೇ ಇರುವುದರಿಂದ ಈ ವಿಚಾರದಲ್ಲಿ ಪತ್ರಿಕೆಯವರನ್ನು ದೂರಿ ಪ್ರಯೋಜನವಿಲ್ಲ. ನಮ್ಮ ಪತ್ರಿಕೆಯವರು ಪ್ರತಿ ವರ್ಷವೂ ಆಯಾ ವರ್ಷದ ನಾನಾ ಪ್ರಕಾರಗಳ ಸಾಹಿತ್ಯ ಸಮೀಕ್ಷೆಯನ್ನು ಪ್ರಕಟಿಸುವ ವ್ಯವಸ್ಥೆ ಮಾಡಬೇಕು. ಹಲವು ವರ್ಷಗಳ ಕೆಳಗೆ 'ವಾಹಿನಿ' ಪತ್ರಿಕೆ ತನ್ನ ವಾರ್ಷಿಕ ಸಂಚಿಕೆಯಲ್ಲಿ ಒಂದೆರಡು ವರ್ಷ ಈ ಕೆಲಸವನ್ನು ಕೈಗೊಂಡಿದ್ದು ನನಗೆ ನೆನಪಿದೆ. ಈ ದೃಷ್ಟಿಯಿಂದ ಸಾಹಿತ್ಯ ಸಮ್ಮೇಳನದಲ್ಲಿ ಸಮೀಕ್ಷೆಯ ಕಾರ್ಯಕ್ರಮವನ್ನು ಆರಂಭಿಸಿರುವುದು ಅಭಿನಂದನೀಯ. ಆದರೆ ಇಂಥ ಲೇಖನಗಳನ್ನು ಸಿದ್ಧಪಡಿಸಲು ಕೊಡುವ ಸಮಯ ತೀರ ಸ್ವಲ್ಪ.

---

[1] ಈ ಸ್ಥಿತಿ ಕನ್ನಡಕ್ಕೇ ವಿಶಿಷ್ಟವಾದುದಲ್ಲ ; ತಮಿಳಿನಲ್ಲಿ ನೋಡಿ—

"Over two thousand new books do, however, get published in a year, though there is no machinery by which we—I mean the general reader—can get to know what books have been published by whom ; there are no cumulative book lists, no guiding reviews magazine, no publishers' lists on which one can pin one's faith."

Ka. Naa. Subramanyam, 'Tamil : Who wants good books', *Indian Literature*, 9-4, p. 97.

ದೀರ್ಘವಾದ ಕಾಲಾವಧಿಯಲ್ಲಿ ಯೋಜನೆಗೊಳ್ಳಬೇಕಾದ ಸಾಹಿತ್ಯ ಸಮ್ಮೇಳನಗಳೂ ಶಾಲಾವಾರ್ಷಿಕೋತ್ಸವಗಳಂತೆ ಅವಸರವಸರವಾಗಿ ಕೂಡುತ್ತಿರುವುದು ಅಪೇಕ್ಷಣೀಯವಲ್ಲ. ಪರಿಷತ್ತಿನವರು ನನ್ನನ್ನು ಈ ಸಮೀಕ್ಷೆಗಾಗಿ ಕೇಳಿಕೊಂಡ ಒಡನೆಯೇ ನಾನು ಹತ್ತು ಜನ ಲೇಖಕರಿಗೆ, ಉತ್ತರಕ್ಕಾಗಿ ಅಂಚೆ ಚೀಟಿ ಇಟ್ಟು, ೬೫-೬೬ರ ಅವಧಿಯಲ್ಲಿ ಪ್ರಕಟವಾದ ಅವರ ಕಥಾ ಸಂಕಲನಗಳ ಕಾದಂಬರಿಗಳ ಹೆಸರುಗಳನ್ನು ತಿಳಿಸುವಂತೆ ಪ್ರಾರ್ಥಿಸಿಕೊಂಡೆ. ಒಡನೆಯೇ ಮೂರು ಜನರಿಂದ ಉತ್ತರ ಬಂತು: ಅವರಲ್ಲಿ ಇಬ್ಬರು ಕೊಟ್ಟ ವಿವರಗಳು ತಪ್ಪಾಗಿದ್ದುವು. ನಾಲ್ಕನೆಯವರಿಂದ ಉತ್ತರ ಬರುವ ವೇಳೆಗೆ ಈ ಪ್ರಬಂಧದ ರಚನೆ ಮುಗಿದು ಹೋಗಿತ್ತು. ಮಿಕ್ಕ ಆರೂ ಜನ ಲೇಖಕರಿಗೆ ನನ್ನ ಕಾಗದಗಳು ತಲುಪದೆ ಇರುವಷ್ಟು ನಮ್ಮ ಅಂಚೆ ಇಲಾಖೆ ಇನ್ನೂ ಅವ್ಯವಸ್ಥಿತವಾಗಿಲ್ಲ! ಸ್ವಲ್ಪ ಸಮಾಧಾನದ ವಿಚಾರವೆಂದರೆ, ಸಮ್ಮೇಳನದ ವಿವರಗಳನ್ನು ಪತ್ರಿಕೆಗಳಲ್ಲಿ ಓದಿದ ಕೆಲವು ಲೇಖಕರು ತಾವಾಗಿಯೇ ತಮ್ಮ ಪ್ರಕಟಣೆಗಳ ವಿವರಗಳನ್ನು ನನಗೆ ತಿಳಿಸುವ ಕೃಪೆಮಾಡಿದರು.

ನನಗೆ ಕೊಟ್ಟಿರುವ ಇಪ್ಪತ್ತು ನಿಮಿಷಗಳ ಅವಧಿಯಲ್ಲಿ ಈ ಮಾತುಗಳನ್ನು ಆಡುತ್ತಿರುವುದಕ್ಕೆ ಕಾರಣ—ಇಂಥ ಕೆಲಸಗಳಲ್ಲಿ ನಿರತರಾಗಿರುವವರಿಗೆ ಯಾವ ಬಗೆಯ ಸಹಕಾರ ದೊರೆಯುತ್ತದೆ, ಯಾವ ಯಾವ ತೊಂದರೆಗಳಿವೆ ಎಂಬುದನ್ನು ತಮ್ಮ ಗಮನಕ್ಕೆ ತರಲು ನನಗಿರುವ ಅಪೇಕ್ಷೆ; ಹಾಗೂ ಈ ಪ್ರಬಂಧದ ಕೊರತೆಗಳ ಬಗೆಗೆ ತಮ್ಮ ಕ್ಷಮೆಯನ್ನೂ, ಸಹಾನುಭೂತಿಯನ್ನೂ ಯಾಚಿಸುವ ಕಾತರ. ನಾನು ಮೇಲೆ ವಿವರಿಸಿರುವ ಸನ್ನಿವೇಶದಲ್ಲಿ ಈ ಬಗೆಯ ಸಮೀಕ್ಷೆ ಪರಿಪೂರ್ಣವಾಗಿರುವುದು ಸಾಧ್ಯವಿಲ್ಲವೆಂದು ತಾವೂ ನನ್ನೊಡನೆ ಒಪ್ಪುತ್ತೀರೆಂಬ ಭರವಸೆ ನನಗಿದೆ. ಈ ಸಮೀಕ್ಷೆಯಲ್ಲಿ ಉಲ್ಲೇಖಗೊಂಡಿರುವ ಲೇಖಕರೂ, ಕೃತಿಗಳೂ ಲೇಖಕನ ವೈಯಕ್ತಿಕ ಓದಿನ ಫಲವಾಗಿರುವುದು ಅನಿವಾರ್ಯವಾಗಿದೆ.

ಕನ್ನಡ ಪತ್ರಿಕೆಗಳಲ್ಲಿ ಕಥೆಗಳು ದೊಡ್ಡ ಸಂಖ್ಯೆಯಲ್ಲಿ ಪ್ರಕಟವಾಗುತ್ತಿವೆ. ಕಥೆ ವಾರಪತ್ರಿಕೆಗಳಲ್ಲಿ, ದಿನಪತ್ರಿಕೆಗಳ ಸಾಪ್ತಾಹಿಕ ಪುರವಣಿಗಳಲ್ಲಿ, ವಿಶೇಷ ಸಂಚಿಕೆಗಳಲ್ಲಿ ತಪ್ಪದೇ ಪ್ರಕಟವಾಗುವುದಲ್ಲದೆ, ಕಥೆಗಳಿಗಾಗಿಯೇ ಮೀಸಲಾದ ಮಾಸಪತ್ರಿಕೆಗಳೂ ಇವೆ. ಈಚಿನ ಕೆಲವು ವರ್ಷಗಳಲ್ಲಿ ಈ

ಪತ್ರಿಕೆಗಳು ಕಾದಂಬರಿಗಳನ್ನು ಧಾರಾವಾಹಿಯಾಗಿ ಪ್ರಕಟಿಸುವ ಪರಿಪಾಠವನ್ನೂ ಆರಂಭಿಸಿವೆ. ಇದರಿಂದ ಕಾದಂಬರಿಕಾರರಿಗೆ ಹೆಚ್ಚಿನ ಪ್ರೋತ್ಸಾಹ, ಅವಕಾಶಗಳು ದೊರಕುವುದಲ್ಲದೆ ಎಷ್ಟೋ ಕಾದಂಬರಿಗಳ ಸೃಷ್ಟಿಗೆ ಇದು ನೆವ ಕೂಡ ಆಗಿವೆ. ಪತ್ರಿಕೆಗಳಲ್ಲಿ ಪ್ರಕಟವಾದ ಕಥೆಗಳನ್ನೂ, ಧಾರಾವಾಹಿಯಾಗಿ ಪ್ರಕಟವಾಗಿದ್ದರೂ ಪುಸ್ತಕರೂಪವಾಗಿ ಹೊರಬರದ ಕಾದಂಬರಿಗಳನ್ನೂ, ಹಲವಾರು ಅನ್ಯಭಾಷೆಗಳಿಂದ ಅನುವಾದವಾಗಿ ಬಂದ ಕಥೆ ಕಾದಂಬರಿಗಳನ್ನೂ[1] ಈ ಸಮೀಕ್ಷೆಗೆ ಒಳಪಡಿಸಿಲ್ಲ. ಈ ಕಟ್ಟುಪಾಡು ಪ್ರಬಂಧದ ವಿಸ್ತಾರದ ಭಯದಿಂದ, ಅಷ್ಟೆ. ಈ ಎಲ್ಲ ಕೃತಿಗಳ ಮಹತ್ವವನ್ನೂ ಈ ಲೇಖಕ ಅರಿತಿದ್ದಾನೆ ಎಂದು ಹೇಳಬೇಕು. ಆದರೆ ಅವುಗಳ ಬಗೆಗೆ ಇಲ್ಲಿ ಏನನ್ನೂ ಹೇಳದಿರುವುದಕ್ಕೆ ಅವನ ವಿಷಾದವಿದೆ.

* * *

ಈಚಿನ ಹಲವು ವರ್ಷಗಳಂತೆ, ಸಮೀಕ್ಷೆಗೆ ಒಳಪಟ್ಟ ಕಳೆದ ಎರಡು ವರ್ಷಗಳಲ್ಲಿಯೂ ಕಾದಂಬರಿಯೇ ಅತ್ಯಂತ ಹೆಚ್ಚಿನ ಜನಪ್ರಿಯ ಸಾಹಿತ್ಯ ಪ್ರಕಾರವಾಗಿದೆ. ಬರವಣಿಗೆ, ಪ್ರಕಟಣೆ, ಮಾರಾಟ—ಈ ಎಲ್ಲ ದೃಷ್ಟಿಗಳಿಂದಲೂ ಕಾದಂಬರಿ ಸಮೃದ್ಧವಾಗಿದೆ. ನಮ್ಮ ವೃತ್ತಪತ್ರಿಕೆಗಳಲ್ಲಿ ಧಾರಾವಾಹಿ ಕಾದಂಬರಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆ. ಜನಪ್ರಿಯ ವಾರಪತ್ರಿಕೆಯಾದ 'ಸುಧಾ' ೧೯೬೬ ರಲ್ಲಿ ಕಾದಂಬರಿಗಳ ಸ್ಪರ್ಧೆಯೊಂದನ್ನು ಯೋಜಿಸಿ ಎರಡು ಸಾವಿರ ರೂಪಾಯಿಗಳ ಬಹುಮಾನವನ್ನು ಸಾರಿತು. ಈ ಸ್ಪರ್ಧೆಯ ವಿಷಯದಲ್ಲಿ ಕನ್ನಡ ಲೇಖಕರು ತೋರಿದ ಉತ್ಸಾಹ ಉಲ್ಲೇಖನೀಯವಾಗಿದೆ. ಸ್ಪರ್ಧಿಗಳ ಸಂಖ್ಯೆ, ಸ್ವರೂಪ, ಉತ್ತೇಜನಕಾರಿಯಾಗಿದೆ.

---

[1] ಈ ಅವಧಿಯಲ್ಲಿ ಟಾಲ್‌ಸ್ಟಾಯ್, ಪುಷ್ಕಿನ್, ಓ ಹೆನ್ರಿ, ರವೀಂದ್ರನಾಥ ಠಾಕೂರ್, ಸ್ಟೈನ್‌ಬೆಕ್, ಆರ್. ಕೆ. ನಾರಾಯಣ, ಹುಮಾಯುನ್ ಕಬೀರ್, ಮೊದಲಾದ ಲೋಕಪ್ರಸಿದ್ಧರ ಹಲವಾರು ಕೃತಿಗಳನ್ನು ಕನ್ನಡದ ಸಮರ್ಥ ಲೇಖಕರಾದ ಎಂ. ವಿ. ಸೀತಾರಾಮಯ್ಯ, ದೇ. ಜವರೇಗೌಡ, ಚಿ. ನ. ಮಂಗಳ, ಗೋಪಾಲಕೃಷ್ಣ ಅಡಿಗ, ಕೆ. ವೆಂಕಟರಾಮಪ್ಪ, ಅ. ಶಂಕರ ಮೊದಲಾದವರು ಅನುವಾದಿಸಿರುವುದನ್ನು ಇಲ್ಲಿ ಸ್ಮರಿಸಬಹುದು. ಈ ಅನುವಾದಗಳಿಂದ ನಮ್ಮ ಕಥನ ಸಾಹಿತ್ಯದ ಸಂಪತ್ತು ಖಂಡಿತವಾಗಿಯೂ ಹೆಚ್ಚಿದೆ.

ಕನ್ನಡ ಕಾದಂಬರಿಪ್ರಪಂಚ ಸಾಕಷ್ಟು ವಿಸ್ತಾರವಾಗಿದೆಯೆಂಬುದನ್ನು ಈ ಸ್ಪರ್ಧೆ ತೋರಿಸಿಕೊಟ್ಟಿದೆ.[1]

ನಮ್ಮ ಇಬ್ಬರು ಪ್ರಮುಖ ಕಾದಂಬರಿಕಾರರು ತಾವು ಕಾದಂಬರಿಗಳನ್ನು ಹೆಚ್ಚಾಗಿ ಬರೆಯುವುದು ಏಕೆ ಎಂಬ ಪ್ರಶ್ನೆಗೆ ಉತ್ತರ ಕೊಟ್ಟಿದ್ದಾರೆ. ತಮ್ಮ ಆರಂಭದ ಒಂದೆರಡು ಕೃತಿಗಳನ್ನು ಜನ ಓದಿದ ಮೆಚ್ಚಿದ ರೀತಿಯಿಂದ ಮತ್ತುಹಿಡಿದು ಒಂದರಮೇಲೊಂದರಂತೆ ಕಾದಂಬರಿಗಳನ್ನು ಬರೆಯುತ್ತಾ ಬಂದ ನಿರಂಜನರು ಹೇಳುತ್ತಾರೆ: "ಅಂಗಳ ಚಿಕ್ಕದು. ಇಲ್ಲಿ ನರ್ತಿಸಲಾರೆ-ಎನ್ನುವಂತಿಲ್ಲ. ಕಾದಂಬರಿ ಬಯಲು ಆದರ ವಿಸ್ತಾರಕ್ಕೆ ನಾನು ಶರಣು. ವ್ಯಕ್ತಿಗಳನ್ನು ಘಟನೆಗಳನ್ನು ಬದುಕನ್ನು ದೊಡ್ಡ ಪ್ರಮಾಣದಲ್ಲಿ ಸೃಷ್ಟಿಸಲು ಕಾದಂಬರಿಯೊಂದೇ ಮಾಧ್ಯಮ." ತಾವು ಕಾದಂಬರಿಗಳನ್ನು "ಸೃಷ್ಟಿಯ ಸಂತೋಷಕ್ಕೋಸ್ಕರ, ಕೃತಿಯನ್ನು ಜನ ಓದುವುದರಿಂದ ಬರೆಯುವವನಿಗೆ ಆಗುವ ಆನಂದಕ್ಕೋಸ್ಕರ" ಬರೆಯುತ್ತಿರುವುದಾಗಿ ಅವರು ಹೇಳಿಕೊಂಡಿದ್ದಾರೆ.[2] "ಕಾದಂಬರಿಕಾರನ ಮೂಲ ಬಂಡವಲು ಆತನ ಅನುಭವ.

---

[1] "ಸ್ಪರ್ಧೆಗೆ ಕೃತಿಗಳನ್ನು ಕಳುಹಿಸಿಕೊಡಲು ಇದ್ದ ಅವಧಿ ಕಡಿಮೆಯಾದರೂ ಸ್ಪರ್ಧೆಗಾಗಿ ಬಂದಿದ್ದ ಕೃತಿಗಳ ಸಂಖ್ಯೆ ಕಡಿಮೆಯಿಲ್ಲ. ಒಟ್ಟು ೧೪೭. ಪ್ರತಿಯೊಂದು ಕೃತಿಯು ಸರಾಸರಿ ಉದ್ದ ಇನ್ನೂರು ಪುಟವೆಂದು ಇಟ್ಟುಕೊಂಡರೂ ಒಟ್ಟು ಸುಮಾರು ಮೂವತ್ತು ಸಾವಿರ ಪುಟ! ಸ್ಪರ್ಧಿಗಳಲ್ಲಿ ಅನೇಕರು ಸಿದ್ಧಹಸ್ತರು; ಕೆಲವು ಎಳೆಯ ಕೈಗಳು. ಲೇಖಕರಿಗೆ ಹೆಗಲೆಣೆಯಾಗಿ ನಿಂತ ಲೇಖಕಿಯರು ಹಲವರು.... ಸ್ಪರ್ಧೆಗಾಗಿ ಬಂದ ಕಾದಂಬರಿಯಲ್ಲಿ ವಸ್ತುವೈವಿಧ್ಯವಿದೆ; ಕಲಾವಂತಿಕೆಯಿದೆ! ಪಾತ್ರಗಳ ಎರಚಾಟ ಇದೆ; ವಿವಿಧ ರಾಗಗಳ ಬಣ್ಣನೆಯಿದೆ; ಕನ್ನಡನಾಡಿನ ಕಡಲ ತೀರದಿಂದ ಹಿಡಿದು ದೂರದ ಅಸ್ಸಾಮಿನ ಟೀ ತೋಟದವರೆಗೆ ನಾನಾ ಪರಿಸರಗಳ ಪರಿಚಯವಿದೆ....ಸ್ಪರ್ಧೆಯ ಕಾದಂಬರಿಗಳಲ್ಲಿ ಪುರಾಣದ ಕಥೆಗಳಿವೆ. ಜಂತುಹುಳುವಿನ ಜಗತ್ತಿದೆ. ಇತಿಹಾಸದ ಹಿಂಗಣ್ಣಿನ ಕತೆಗಳಿವೆ....ಮನಸ್ಸಿನ ಆಳವನ್ನೂ ಜೀವನದ ವಿಸ್ತಾರವನ್ನೂ ಕಲಾತ್ಮಕವಾಗಿ ನಿರೂಪಿಸಬಲ್ಲ ಲೇಖಕರ ಸಂಖ್ಯೆ ಬೆಳೆಯುತ್ತಿದೆ ಯೆಂಬುದಕ್ಕೆ ಇವುಗಳಲ್ಲಿ ಸಾಕಷ್ಟು ಆಧಾರವಿದೆ." —ಎಚ್ಚೆಸ್ಕೆ: 'ತೀರ್ಪುಗಾರರ ಪರವಾಗಿ ನಾಲ್ಕು ಮಾತು', ಸುಧಾ-ಯುಗಾದಿ ಸಂಚಿಕೆ ೧೯೬೭, ಪು. ೨೫.

[2] ನಿರಂಜನ, 'ನಾನು ಕಾದಂಬರಿಗಳನ್ನೇ ಏಕೆ ಹೆಚ್ಚಾಗಿ ಬರೆದೆ?' ಕರ್ಮವೀರ ದೀಪಾವಳಿ ಸಂಚಿಕೆ ೧೯೬೬, ಪು. ೪೦.

ನೂರಾರು ಊರು ಸುತ್ತಿ, ಸಾವಿರಾರು ಜನರನ್ನು ಕಂಡು, ಜೀವನದ ಸಹಸ್ರ ಮುಖಗಳ ಪರಿಚಯ ಮಾಡಿಕೊಂಡಾಗಲೇ ಕಾದಂಬರಿಯಲ್ಲಿ ವಾಸ್ತವತೆಯೂ ಜೀವಂತಿಕೆಯೂ ಎದ್ದು ಕಾಣುತ್ತದೆ" ಎಂದು ಹೇಳುವ ಬಸವರಾಜ ಕಟ್ಟೀಮನಿಯವರು "ನಾನು ಸಾಯುವವರೆಗೆ ಬರೆದರೂ ಮುಗಿಯದಷ್ಟು ವಿಷಯಸಂಗ್ರಹವಿದೆಯಲ್ಲ? ನಾನು ತಿರುಗಿದ್ದೇನು ಕಡಿಮೆಯೆ?" ಎಂದೂ ಪ್ರಶ್ನಿಸುತ್ತಾರೆ. ಕಾದಂಬರಿ ಸೃಷ್ಟಿ ಅವರಿಗೆ ಸಹಜವಾದ ಒಲವಾಗಿದೆ. ಆದ್ದರಿಂದಲೇ ಅವರೆನ್ನುತ್ತಾರೆ: "ಕಥೆ ಕಾದಂಬರಿಗಳ ರಚನೆಯಲ್ಲಿ ಮಾತ್ರ ನಾನು ಸುಖವನ್ನೂ ಸಮಾಧಾನವನ್ನೂ ಪಡೆದಿದ್ದೇನೆ. . . ಸಣ್ಣ ಕಥೆ ಕಾದಂಬರಿಗಳ ಬಗೆಗೆ ನನಗೆ ಮೊದಲಿನಿಂದಲೂ ಇಂಥ ಒಲವು ಬೆಳೆದು ಬಂದಿದೆ. ಎಂತಲೇ ನಾನು ಈ ಎರಡು ವಿಭಾಗದಲ್ಲಿಯೇ ಹೆಚ್ಚಾಗಿ ಕೆಲಸ ಮಾಡುತ್ತಲಿದ್ದೇನೆ....ಕಥೆ ಕಾದಂಬರಿಗಳ ರಚನೆಯಿಂದ ನನ್ನ ಮನಸ್ಸಿಗೆ ಶಾಂತಿಯೂ ತೃಪ್ತಿಯೂ ಲಭಿಸುತ್ತಿದೆ."[1] ಹೀಗೆ ಕಾದಂಬರಿಯ ವ್ಯಾಪ್ತಿ, ವಿಸ್ತಾರಗಳನ್ನು ಅರಿತುಕೊಂಡಿರುವ ಲೇಖಕರು ಅದನ್ನು ಸಹಜವಾಗಿ ತಮ್ಮ ಕ್ಷೇತ್ರವನ್ನಾಗಿ ಮಾಡಿಕೊಂಡಿರುವುದು ಸಮಾಧಾನದ ಸಂಗತಿ. ಈ ಅರಿವಿನ ಲೇಖಕರಿಂದ ಕನ್ನಡ ಕಾದಂಬರಿ ಇನ್ನೂ ಎತ್ತರಕ್ಕೆ ಬೆಳೆಯಬಹುದೆಂದು ನಾವು ಆಶಿಸಬಹುದಾಗಿದೆ.

ಈ ಸಮೀಕ್ಷೆಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಸುಮಾರು ಎಪ್ಪತ್ತು ಜನ ಲೇಖಕರ (ಇವರಲ್ಲಿ ಹದಿಮೂರು ಜನ ಮಹಿಳೆಯರು!) ನೂರ ಇಪ್ಪತ್ತು ಕೃತಿಗಳು ನಮ್ಮ ಗಮನಕ್ಕೆ ಬಂದಿವೆ.[2] ಈ ಸಂಖ್ಯೆ ನಿಸ್ಸಂದೇಹವಾಗಿ ಇನ್ನೂ ದೊಡ್ಡವು.

ಅ. ನ. ಕೃಷ್ಣರಾಯರು, ಕೃಷ್ಣಮೂರ್ತಿ ಪುರಾಣಿಕರು ಹಾಗೂ ನಾಡಿಗೇರ ಕೃಷ್ಣರಾಯರು ಈ ಎರಡು ವರ್ಷಗಳಲ್ಲಿ ಹೆಚ್ಚು ಸಂಖ್ಯೆಯ ಕಾದಂಬರಿಗಳನ್ನು ರಚಿಸಿರುವ ಲೇಖಕರಾಗಿದ್ದಾರೆ. ಅವರಲ್ಲಿ ಒಬ್ಬೊಬ್ಬರೂ ಎಂಟೆಂಟು ಕಾದಂಬರಿಗಳನ್ನು ಬರೆದಿದ್ದಾರೆ. ಹಳತು–ಹೊಸತರ ಸಂಕ್ರಮಣ, ಅಣ್ಣ

---

[1] ಬಸವರಾಜ ಕಟ್ಟೀಮನಿ, 'ನಾನು ಕಾದಂಬರಿಗಳನ್ನೇ ಏಕೆ ಬರೆವೆ?' ಅದೇ. ಪು. ೩೭.

[2] ಮೊದಲನೆಯ ಅನುಬಂಧವನ್ನು ನೋಡಿ.

ತಂಗಿಯರ ಪರಸ್ಪರ ಪ್ರೇಮ ತ್ಯಾಗಗಳು, ಕಾರ್ಮಿಕರ ಸಮಸ್ಯೆ, ತಾಯಿ ಜೀವನದ ಆದರ್ಶ, ಋಜು ಜೀವನಕ್ಕಾಗಿ ಹೆಣ್ಣು ಪಡುವ ಬವಣೆ—ಹೀಗೆ ಹಲವು ಸಮಸ್ಯೆಗಳು ಅನಕೃ ಅವರ ಕಾದಂಬರಿಗಳಿಗೆ ವಸ್ತುವಾಗುತ್ತವೆ. ಭಾರತೀಯ ಸಂಸ್ಕೃತಿ, ಕುಟುಂಬ ಜೀವನಗಳನ್ನು ಕುರಿತು ಬರೆಯುವಾಗ ಅವರಿಗೆ ಇನ್ನಿಲ್ಲದ ಉತ್ಸಾಹ. ಬರವಣಿಗೆ ಲೀಲಾಜಾಲವಾಗಿ ಸಿದ್ಧಿಸಿರುವ, ಸಂಭಾಷಣೆಗಳಲ್ಲಿಯೇ ಎಲ್ಲವನ್ನೂ ತರಲು ಸಮರ್ಥರಾಗಿರುವ ಅನಕೃ ಸಣ್ಣ ಕಥೆಯಾಗಬಲ್ಲ ವಸ್ತುವಿಗೆ ಕಾದಂಬರಿಯ ವೇಷ ತೊಡಿಸಿಬಿಡುತ್ತಾರೆ. 'ಕಣ್ಣಿನ ಗೊಂಬೆ' ಯಂತಹ ಕಾದಂಬರಿಗಳು ಇದಕ್ಕೆ ಸಾಕ್ಷಿ. ನೂರು ಕಾದಂಬರಿಗಳನ್ನು ಮುಗಿಸಿ ಎರಡನೆಯ ನೂರರಲ್ಲಿಯೂ ದಶಕವನ್ನು ದಾಟಿ ರುವ ಅನಕೃ ಅವರ ಬರವಣಿಗೆಯಲ್ಲಿ ಹೊಸದೇನೂ ಇಲ್ಲ. ಪಾತ್ರಗಳು, ಸನ್ನಿವೇಶ, ಸಮಸ್ಯೆಗಳೆಲ್ಲ ಮತ್ತೆ ಮತ್ತೆ ಜಾಳಾಗಿ ಬರುತ್ತಲೇ ಇರುತ್ತವೆ. ಒಳ್ಳೆಯದು-ಕೆಟ್ಟದು ಅನಕೃ ಪ್ರಪಂಚದಲ್ಲಿ ಎರಡು ಕೊನೆಗಳು. ಅವುಗಳ ನಡುವಿನಲ್ಲಿ ಅವರಿಗೆ ಅಷ್ಟಾಗಿ ಆಸಕ್ತಿಯಿಲ್ಲ. ಐವತ್ತು ಕಾದಂಬರಿಗಳನ್ನು ಮುಗಿಸಿರುವ ಪುರಾಣಿಕರು ಸಮಕಾಲೀನ ಜೀವನವನ್ನೂ, ಕೌಟುಂಬಿಕ ಸಮಸ್ಯೆಗಳನ್ನೂ ತಮ್ಮದೇ ಚೌಕಟ್ಟಿನಲ್ಲಿ ಎತ್ತಿಕೊಳ್ಳುತ್ತಾರೆ. ರಾಜಕೀಯ ಭ್ರಷ್ಟಾಚಾರವನ್ನು ಅವರು 'ಕಾಂಚನ ಕಸ್ತೂರಿ' ಯಲ್ಲಿ ತಂದರೆ, 'ಹಿಮ ಗಿರಿಯ ಗೌರಿ' ಯಲ್ಲಿ ಚೀನೀದಾಳಿಯ ಹಿನ್ನೆಲೆ ಬರುತ್ತದೆ. ಮೂವರು ವಿದ್ಯಾವತಿಯರ ಮೂರು ಬೇರೆ ಬೇರೆ ಮುಖಗಳನ್ನು 'ಮೂವು ಮಲ್ಲಿಗೆ'ಯಲ್ಲಿ ಆರಂಭಿಸಿ 'ವಿದ್ಯಾ ಸುಂದರಿ' ಯಲ್ಲಿ ಮುಗಿಸಿದ್ದಾರೆ. ಕುಟುಂಬ ಜೀವನದ ಚಿತ್ರಗಳನ್ನು ಕೊಡುವಲ್ಲಿ ಪುರಾಣಿಕರು ಕುಶಲಿಗಳು. ಆದರೆ ಈ ಕೌಶಲದಲ್ಲಿ ನಯಗಾರಿಕೆಯಾಗಲಿ, ಚಿತ್ರಣದಲ್ಲಿ ಆಳವಾಗಲೀ ಕಂಡುಬರುವುದಿಲ್ಲ. "ನನ್ನ ಜೀವನದಲ್ಲಿ ತೃಪ್ತಿ ಬಂದಿದೆ. ಆದರೆ ಹಂಬಲ ಇನ್ನೂ ನೀಗಿಲ್ಲ. ನನ್ನಿಂದ ಒಳ್ಳೆಯ ಒಂದು ಕೃತಿಯಾದರೂ ಇನ್ನೂ ಬರಲಿಲ್ಲವೆಂಬ ದುಃಖ ನನ್ನದು" ಎಂದು ಪುರಾಣಿಕರೇ ಹೇಳಿಕೊಳ್ಳುತ್ತಾರೆ. ನಾಡಿಗೇರ ಕೃಷ್ಣರಾಯರು ನಗೆಬರಹಗಳ ಮೂಲಕ ಪ್ರಸಿದ್ಧಿಗೆ ಬಂದವರು. ಕಾದಂಬರಿ ಅವರ ಎರಡನೆಯ ಪ್ರೇಮ. ಎರಡನೆಯ ಪ್ರೇಮ ಮೊದಲಿನದನ್ನು ಗೆಲ್ಲುತ್ತದೆಂಬ ಹೇಳಿಕೆ ನಾಡಿಗೇರರ ವಿಷಯ ದಲ್ಲಿ ನಿಜವಾಗಿ ಅವರು ಈಗ ಕಾದಂಬರಿಕಾರರಾಗಿದ್ದಾರೆ. ಅವರ ಕಾದಂಬರಿ

ಗಳಲ್ಲಿ ಗಂಡು–ಹೆಣ್ಣು ಪ್ರಥಮ; ಪ್ರಧಾನ. ಬಣ್ಣದ ಚಿಟ್ಟೆ, ಹೆಣ್ಣಿನ ತ್ಯಾಗ, ದಾಯಾದಿ ಕಲಹ, ಗ್ರಾಮಜೀವನದ ವೈಷಮ್ಯ, ಹೆಣ್ಣಿನ ವ್ಯಾಮೋಹ ದಿಂದಾಗುವ ಅನರ್ಥಗಳು, ಕುಲದ ಪವಿತ್ರತೆ ಹೀಗೆ ತಮ್ಮ ಕಾದಂಬರಿಗಳಲ್ಲಿ ಒಂದೊಂದು ಸಮಸ್ಯೆ, ವಸ್ತು ಇರುವುದಾಗಿ ನಾಡಿಗೇರರು ಹೇಳಕೊಳ್ಳು ತ್ತಾರೆ. ಆದರೆ ಕಾದಂಬರಿಗಳಲ್ಲಿ ಇವೆಲ್ಲ ಮರೆಯಾಗಿ, ಪಾತ್ರಗಳು ಬಾಟಲಿ ಯನ್ನು ಎತ್ತಿ ದೀಪ ಆರಿಸುವುದಕ್ಕೆ ಕಾತರರಾಗಿರುವಂತೆ ತೋರಿಬರು ತ್ತದೆ. ಕಾದಂಬರಿಕಾರರು ವಾಚಕರನ್ನು ಆಕರ್ಷಿಸುವುದರಲ್ಲಿ ನಿರತರಾಗಿರು ವಂತೆ ಕಾಣುತ್ತದೆ. ಲೇಖಕನಿಗೆ ಬೇಕಾದದ್ದು ಓದುಗರೆಂದೂ, ತಮಗೆ ಓದುಗರ ಕೊರತೆ ಇಲ್ಲವೆಂದೂ ನಾಡಿಗೇರರು ಹೇಳಿಕೊಳ್ಳುತ್ತಾರೆ.[1] ಇದು ಅಪಾಯಕಾರೀ ತೃಪ್ತಿ. ಏಕೆಂದರೆ ಅಫೀಮಿನ ಅಂಗಡಿಯವನು ತನ್ನ ವ್ಯಾಪಾರದಲ್ಲಿ ಪಡೆಯುವ ತೃಪ್ತಿಯನ್ನು ಪಕ್ಕದ ಪನ್ನೀರಿನ ಅಂಗಡಿಯವನು ಪಡೆಯಲಾರನೇನೊ! ಈ ಮಾತು ಕನ್ನಡ ಕಥನ ಸಾಹಿತ್ಯದಲ್ಲಿ ಕಾಮದ ಕೊಳಕನ್ನು ತುಂಬುತ್ತಿರುವ ಎಲ್ಲ ಲೇಖಕರಿಗೂ ಅನ್ವಯಿಸುತ್ತದೆ. ಹೆಚ್ಚು ಸಂಖ್ಯೆಯ ಕಾದಂಬರಿಗಳನ್ನು ನಾಡಿಗೇರರು ರಚಿಸಿದ್ದರೂ ಅವನ್ನು ಓದಿದ ಮೇಲೆ ಯಾವುದೊಂದೂ, ಕೆಲಕಾಲವಾದರೂ, ನೆನಪಿನಲ್ಲಿ ಉಳಿಯದೆ ಹೋಗುವುದು ದುರ್ದೈವದ ಸಂಗತಿ.

ಶಿವರಾಮ ಕಾರಂತರು 'ಒಂಟಿದನಿ' ಹಾಗೂ 'ಸ್ವಪ್ನದ ಹೊಳೆ' ಎಂಬ ಎರಡು ಕಾದಂಬರಿಗಳನ್ನು ಕೊಟ್ಟಿದ್ದಾರೆ. ಎರಡೂ ಕಾದಂಬರಿಗಳ ವಸ್ತು, ವಿನ್ಯಾಸ ಬೇರೆ ಬೇರೆಯಾಗಿದ್ದರೂ, ಎರಡರಲ್ಲಿಯೂ ಕೇಳಿಬರುವುದು ಒಂಟಿ ದನಿಯೆ; ಹರಿಯುವುದು ಸ್ವಪ್ನದ ಹೊಳೆಯೆ. ಈ ದನಿ–ಹೊಳೆಗಳು ಆದರ್ಶ. ಮೊದಲಿನವರಲ್ಲಿ ಆದರ್ಶ–ವಾಸ್ತವಿಕತೆಗಳು ಮೇಳವಿಸಿಲ್ಲ. ಆದರೆ ಎರಡನೆ ಯದರ ಬೆಳವಣಿಗೆ ಸಾಕಷ್ಟು ಸಹಜವಾಗಿ ಬಂದಿದೆ. ಕಾರಂತರಲ್ಲಿ ಬಣ್ಣದ ಬೆಡಗಿಲ್ಲ. ನೀವು ಒಪ್ಪಿ ಬಿಡಿ, ಅದರ ದಾರಿ ಅವರಿಗೆ ನೇರ, ಸ್ಪಷ್ಟ.

ತರಾಸು ಅವರ ನಾಲ್ಕು ಕಾದಂಬರಿಗಳಲ್ಲಿ 'ಹಾವು ಹಿಡಿದವರು' ಸಾಮಾಜಿಕ. ಇದರ ಉತ್ತರಾರ್ಧ ಅಚ್ಚಿನಲ್ಲಿದೆಯೆಂದು ಅವರು ಹೇಳಿಕೊಂಡು

---

[1] ನಾಡಿಗೇರ ಕೃಷ್ಣರಾಯ, ವಯಸ್ಸಿಗೆ ಬಂದವಳು, ಎರಡು ಮಾತು.

ವರ್ಷದ ಮೇಲಾಗಿದೆ. ಅದು ಪೂರ್ತಿಗೊಳ್ಳದೆ ಈ ಕಾದಂಬರಿಯ ಬಗೆಗೆ ಏನು ಹೇಳುವುದೂ ಸರಿಯಾಗಲಾರದು. ಏಕೆಂದರೆ ಈ ಕಾದಂಬರಿ ಈಗಿರು ವಂತೆ ಅರ್ಥಶೂನ್ಯ ; ಅಸಂಬದ್ಧ. ಕಾದಂಬರಿಕಾರರೂ ಕಲಾದೃಷ್ಟಿಯಿಲ್ಲದೆ, ವ್ಯಾಪಾರೀ ದೃಷ್ಟಿಯಿಂದ ಕಾದಂಬರಿಗಳನ್ನು ಹೇಗೆ ಪ್ರಕಟಿಸುತ್ತಾರೆಂಬು ದಕ್ಕೆ ಇದು ಒಂದು ಉದಾಹರಣೆ. 'ಕಸ್ತೂರಿಕಂಕಣ', 'ರಾಜ್ಯದಾಹ' ಗಳೆರಡೂ ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದವು. ತರಾಸು ಅವರ ಹೆಸರಾಂತ 'ಕಂಬನಿಯ ಕುಯಿಲು' ಮತ್ತು 'ರಕ್ತರಾತ್ರಿ' ಕಾದಂಬರಿಗಳ ನಡುವಿನ ಕಾಲದ ಚಿತ್ರವನ್ನು 'ರಾಜ್ಯದಾಹ' ನೀಡುತ್ತದೆ. 'ಅಗ್ನಿರಥ-ಮುಕ್ತಿಪಥ' ಅಲ್ಲಮ ಪ್ರಭುವಿನ ಜೀವನವನ್ನು ಕುರಿತದ್ದು. ಇದರ ನಿರ್ವಹಣೆ ಯಲ್ಲಿ ಆ ಮಹಾಜ್ಞಾನಿಯ ಬದುಕು ಸಹಜಶಕ್ತಿಯಿಂದ ವಿಕಸಿಸಿದ ಪವಾ ಡವೇ ವಿನಾ ಕಾಲದ ಸೃಷ್ಟಿಯಲ್ಲ ಎಂಬ ಮನೋಭಾವವನ್ನು ತರಾಸು ತಾಳಿ ದ್ದಾರೆ. ಕಟ್ಟೀಮನಿಯವರ ಏಕಮಾತ್ರ ಕಾದಂಬರಿ 'ಪ್ರಪಾತ' ಮೂರು ಪಾತ್ರಗಳನ್ನು ಕೇಂದ್ರವಾಗಿ ಉಳ್ಳ ವಿಫಲ ಪ್ರೇಮದ ಕಥೆ. ಕಥೆಯಲ್ಲಿ ಹೊಸದೇನೂ ಇಲ್ಲ. ಆದರೆ ಕಟ್ಟೀಮನಿಯವರು ತಮ್ಮ ಸವೇಗ ಬರವಣಿಗೆ ಯಿಂದಾಗಿ ಅದನ್ನು ವಾಚನೀಯವನ್ನಾಗಿಸಿದ್ದಾರೆ. ನಿರಂಜನರು ತಮ್ಮ 'ನೂರು ಜುಟ್ಟು ಮೂರು ಜಡೆ'ಯಲ್ಲಿ ಗ್ರಾಮ ಜೀವನದ ಪರಿವರ್ತನೆ ಯಿಂದಾಗಿ ಕಣಿವೆ ಹಳ್ಳಿ ಮಧುಪುರವಾಗುವ ಚಿತ್ರವನ್ನು ಕೊಟ್ಟಿದ್ದಾರೆ. ಈ ಕಥೆ ಇನ್ನೂ ಬೆಳೆಯುವ ಸೂಚನೆಯನ್ನು ನಾವು ಕಾಣಬಹುದು. ಪಾತ್ರಗಳ ಸಂಖ್ಯೆ ದೊಡ್ಡದಾಗಿ ಯಾವ ಪಾತ್ರವೂ ಸ್ಪಷ್ಟವಾಗಿ ರೂಪುಗೊಳ್ಳದೆ ಹೋಗಿರುವುದು ಈ ಕಾದಂಬರಿಯ ದೋಷ. ಕೊಡಗಿನ ಇತಿಹಾಸಕ್ಕೆ ಸಂಬಂಧಿಸಿದ 'ಸ್ವಾಮಿ ಅಪರಂಪಾರ' ಎಂಬ ಕಾದಂಬರಿಯನ್ನೂ ನಿರಂಜನರು ಪ್ರಕಟಿಸಿದ್ದು, ಅದರಲ್ಲಿ ಈ ದೋಷವನ್ನು ಕಳೆದುಕೊಂಡಿದ್ದಾರೆ. ಇದರ ಪಾತ್ರ ಪೋಷಣೆ ಎತ್ತಿ ಹೇಳಬೇಕಾದ ಅಂಶ. ಐತಿಹಾಸಿಕ ಕಾದಂಬರಿಕಾರ ರಾದ ಕೊರಟ ಶ್ರೀನಿವಾಸರಾಯರು 'ಉಭಯ ಲೋಕೇಶ್ವರ' ಮತ್ತು 'ರಾಜ್ಯಕ್ಷಯ' ಎಂಬ ಎರಡು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಬಹು ಸೂಕ್ಷ್ಮ ವಾದ ಇತಿಹಾಸದ ಅಂಶದ ಮೇಲೆ ಕೊರಟಿಯವರು ಕಾದಂಬರಿಯ ಹಂದರ ವನ್ನು ನಿರ್ಮಿಸಬಲ್ಲರು. ಕರ್ಣಾಟಕದ ಸ್ವಾತಂತ್ರ್ಯವೀರರಲ್ಲಿ ಒಬ್ಬನಾದ

ಡೋಂಡಯವಾಘನನ್ನು ಮೊದಲ ಕಾದಂಬರಿ ಕುರಿತಿದ್ದರೆ, ಎರಡನೆಯದು ಲೇಖಕರ ವಿಜಯನಗರ ಕಾದಂಬರಿ ಮಾಲೆಯಲ್ಲಿ ಕೊನೆಯದು.

ಭಾರತೀಸುತ, ಮಿರ್ಜಿ ಅಣ್ಣಾರಾಯ, ವಿ. ಎಂ. ಇನಾಂದಾರ್, ಬಿ. ಪುಟ್ಟಸ್ವಾಮಯ್ಯ, ಶ್ರೀರಂಗ ಇವರ ಒಂದೊಂದು ಕಾದಂಬರಿಗಳು ಪ್ರಕಟ ವಾಗಿವೆ. ಭಾರತೀಸುತರು ಎಂದಿನಂತೆ ತಮ್ಮ 'ಗಿರಿಕನ್ಯೆ' ಯಲ್ಲಿ ಘಟ್ಟದ ಕೆಳಗಿನ ಗಿರಿಜನರ ಒಂದು ಪಂಗಡವಾದ ಪಣಿಯರ ಜೀವನವನ್ನು ಚಿತ್ರಿಸಿರುವುದಾಗಿ ಹೇಳಿಕೊಂಡಿದ್ದಾರೆ. ತಮ್ಮ ಹಿಂದಿನ ಕಾದಂಬರಿಗಳಿಗಿಂತ ಭಾರತೀಸುತರು ಹೆಚ್ಚಿನದೇನನ್ನೂ ಸಾಧಿಸಿಲ್ಲ. ಪಣಿಯ ಹೆಣ್ಣೊಂದು ತನ್ನ ಒಡೆಯನಿಂದ ತನ್ನ ಶೀಲವನ್ನು ಹೇಗೆ ಕಾಪಾಡಿಕೊಂಡಿತೆಂಬುದೇ ಇಲ್ಲಿನ ಕಥೆ. ಹಿಂದಿನ 'ಹುಲಿಯಬೋನಿ' ನಲ್ಲೂ ಅದೇ ಕಥೆ. ಆದರೆ ಅಲ್ಲಿ ಹೆಣ್ಣು ಸೋತಿದ್ದಳು; ಇಲ್ಲಿ ಅವಳು ಸೋಲಲಿಲ್ಲ. ಅಷ್ಟೇ ವ್ಯತ್ಯಾಸ. ಪಣಿಯರ ಜೀವನ, ಸಂಪ್ರ ದಾಯ, ನಂಬಿಕೆ ಇವುಗಳನ್ನು ಬಲ್ಲ ಭಾರತೀಸುತರು ಅದೇನನ್ನೂ ತಮ್ಮ ಕಾದಂಬರಿಯಲ್ಲಿ ಕೊಡದಿರುವುದು ಒಂದು ನಷ್ಟವೇ ಸರಿ. ಶಿಕ್ಷಕನೊಬ್ಬನ ಒಂದು ವಾರದ ದಿನಚರಿಯ ರೂಪದಲ್ಲಿ ಮೈದಾಳಿರುವ ಅಣ್ಣಾರಾಯರ 'ಹದ ಗೆಟ್ಟ ಹಳ್ಳಿ', ಎಲ್ಲ ಕ್ಷೇತ್ರಗಳಲ್ಲಿಯೂ ಹದಗೆಡುತ್ತಿರುವ ನಮ್ಮ ಸಮಕಾಲೀನ ಜೀವನದ ಒಂದು ನಿರೂಪಣೆಯಾಗಿದೆ. ಒಂದು ವಾರದ ಹಳ್ಳಿಜೀವನದಲ್ಲಿ ಅವನತಿಗೆ ಒಳಗಾಗಿರುವ ಜೀವನ ಮೌಲ್ಯಗಳ ವಿಶ್ಲೇಷಣೆಯಿದೆ. ಬದುಕನ್ನು ಸಮಜೋಡಿಯಾಗಿ ನಡೆಸುತ್ತಿರುವ ಒಳ್ಳೆಯದು–ಕೆಟ್ಟದು ಇವುಗಳ ಸಂಬಂಧ ವನ್ನು ಇನಾಂದಾರರು ತಮ್ಮ 'ಮಂಜು ಮುಸುಕಿದ ದಾರಿ'ಯಲ್ಲಿ ನೋಡಲು ಯತ್ನಿಸಿದ್ದಾರೆ. ಒಂದು ಕಥೆಯ ಅಸ್ತಿವಾರದ ಮೇಲೆ ಕಾದಂಬರಿಯ ಉಳಿದ ಪರಿಕರಗಳ ಭವನವನ್ನು ನಿರ್ಮಿಸುವುದು ಅವರ ಬಗೆ. ಎಷ್ಟೋ ಸಲ ಈ ಅಸ್ತಿವಾರವೊಂದೇ ನಮಗೆ ಕಾಣ ಸಿಕ್ಕುವುದು. ಇನಾಂದಾರರ ಹಿಂದಿನ ಕಾದಂಬರಿಗಳೊಂದಿಗೆ ಹೋಲಿಸಿ ನೋಡಿದರೂ ಈ ಕೃತಿ ಯಶಸ್ವಿಯಾದು ದಲ್ಲವೆಂದೇ ಎನಿಸುತ್ತದೆ. ಬಿ. ಪುಟ್ಟಸ್ವಾಮಯ್ಯನವರ 'ಅರ್ಧಾಂಗಿ' ಒಂದು ಸಾಮಾಜಿಕ ಚಿತ್ರಣ. ಗತ ಇತಿಹಾಸದಲ್ಲಿ ತಮ್ಮ ಕಲ್ಪನೆಯ ಹಾಯಿ ಯನ್ನು ಹರಿಯಬಿಡುವ ಪುಟ್ಟಸ್ವಾಮಯ್ಯನವರು ಸಾಮಾಜಿಕಕ್ಕೆ ಇಳಿದರೇ ಎಂದು ಆಶ್ಚರ್ಯಪಡಬೇಕಾಗಿಲ್ಲ. ಹತ್ತುಹದಿನೈದು ವರ್ಷಗಳ ಕೆಳಗೆ ಅವರು

ರಚಿಸಿದ್ದ 'ಮಲ್ಲಮ್ಮನ ಪವಾಡ' ಎಂಬ ಕಿರುಕೃತಿಯ ವಿಸ್ತೃತ ರೂಪವೇ 'ಅರ್ಧಾಂಗಿ'! 'ಸೌಜನ್ಯದ ಬೆಲೆ' ನಾಟಕಕಾರ ಶ್ರೀರಂಗರ ಕಾದಂಬರಿ. ಲೀಲಾ ಎಂಬ ಹೆಣ್ಣುಮಗಳು ಹೇಳಿಕೊಳ್ಳುವ ಆತ್ಮಕಥಾ ರೂಪದ ಈ ಕೃತಿಯಲ್ಲಿ ಹೆಣ್ಣಿನ ಜೀವನದ ನಾನಾ ಘಟನೆಗಳ-ಹಿನ್ನೆಲೆಯಲ್ಲಿ ಅವಳ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಲಾಗಿದೆ. ಘಟನೆಗಳು ಕಥಾನಾಯಕಿಯ ವಾಗಿದ್ದು, ಪ್ರತಿಕ್ರಿಯೆಗಳು ಕಾದಂಬರಿಕಾರರವಾಗಿ ಎರಡಕ್ಕೂ ಹೊಂದಾಣಿಕೆ ಇಲ್ಲದೆ ಹೋಗಿರುವುದೇ ಈ ಕೃತಿಯ ದೌರ್ಬಲ್ಯವಾಗಿದೆ.

ಮ. ನ. ಮೂರ್ತಿಯವರು 'ಕಾಲಸರ್ಪಿಣಿ' ಯಲ್ಲಿ ವಾಮಾಚಾರದ ಕಥೆಯನ್ನು ಹೇಳಿದ್ದರೆ, 'ದೇವರಹಸ್ಯ' ದಲ್ಲಿ ಜ್ಯೋತಿಷ್ಯವನ್ನೇ ಆಧರಿಸಿದ್ದಾರೆ. 'ವಸುಂಧರೆ' ಯಲ್ಲಿ ಎಡವಿದ ಹೆಣ್ಣಿನ ಸಮಸ್ಯೆಯಿದ್ದು ಈ ಮೂರೂ ಕೃತಿಗಳಲ್ಲಿ ಮೂರ್ತಿಯವರು ಸುಲಭವಾಗಿ ಕಥೆಯನ್ನು ಹೇಳಿಕೊಂಡು ಹೋಗಿದ್ದಾರೆ. ಯಶಸ್ವಿಯಾದ ಐತಿಹಾಸಿಕ ಕಾದಂಬರಿಗಳನ್ನು ಬರೆದಿರುವ ಅವರು ಒಳ್ಳೆಯ ಸನ್ನಿವೇಶಗಳನ್ನೂ ಚಿತ್ರಿಸಬಲ್ಲರು. ಲಕ್ಕಣ್ಣ-ಈರಣ್ಣ ಎಂಬ ಸುಪ್ರಸಿದ್ಧ ಜನಪದ ಲಾವಣಿಯ ಆಧಾರದ ಮೇಲೆ ತ. ಪು. ವೆಂಕಟರಾವ್ ಅವರು 'ಹರಿಯಳಾದೇವಿ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ. ನಾ. ರಾಜಣ್ಣನವರು 'ಮುಗಿಲಮಾಲೆ' ಯ ಎರಡನೆ ಭಾಗದಲ್ಲಿ ತಮ್ಮ ಕಲಾವಿದನ ಕಥೆಗೆ ಮುಕ್ತಾಯ ಹಾಡಿದ್ದಾರೆ. ಸತ್ಯಮೂರ್ತಿಯವರ 'ಒಲವಿನ ಒಸರಿ' ಗೆ ನಾಗಾ ಹಿನ್ನೆಲೆಯಂತೆ! ಕನ್ನಡ ಕವಯಿತ್ರಿಯರಲ್ಲಿ ಒಬ್ಬಳಾದ 'ಹೆಳವನಕಟ್ಟೆ ಗಿರಿಯಮ್ಮ' ನನ್ನು ಕುರಿತು ಮೈ. ಸು. ಶೇಷಗಿರಿರಾಯರು ಕಾದಂಬರಿ ಬರೆದಿದ್ದಾರೆ. ಜಿ. ವೆಂಕಟಯ್ಯನವರು 'ಚಂದನದ ಕೊರಡು' ಕೃತಿಯಲ್ಲಿ ವೈದ್ಯನೊಬ್ಬನ ಆದರ್ಶದ ಮುಖವನ್ನು ನಿರೂಪಿಸಿದ್ದಾರೆ. ಇಲ್ಲಿನ ಬರವಣಿಗೆ ಸರಾಗವಾಗಿದೆ; ಆಕರ್ಷಕವಾಗಿದೆ. ವಿಶುಕುಮಾರರ 'ನೆತ್ತರ ಗಾನ' ದಲ್ಲಿ ಯಕ್ಷಗಾನ ಕಲೆ, ಕಲಾವಿದರು ತುಂಬಿದ್ದಾರೆ. ಇದು ಸ್ವಾರಸ್ಯವಾದ ಬರವಣಿಗೆ. ಆದರೆ ಬಲಿಯಬೇಕಾದುದು ಬಹಳವಿದೆ. ಪ್ರವಾಸ ಕಥನದ ಹೆಸರಿನಂತೆ ತೋರುವ ಸೂರ್ಯನಾಥ ಕಾಮತ್ತರ 'ಥೇಂಸ್‌ನಿಂದ ಗಂಗೆಗೆ', ಭಾರತೀಯ ಸಂಸ್ಕೃತಿಯ ಹಿರಿಮೆಯನ್ನು ಅಸಹಜವಾಗಿ ಹೊಗಳಿ ಹಾಡುತ್ತದೆ. ಸಶಸ್ತ್ರ ಡಕಾಯಿತರು ವಿನೋಬಾ ಅವರಿಗೆ ಶರಣಾಗತರಾಗಿ ಬಂದ

ಸಮಕಾಲೀನ ಇತಿಹಾಸದ ಒಂದು ಅಧ್ಯಾಯ ಪಿ. ವೆಂಕೋಬರಾವ್ ಅವರ 'ಜಂಬಲ ಕಣಿವೆಯ ಚಮತ್ಕಾರ'. ಬಿ. ಮಲ್ಲಿರಾಜ ಅರಸು ಅವರು ಗ್ರಾಮ ಸುಧಾರಣೆ, ಪಂಚಾಯ್ತಿ ರಾಜ್ಯಗಳನ್ನು ಕುರಿತು ಎರಡು ಪ್ರಚಾರ ಕಾದಂಬರಿ ಗಳನ್ನು ಬರೆದಿದ್ದು ಅವುಗಳಲ್ಲಿ ಕಲೆಯ ಯಾವ ಅಂಶವೂ ಇಲ್ಲ.

ಸೂರ್ಯನಾರಾಯಣ ಚಡಗ ಅವರು ಹೆಚ್ಚು ಸಂಖ್ಯೆಯನ್ನು ಸೃಷ್ಟಿಸುವ ಇನ್ನೊಬ್ಬ ಲೇಖಕರಾಗಿದ್ದು, ಈ ಅವಧಿಯಲ್ಲಿ ಐದು ಕಾದಂಬರಿಗಳನ್ನು ಬರೆ ದಿದ್ದಾರೆ. 'ಸೀಮಂತಿನಿ' ಸೂಳೆಯ ಮಗಳೊಬ್ಬಳು ಯಕ್ಷಗಾನ ಕಲಾವಿದ ನನ್ನು ಒಲಿದ ಕಥೆ; 'ಗಂಗಾಭವಾನಿ' ಹಳ್ಳಿಯ ಮಾಸ್ತರನೊಬ್ಬನ ಪುರಂತ; 'ಪದ್ಮ ಸರೋವರ' ಸೇಡು ತೀರಿಸಿಕೊಳ್ಳಲು ಜಕಣಿಯಾಗಿ ಬಂದ ಹೆಣ್ಣೊಂದರ ಕಥೆ. ಒಟ್ಟಿನಲ್ಲಿ ಚಡಗರು ಒರಟೊರಟಾಗಿ ಕಥೆ ಹೇಳಿಬಿಡುತ್ತಾರೆ. ಅದರ ಅಲಂಕರಣಗಳ ಬಗೆಗೆ ಅವರಿಗೆ ಆಸಕ್ತಿಯಿಲ್ಲ; ಶ್ರದ್ಧೆಯಿಲ್ಲ. ಫಲವಾಗಿ ಹಲವಾರು ಅಸಹಜತೆಗಳು ಅವರ ನಿರೂಪಣೆಯಲ್ಲಿ ತಲೆದೋರುತ್ತವೆ; ಕೃತಕತೆ ಮೂಡುತ್ತದೆ. ಶ್ರೀನಿವಾಸ ಉಡುಪರು ನಾಲ್ಕು ಕಾದಂಬರಿಗಳನ್ನು ಕೊಟ್ಟಿದ್ದರೂ ಒಂದರಲ್ಲಿಯೂ ಹೇಳಿಕೊಳ್ಳುವಂತಹ ಗುಣವಿಲ್ಲ. ಘಟನೆಗಳೆಲ್ಲ ಸರಳವಾಗಿ ನಡೆದು ಹೋಗುತ್ತವೆ; ಯಾವ ಘರ್ಷಣೆಯೂ ಇಲ್ಲ. ಪಾತ್ರ ನಿರ್ವಹಣೆಯಲ್ಲಿ ಅತಿ ಉದಾರತೆ. ಅವರ 'ಪ್ರೇಮ ಸಮರ' ವನ್ನೇ ಗಮನ ದಲ್ಲಿಟ್ಟುಕೊಂಡು ಈ ಅಂಶಗಳನ್ನು ನಾವು ಪರಿಶೀಲಿಸಬಹುದು.

ನಗೆ-ನಂಜು, ಕಟಕಿ-ವಿಡಂಬನೆ ಇವುಗಳನ್ನು ಪ್ರಧಾನವಾಗಿ ಉಳ್ಳ ಕೃತಿ ಗಳನ್ನು ದಾಶರಥಿ ದೀಕ್ಷಿತ್, ಎ. ಎಸ್. ಮೂರ್ತಿ, ಬೀಚಿ ಮೊದಲಾದವರು ಬರೆದಿದ್ದಾರೆ. ಬದುಕಿನ ಸಮಸ್ಯೆಗಳ ಬಗೆಗೆ ಕಾತರವಿದ್ದರೂ ಬೀಚಿಯವರ ಕಾದಂಬರಿಗಳು ಅವರ ಜಾಳಾದ ಶೈಲಿಯಿಂದ, ಅತಿಯಾದ ವ್ಯಂಗ್ಯ ವಿಡಂಬನೆ ಗಳಿಂದ ಪರಿಣಾಮವನ್ನು ಮಾಡದೇ ಹೋಗುತ್ತವೆ. ಅವರು ಕಾದಂಬರಿಯ ನಾನಾ ಅಂಗಗಳ ಸಮತೋಲನವನ್ನು ಕಾಯ್ದುಕೊಳ್ಳುವುದರಲ್ಲಿ ಅಸ ಮರ್ಥರು. 'ನಾನೂ ನೀನೂ ಜೋಡಿ' 'ಕಳ್ಳರ ಸಂತೆ' ಈ ಎರಡು ಹಾಸ್ಯ ಪೂರ್ಣ ಕಾದಂಬರಿಗಳಲ್ಲಿ ಮೂರ್ತಿಯವರು ನಾಟಕರಂಗದ ತಮ್ಮ ನಗೆ ಯನ್ನು ಕಾದಂಬರಿ ಕ್ಷೇತ್ರಕ್ಕೆ ತರುವ ಪ್ರಯತ್ನ ಮಾಡಿದ್ದಾರೆ. ದಾಶರಥಿ ದೀಕ್ಷಿತರ 'ಗಂಡಾಗಿ ಕಾಡಿದ್ದ ಗುಂಡ' ಉಲ್ಲೇಖನೀಯವಾಗಿದೆ. ಕಥೆಯನ್ನು

ಸ್ವಾರಸ್ಯವಾಗಿ ಹೇಳುವಲ್ಲಿ, ಅದನ್ನು ಉಲ್ಲಾಸಭರಿತವಾಗಿ ಬೆಳೆಸುವಲ್ಲಿ ದೀಕ್ಷಿತರು ಒಳ್ಳೆಯ ಯಶಸ್ಸು ಪಡೆದಿದ್ದಾರೆ. ಅವರು ಇಂಥ ಕೃತಿಗಳನ್ನು ಇನ್ನೂ ಬರೆಯಬೇಕು.

ನಚಿಕೇತ, ದಯಾನಂದ ತೊರ್ಕೆ, ರಘುರಾಮ ಹೆಗ್ಡೆ, ಜಿ. ಎ. ರೆಡ್ಡಿ, ಪರಂಜ್ಯೋತಿ, ಶಿವಾಜಿರಾವ್ ಮೊದಲಾದ ಹಲವು ಹೊಸ ಲೇಖಕರು ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಪ್ರವೇಶಿಸಿದ್ದಾರೆ. ಅವರ ಕೃತಿಗಳಲ್ಲಿ ಅಪಕ್ವತೆ, ಅಸಹಜತೆ, ಆಭಾಸಗಳು ತಲೆದೋರಿದರೂ ಮುಂದೆ ಅವರುಗಳು ಕನ್ನಡ ಕಾದಂಬರಿಯನ್ನು ಬೆಳೆಸಿಯಾರೆಂದು ನಂಬಬಹುದಾಗಿದೆ. ಪೂರ್ಣಚಂದ್ರ ತೇಜಸ್ವಿಯವರ 'ಸ್ವರೂಪ', ಕಾದಂಬರಿಯೆಂದು ಕರೆಯಲಾದ ಆದರೆ ಕಾದಂಬರಿಯ ಸ್ವರೂಪವಿಲ್ಲದ ಕಿರುಕೃತಿ. ನಿಜಗುಣಶಿವಯೋಗಿಗಳ ಜೀವನವನ್ನು ಕುರಿತ ದೇವೇಂದ್ರಕುಮಾರ ಹಕಾರಿಯವರ 'ಚೆಲ್ವ ಕೋಗಿಲೆ' ಒಂದು ಒಳ್ಳೆಯ ಪ್ರಯತ್ನ. 'ಪಂಜ್ರವಳ್ಳಿಯ ಪಂಜು'ವಿನಿಂದ ಪ್ರಸಿದ್ಧರಾದ ಕಡಿದಾಳ ಮಂಜಪ್ಪನವರು 'ನಾಳೆಯ ನೆಳಲು' ಎಂಬ ತಮ್ಮ ಎರಡನೆಯ ಕಾದಂಬರಿಯನ್ನು ಪ್ರಕಟಿಸಿದ್ದಾರೆ. ಮೊದಲನೆಯ ಕಾದಂಬರಿಯ ದೋಷಗಳಿಂದ ಪಾರಾಗಲು ಮಂಜಪ್ಪನವರು ಶಕ್ತರಾಗಿಲ್ಲ. ಅವರಿಗೆ ಅಪಾರವಾದ ಅನುಭವವಿದೆ. ಆದ್ದರಿಂದಲೇ ಅವರ ಕೃತಿಯಲ್ಲಿ ಶ್ರೀಮಂತವಾದ ಜೀವನವಿದೆ. ಆದರೆ ಅದು ಕಲೆಯಾಗಿ ಮೂರ್ಪಟ್ಟಿಲ್ಲ. ಕಾದಂಬರಿಯ ಆರಂಭ ಯಾವುದೋ ಪತ್ತೇದಾರಿ ಕಾದಂಬರಿಯ ಆರಂಭದಂತಿದೆ. ಹತ್ತು ವರ್ಷಗಳಾಚೆ ನಮ್ಮ ರಾಜಕೀಯ, ಆಡಳಿತ ಜೀವನ ಹೇಗಿರಬಹುದೆಂಬುದನ್ನು ಕಡಿದಾಳರು ಇಲ್ಲಿ ಊಹಿಸಲು ಯತ್ನಿಸಿದ್ದಾರೆ. ಅವರ ಊಹೆಗಳು ಈಗಷ್ಟೇ ಅಧಿಕಾರಕ್ಕೆ ಬಂದ ಹಲವು ಕಾಂಗ್ರೆಸ್ಸೇತರ ಸರ್ಕಾರಗಳ ನಿರ್ಧಾರಗಳಿಂದ ದೃಢಗೊಳ್ಳುತ್ತಿರುವುದು ಗಮನೀಯ ವಿಚಾರವಾಗಿದೆ.

ಎಂ. ಸಿ. ಪದ್ಮಾ, ತಪಸ್ವಿನಿ, ಎಂ. ಕೆ. ಜಯಲಕ್ಷ್ಮಿ, ಪದ್ಮಾ, ಉಷಾದೇವಿ, ವಾಣಿ, ಆರ್ಯಾಂಬಪಟ್ಟಾಭಿ, ತ್ರಿವೇಣಿ, ಶಾರದೆ, ಅನುಪಮಾ ನಿರಂಜನ, ಮಲ್ಲಿಕಾ, ಎಂ. ಕೆ. ಇಂದಿರಾ ಮತ್ತು ನೀಳಾದೇವಿ—ಈ ಅವಧಿಯಲ್ಲಿ ಕಾದಂಬರಿಗಳನ್ನು ಪ್ರಕಟಿಸಿರುವ ಲೇಖಕಿಯರಾಗಿದ್ದಾರೆ. ಇವರಲ್ಲಿ ಎಂ. ಕೆ. ಇಂದಿರಾ ಅವರೊಬ್ಬರೇ ಮೂರು ಕಾದಂಬರಿಗಳನ್ನು ಪ್ರಕಟಿಸಿ

ದ್ದಾರೆ. ತಮ್ಮ 'ಸದಾನಂದ' ಕಾದಂಬರಿಗಾಗಿ ಅವರು ಸಂಸ್ಥಾನದ ಸಾಹಿತ್ಯ ಅಕೆಡೆಮಿಯ ಬಹುಮಾನವನ್ನೂ ಪಡೆದಿದ್ದಾರೆ. ಅವರ 'ಹೆಣ್ಣಿನ ಆಕಾಂಕ್ಷೆ' ಹೆಸರೇ ಸೂಚಿಸುವಂತೆ ಹೆಣ್ಣಿನ ಕಷ್ಟ ಸುಖಗಳನ್ನು ಪದರು ಪದರಾಗಿ ಬಿಡಿಸಿಡುತ್ತದೆ; 'ಗೆಜ್ಜೆ ಪೂಜೆ'ಯಲ್ಲಿ ವೇಶ್ಯಾಸಮಸ್ಯೆಯನ್ನು ಹೆಣ್ಣಿನ ಕಣ್ಣಿನಿಂದ ನೋಡಲಾಗಿದೆ; 'ಸದಾನಂದ' ನನ್ನ ಮಿತ್ರರೊಬ್ಬರು ಹೇಳಿದಂತೆ ಅರ್ಧಕ್ಕೇ ಮುಗಿಯಬೇಕಾಗಿದ್ದ ಕೃತಿ. 'ಮುರಿದ ಸರಪಳಿ', 'ನೀರ ಮೇಲಣ ಗುಳ್ಳೆ'–ಎರಡೂ ಉಷಾದೇವಿಯವರ ಕಾದಂಬರಿಗಳು. ಮಾನವನ ಮನಸ್ಸಿನ ಒಳಲೋಕವನ್ನು ತೆರೆದು ತೋರುವುದರಲ್ಲಿ ಅವರಿಗೆ ಆಸಕ್ತಿ. ವಸ್ತುವಿನ ಆಯ್ಕೆಯಲ್ಲಿ ಅವರು ಯಶಸ್ವಿಯಾದರೂ ಅವರ ಶೈಲಿ, ನಿರೂಪಣೆಗಳು ನೀರಸ. ಆರ್ಯಾಂಬಪಟ್ಟಾಭಿಯವರೂ ಎರಡು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. 'ಎರಡು ಮುಖ' ಗಳಲ್ಲಿ ದ್ವಂದ್ವ ವ್ಯಕ್ತಿತ್ವದ ಚಿತ್ರಣವಿದ್ದರೆ, 'ಮರಳಿ ಗೂಡಿಗೆ' ಅನಾಥಾಲಯದ ಹೆಣ್ಣೊಬ್ಬಳು ಬಿಸಿಲುಗುದುರೆಯ ಬೆನ್ನೇರಿ ಮತ್ತೆ ಅನಾಥಾಲಯಕ್ಕೇ ಬಂದು ಸೇರಿದ ಕಥೆಯಾಗಿದೆ. ಆರ್ಯಾಂಬಾ ಅವರ ಬರವಣಿಗೆ, ತಂತ್ರ, ನಿರೂಪಣೆ ಎಲ್ಲವೂ ಒರಟು. 'ಮರಳಿ ಗೂಡಿಗೆ' ಕಾದಂಬರಿಯ ಸಮಸ್ಯೆಯೇನು ಎಂಬುದು ನಮಗೆ ತಿಳಿಯದು. ಅಪ್ಸರ ಧನವಂತನನ್ನು ಮದುವೆಯಾಗದಿದ್ದರೆ ಅವಳ ಬದುಕು ಸರಿಯಾಗುತ್ತಿತ್ತೆ ? ಮಲ್ಲಿಕಾ ಅವರ 'ಜೀವನ ಗಂಗಾ' ತೀರ ಅಪಕ್ವವಾದ ಕಾದಂಬರಿ. ತ್ರಿವೇಣಿಯವರ 'ಅವಳ ಮಗಳು' ಒಂದು ವಿಶೇಷ ಕಾರಣಕ್ಕಾಗಿ ಉಲ್ಲೇಖನೀಯವಾಗಿದೆ. ಇದು ದುರ್ದೈವದಿಂದ ಅವರು ಮುಗಿಸದೇ ಹೋದ ಕಾದಂಬರಿ. ಮೊದಲಿನ ಅರವತ್ತಾರು ಪುಟಗಳಷ್ಟೇ ಅವರವು. ಮುಂದಿನದನ್ನು ಪೂರ್ಣಗೊಳಿಸಿದವರು ಎಂ. ಸಿ. ಪದ್ಮಾ ಅವರು. "ತ್ರಿವೇಣಿಯವರ ಶೈಲಿ, ಪಾತ್ರಚಿತ್ರಣ, ಕಥಾಸಂವಿಧಾನವನ್ನೇ ನನ್ನ ಬರವಣಿಗೆಯಲ್ಲಿಯೂ ಮುಂದುವರಿಸುವ ಶಕ್ತಿ, ಚೈತನ್ಯ ಎರಡೂ ನನಗಿಲ್ಲ" ಎಂಬುದಾಗಿ ಪದ್ಮಾ ಅವರೇ ಹೇಳಿಕೊಂಡಿರುವುದು ವಿನಯದ ಮಾತೇನಲ್ಲ. ೨೨೭ ಪುಟಗಳ ಈ ಕಾದಂಬರಿಯಲ್ಲಿ ನಾಲ್ಕನೆಯ ಒಂದು ಭಾಗವಷ್ಟೇ ತ್ರಿವೇಣಿಯವರದು. ಕಾದಂಬರಿಯನ್ನು ನಾನಾ ವಿಧವಾಗಿ ಅರಳಿಸಲು ಆ ಆರಂಭದಲ್ಲಿ ಅವಕಾಶವಿದ್ದು ಅದಕ್ಕೆ ಪದ್ಮಾ ಅವರು ಒಂದು ಮುಕ್ತಾಯವನ್ನೇನೋ ತಂದಿದ್ದಾರೆ. ಕಾದಂಬರಿಯ

ಕೊನೆಯ ಭಾಗ ಅತಿ ತೆಳುವಾಗಿದೆ. ವಾಣಿಯವರ 'ಕಾವೇರಿಯ ಮಡಿಲಲ್ಲಿ' ಪ್ರತ್ಯೇಕವಾಗಿ ಹೆಸರಿಸಬೇಕಾದ ಕೃತಿ. ವಾಣಿಯವರು ಬದುಕನ್ನು ಸೂಕ್ಷ್ಮ ವಾಗಿ ನಿರೀಕ್ಷಿಸಬಲ್ಲರು; ಬದುಕಿನ ಸುಖದುಃಖಗಳನ್ನು ಅತಿರೇಕದ ಲೇಪನ ವಿಲ್ಲದೆ ಚಿತ್ರಿಸಬಲ್ಲರು. ಅವರ ಪಾತ್ರಗಳು ಸನ್ನಿವೇಶಗಳು ಜೀವಂತವಾಗಿವೆ; ಚೊಕ್ಕವಾಗಿವೆ. ಅವರ ಕಥನ ಕ್ರಮ ನೇರವಾದುದು; ಸ್ಪಷ್ಟವಾದುದು. 'ಜೋಡಿ ಹಕ್ಕಿ', 'ಮೆಚ್ಚಿನ ಸೊಸೆ', 'ಸಂಧಿಕಾಲ', 'ಸವತಿ ಕಸ್ತೂರಿ' ಮೊದಲಾದವೂ ಮಹಿಳೆಯರ ಕೃತಿಗಳೇ. ಕುಟುಂಬ ಜೀವನದ ಚಿತ್ರಣ, ಹೆಣ್ಣು ಜೀವನದ ಬಗೆಗೆ ಸಹಾನುಭೂತಿ ಈ ಕೃತಿಗಳ ಜೀವಾಳ. 'ಮೆಚ್ಚಿನ ಸೊಸೆ' ಯ ಬರವಣಿಗೆ ಚೆನ್ನಾಗಿದೆ.

ಡಾ. ಎಸ್. ಎಲ್. ಭೈರಪ್ಪ, ಯು. ಆರ್. ಅನಂತಮೂರ್ತಿ ಮತ್ತು ಕುಸುಮಾಕರ ದೇವರಗೆಣ್ಣೂರ ಇವರು ಈ ಅವಧಿಯಲ್ಲಿ ಸಾರ್ಥಕವಾದ ಕೃತಿ ಗಳನ್ನು ರಚಿಸಿ, ಕನ್ನಡ ಕಾದಂಬರಿಯ ಬಗೆಗೆ ಹೊಸ ಆಸೆಯನ್ನೂ, ಭರವಸೆ ಯನ್ನೂ ಮೂಡಿಸಿರುವ ಲೇಖಕರಾಗಿದ್ದಾರೆ. ಅವರ ಕೃತಿಗಳ ಬಗ್ಗೆ ಪ್ರತ್ಯೇಕ ವಾಗಿ ನಾಲ್ಕು ಮಾತು ಹೇಳುವುದು ಅಪ್ರಸ್ತುತವಾಗದು. ಭೈರಪ್ಪನವರು 'ಜಲಪಾತ', 'ಮತದಾನ' ಮತ್ತು 'ವಂಶವೃಕ್ಷ' ವೆಂಬ ಕಾದಂಬರಿಗಳನ್ನು ರಚಿಸಿದ್ದು ಕೊನೆಯದು ಅವರ ಶ್ರೇಷ್ಠ ಕೃತಿಯಾಗಿದೆ. ಅದಕ್ಕೆ ಸಂಸ್ಥಾನದ ಸಾಹಿತ್ಯ ಅಕೆಡೆಮಿಯ ಪ್ರಥಮ ಬಹುಮಾನ ಬಂದಿರುವುದು ಸಹಜವಾಗಿಯೇ ಇದೆ. 'ಮತದಾನ' ದಲ್ಲಿ ಸಮಕಾಲೀನ ಜೀವನದ ಭ್ರಷ್ಟಾಚಾರದ ನಿರೂಪಣೆ ಯಿದ್ದು, ರಾಜಕೀಯ ವಿಷ ಹೇಗೆ ಸಮಾಜ ಜೀವನವನ್ನು ಕದಡುತ್ತದೆಂಬು ದರ ಮನೋಜ್ಞ ನಿರೂಪಣೆಯಿದೆ. ಇದರಲ್ಲಿ ಲೇಖಕರು ಬಳಸಿರುವ ಆಡುನುಡಿ ಸಮರ್ಥವಾಗಿದೆ. 'ವಂಶವೃಕ್ಷ' ಕಾದಂಬರಿಯನ್ನು ಕುರಿತು ನಾನು ಬೇರೆ ಕಡೆ ಹೇಳಿರುವ ಮಾತುಗಳನ್ನೇ ಇಲ್ಲಿ ಉದ್ಧರಿಸಬಯಸುತ್ತೇನೆ: "ಬದುಕಿನ ಬಹು ದೊಡ್ಡ ಹಾಸಿನ ಮೇಲೆ ನಿರ್ಮಿತವಾಗಿರುವ ಎಸ್. ಎಲ್. ಭೈರಪ್ಪ ಅವರ 'ವಂಶವೃಕ್ಷ' ಅತ್ಯಂತ ಕುತೂಹಲಕಾರೀ ಕಾದಂಬರಿಯಾಗಿದೆ. ಮಾತ್ರವಲ್ಲ, ಕನ್ನಡದ ಈಚಿನ ಮಹತ್ವದ ಕಾದಂಬರಿಗಳಲ್ಲಿ ಅದು ಒಂದಾ ಗಿದೆ. ಜೀವನದ ಶ್ರದ್ಧೆ ಮೌಲ್ಯಗಳು ಸಂಘರ್ಷಣೆಯಲ್ಲಿ ಸಿಕ್ಕಾಗ ವ್ಯಕ್ತಿಗಳು ಪಡುವ ಪಾಡು ಇಲ್ಲಿ ಸಹಜವಾಗಿ, ಸುಂದರವಾಗಿ ಚಿತ್ರಿತವಾಗಿದೆ. ಸ್ವಲ್ಪ

ಎಚ್ಚರ ತಪ್ಪಿದರೆ ನಿರ್ಜೀವಗೊಳ್ಳಬಹುದಾದಂತಹ ಪಾತ್ರಗಳನ್ನು ಅಸ್ತಿತ್ವವಾದದ ಹಿನ್ನೆಲೆಯಲ್ಲಿ ಸ್ಫುಟವಾಗಿ ಕಡೆದು ನಿಲ್ಲಿಸುವುದರಲ್ಲಿ ಭೈರಪ್ಪನವರು ಯಶಸ್ಸು ಗಳಿಸಿದ್ದಾರೆ. ಇಲ್ಲಿ ಪರಂಪರಾಗತವಾದ ಸಂಪ್ರದಾಯ, ಸಾಮಾಜಿಕ ಕಟ್ಟಲೆಗಳು, ವೈಯಕ್ತಿಕವಾದ ಇಷ್ಟಾನಿಷ್ಟಗಳು ಇವುಗಳ ಜೇಲಿಯೊಳಗೆ ಮದುವೆ, ಅಭಿರುಚಿ, ವಂಶಪಾವಿತ್ರ್ಯ ಮೊದಲಾದ ಎಷ್ಟೋ ವಿಷಯಗಳು, ಸಮಸ್ಯೆಗಳು, ನಂಬಿಕೆಗಳು ಕುಡಿಯೊಡೆಯುತ್ತವೆ. ವ್ಯಕ್ತಿಗಳು ತುದಿಗಾಲಿನಲ್ಲಿ ನಿಲ್ಲದೆ ನೆಲದ ಮೇಲೆ ಭದ್ರವಾಗಿ ನಿಂತಿದ್ದಾರೆ. ಇಂದಿನ ಕಾದಂಬರಿಕಾರ ಎಷ್ಟೋ ಸಂದರ್ಭಗಳಲ್ಲಿ ಉಪನ್ಯಾಸಕಾರನಾಗಿ ಉಳಿದುಬಿಡುತ್ತಾನೆ. ಆದರೆ ಭೈರಪ್ಪನವರು ಪ್ರಥಮತಃ ಕಾದಂಬರಿಕಾರರು; ಅವರ ಉಪನ್ಯಾಸ ಸೂಚ್ಯವಾದರೂ ಪ್ರಭಾವಪೂರ್ಣವಾಗಿದೆ. ಅಷ್ಟಾಗಿ ಪ್ರಸಿದ್ಧಿಗೆ ಬಾರದಿರುವ ಈ ತರುಣ ಲೇಖಕರು ಈ ಕಾದಂಬರಿ 'ವಂಶವೃಕ್ಷ' ದಿಂದ ಗಣನೀಯಸ್ಥಾನ ಪಡೆದುಕೊಂಡಿರುವುದರ ಜೊತೆಗೆ ತಮ್ಮ ಬಗೆಗೆ ಮುಂದೇನು ಎಂಬ ತೀವ್ರಾಸಕ್ತಿಯನ್ನೂ ಕೆರಳಿಸಿದ್ದಾರೆ."[1]

'ಸಂಸ್ಕಾರ' ಅನಂತಮೂರ್ತಿಯವರ ಮೊದಲನೆಯ ಕಾದಂಬರಿಯಾಗಿದ್ದು, ಸಫಲವಾದ ಬರವಣಿಗೆಯಾಗಿದೆ. ಮಾನವನ ಸ್ವಜವಾದ ಸಂಸ್ಕಾರಗಳು ಎಲ್ಲ ಕಟ್ಟುಗಳನ್ನೂ ದಾಟಿ ಒಂದಲ್ಲ ಒಂದು ಸಲ ಹೊರಬೀಳುವುದೇ ಇಲ್ಲಿನ ಪ್ರಧಾನವಾದ ಅಂಶವಾಗಿದೆ. ಅನಂತಮೂರ್ತಿಯವರು ಚಿತ್ರಿಸಿರುವ ಪ್ರಾಣೇಶಾಚಾರ್ಯರ ಪಾತ್ರ ಕನ್ನಡದ ಈಚಿನ ಎತ್ತರದ ಪಾತ್ರಗಳಲ್ಲಿ ಒಂದಾಗಿದೆ. ಪ್ರಾಣೇಶಾಚಾರ್ಯರು ಚಂದ್ರಿಯ ಸಂಗಮ ಸ್ವಜಸಂಸ್ಕಾರದ ಸಂಕೇತವಾದರೂ, ಕಾದಂಬರಿಯಲ್ಲಿ ಘಟನೆಯಾಗಿ ಸಹಜವೆನ್ನಿಸುವುದಿಲ್ಲ. ಇಬ್ಬರ ಬದುಕಿನಲ್ಲಿಯೂ ಅದು ಉತ್ಕಟವಾದ ಸನ್ನಿವೇಶ, ಮಾತ್ರವಲ್ಲ, ದೈಹಿಕವಾಗಿಯಾದರೂ ಅವರು ಆ ಘಳಿಗೆಯಲ್ಲಿ ಲೈಂಗಿಕಕ್ರಿಯೆಗೆ ಸಮರ್ಥರಾಗಿದ್ದರೇ ಎನ್ನಿಸುತ್ತದೆ. ಕಥೆಯ ಉದ್ದಕ್ಕೂ ಹಬ್ಬಿರುವ ಪ್ಲೇಗ್ ರೋಗದ ಹಿನ್ನೆಲೆಯ ಸಾರ್ಥಕತೆಯೇನೆಂದು ಗೊತ್ತಾಗುವುದಿಲ್ಲ. ಅನಂತಮೂರ್ತಿಯವರು ಚಿತ್ರಿಸಿರುವ ಮಲೆನಾಡಿನ ಹಳ್ಳಿಯಲ್ಲಿ, ಜಾತ್ರೆಗೆ ಸೋಡಾ ಅಂಗಡಿಗಳು ಬಂದ

[1] ಹಾ. ಮಾ. ನಾಯಕ, ಸಮಿಾಕ್ಷೆ, ಪು. ೧೦೫.

ಕಾಲದ ಈಚೆಗೆ, ಪ್ಲೇಗ್ ಬಂದಾಗ ಗುಡಿಸಲುಗಳಿಗೆ ಬೆಂಕಿ ಹಾಕುವ ವಿಚಾರ ಆಭಾಸವಾಗಿ ಕಾಣುತ್ತದೆ. ಅನಗತ್ಯವಾದ ಲೈಂಗಿಕ ವಿವರಗಳು ಹೊಸ ಬರವಣಿಗೆಯ ಫ್ಯಾಷನ್ ಆಗಿರಬಹುದು. ಹೀಗೆ ಈ ಕಾದಂಬರಿಯ ಕೊರೆಗಳನ್ನು ಪಟ್ಟಿ ಮಾಡಿ ಹೇಳಬಹುದು. ಈ ದೌರ್ಬಲ್ಯಗಳಿದ್ದರೂ, ಸಮರ್ಥವಾದ ಶೈಲಿ, ಸುಂದರವಾದ ಸಂವಿಧಾನ, ಸೊಗಸಾದ ಪಾತ್ರನಿರ್ವಹಣೆ, ಜೊತೆಗೆ ಇವುಗಳ ಹಿನ್ನೆಲೆಯಲ್ಲಿ ಅಸ್ತಿತ್ವವಾದದ ಮೆಲ್ಲುಸಿರು ಇವುಗಳಿಂದ 'ಸಂಸ್ಕಾರ' ಕಳೆಗೊಂಡಿದೆ; ಬೆಲೆಬಾಳುತ್ತದೆ.

ಓದುಗರಿಂದ ನ್ಯಾಯವಾಗಿ ಸಲ್ಲಬೇಕಾದ ಗಮನವನ್ನು ಪಡೆಯದೇ ಹೋದ ಮತ್ತೊಬ್ಬ ಲೇಖಕರೆಂದರೆ ಕುಸುಮಾಕರ ದೇವರಗೆಣ್ಣೂರ. 'ಮುಗಿಯದ ಕಥೆ' ಹಾಗೂ 'ನಾಲ್ಕನೆಯ ಆಯಾಮ' ಎಂಬ ಎರಡು ಕೃತಿಗಳನ್ನು ಅವರು ಪ್ರಕಟಿಸಿದ್ದಾರೆ. ಈ ಕೃತಿಗಳ ರಚನೆಯಲ್ಲಿ ಅವರು ತೋರಿರುವ ನಿಷ್ಠೆಯೂ, ಸಂಯಮವೂ ಅಸಾಧಾರಣವಾಗಿವೆ. ಹೊಸ ಲೇಖಕರಲ್ಲಿ ಸಾಮಾನ್ಯವಾಗಿ ಕಂಡು ಬಾರದಿರುವ ಅನುದ್ವೇಗವನ್ನು ಕುಸುಮಾಕರರು ವರವಾಗಿ ಪಡೆದಿದ್ದಾರೆ. ಶೈಲಿ, ತಂತ್ರಗಳಲ್ಲಿಯೂ ಅವರು ತನ್ಮತನವನ್ನು ಮೆರೆದಿದ್ದಾರೆ. ಲೈಂಗಿಕ ವಿಚಾರಗಳನ್ನು ಸಿಕ್ಕಾಪಟ್ಟೆ ಬಳಸುತ್ತಿರುವ ಹೊಸ ತಲೆಮಾರಿನ ಲೇಖಕರು ಇವರಿಂದ ಪಾಠ ಕಲಿಯಬೇಕು. ಎರಡನೆಯ ಕೃತಿ ಎಲ್ಲ ದೃಷ್ಟಿಯಿಂದಲೂ ಹೆಚ್ಚು ಸಮರ್ಥವಾದ ಕೃತಿಯಾಗಿದೆ. ತಲೆಪಟ್ಟಿಯನ್ನು ಕಟ್ಟಿಕೊಳ್ಳದಿದ್ದರೂ ಇದು ನವ್ಯ ಕೃತಿಯಾಗಿದೆ. ಒಂದು ಕೃತಿ ನವ್ಯವಾಗಲು ಬದುಕನ್ನು ವಿಕಾರವಾಗಿಯೇ ನೋಡಬೇಕಿಲ್ಲವೆಂಬುದಕ್ಕೆ 'ನಾಲ್ಕನೆಯ ಆಯಾಮ' ಒಂದು ಉತ್ತಮವಾದ ಉದಾಹರಣೆಯಾಗಿದೆ. ಈ ಎರಡು ಕೃತಿಗಳಲ್ಲಿ ಪ್ರದರ್ಶಿಸಿರುವ ಶಕ್ತಿಯನ್ನು ಉಳಿಸಿ, ಬೆಳೆಸಿಕೊಳ್ಳುವುದು ಕುಸುಮಾಕರರಿಗೆ ಸಾಧ್ಯವಾದರೆ, ಸವಕಲು ಮಾತಿನಲ್ಲಿ ಹೇಳುವುದಾದರೆ, ಅವರಿಗೆ ಉಜ್ವಲವಾದ ಭವಿಷ್ಯವಿದೆ. ಈ ಭವಿಷ್ಯ ಕನ್ನಡ ಕಾದಂಬರಿಗೂ ಕೂಡ !

* * *

ಕಾದಂಬರಿಯ ಜನಪ್ರಿಯತೆಯಲ್ಲಿ ಸಣ್ಣ ಕಥೆಯನ್ನು ಕೇಳುವವರಿಲ್ಲವೆಂಬ ದೂರು ಸಾಮಾನ್ಯವಾಗಿದ್ದರೂ ಈ ಸಮೀಕ್ಷೆಯ ಅವಧಿಯಲ್ಲಿ ನಮಗೆ ತಿಳಿದು ಬಂದಂತೆ ಸುಮಾರು ಐವತ್ತು ಜನ ಲೇಖಕರ ಎಪ್ಪತ್ತು ಕಥಾ ಸಂಗ್ರಹಗಳು

ಪ್ರಕಟವಾಗಿವೆ.[1] ಆರು ಜನ ಲೇಖಕಿಯರು ತಮ್ಮ ಒಂದೊಂದು ಸಂಕಲನ ವನ್ನು ಪ್ರಕಟಿಸಿದ್ದಾರೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ('ಕನ್ಯಾ ಕುಮಾರಿ ಮತ್ತು ಇತರ ಕಥೆಗಳು') ಅ. ನ. ಕೃಷ್ಣರಾಯ ('ಅ. ನ. ಕೃ. ಅವರ ಆಯ್ದ ಕಥೆಗಳು'), ನಿರಂಜನ ('ನಾಸ್ತಿಕ ಕೊಟ್ಟ ದೇವರು') ಮತ್ತು ತರಾಸು ('ದಶಮಂಜರಿ') ತಮ್ಮ ಆರಿಸಿದ ಪ್ರಾತಿನಿಧಿಕ ಸಂಕಲನಗಳನ್ನು ಹೊರತಂದಿ ದ್ದಾರೆ. ಬೇರೆ ಬೇರೆ ಲೇಖಕರ ಕಥೆಗಳನ್ನೊಳಗೊಂಡ ಏಳು ಸಂಕಲನಗಳು ಈ ಅವಧಿಯಲ್ಲಿ ಮೈದಾಳಿವೆ. ಇವುಗಳಲ್ಲಿ 'ತ್ರಿವೇಣಿ' ಎನ್ನುವುದು ಹದಿನೆಂಟು ಮಹಿಳೆಯರ ಕಥೆಗಳನ್ನೊಳಗೊಂಡ ಸಂಗ್ರಹವಾಗಿದ್ದು ದಿವಂಗತ ತ್ರಿವೇಣಿಯರ ನೆನಪಿಗೆ ಅರ್ಪಿತವಾಗಿದೆ. ಇಲ್ಲಿ ಬರೆಯಬಲ್ಲ ಪ್ರತಿಯೊಬ್ಬ ಲೇಖಕಿಯ ಕಥೆ ಯನ್ನೂ ಸೇರಿಸಬೇಕೆಂದು ಸಂಪಾದಕರು ಹಠ ತೊಟ್ಟಹಾಗೆ ಕಾಣುತ್ತದೆ! 'ಸುಧಾ' ವಾರಪತ್ರಿಕೆಯಲ್ಲಿ ಪ್ರಕಟವಾದ ಕಥೆಗಳಲ್ಲಿ ಕೆಲವನ್ನು ಆಯ್ದು ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯವರು ಉಷಾದೇವಿಯವರ ಸಂಪಾದಕತ್ವದಲ್ಲಿ ಪ್ರಕಟಿಸಿದ್ದಾರೆ. 'ಸುಧಾ' ಪತ್ರಿಕೆಯ ಓದುಗರಿಗೆ ಇದಕ್ಕಿಂತ ಒಳ್ಳೆಯ ಆಯ್ಕೆ ಮಾಡುವುದು ಸಾಧ್ಯವಿತ್ತೆಂದು ಅನ್ನಿಸಿದರೆ ಆಶ್ಚರ್ಯ ಪಡಬೇಕಾಗಿಲ್ಲ. 'ಹೊಸ ಕ್ಷಿತಿಜ' "ಹೊಸಸಂವೇದನೆಯ ಕಥೆಗಳು" ಎಂದು ವರ್ಣಿತವಾದ ಹದಿನಾಲ್ಕು ಕಥೆಗಳ ಉತ್ತಮ ಸಂಕಲನವಾಗಿದೆ. ಈ ಸಂಕಲನದ ಲೇಖಕರಲ್ಲಿ ಕೆಲವರು ಹಳೆಯ ತಲೆಮಾರಿನವರು; ಹಲವರು ಹೊಸ ತಲೆಮಾರಿನವರು. ಸದಾಶಿವ, ತೇಜಸ್ವಿ, ಶಾಂತಿನಾಥ ದೇಸಾಯಿ ಮತ್ತು ಅನಂತಮೂರ್ತಿಯವರ ಕಥೆಗಳು ಈ ಸಂಕಲನದ ಅತ್ಯುತ್ತಮ ಕಥೆಗಳಾಗಿವೆ. ಹೊಸ ಕಥೆಗಾರರ ಒಂದು ದೋಷವೆಂದರೆ ಅವರು ಕಲೆಗಾರರಿಗಿಂತ ಮಿಗಿಲಾಗಿ ವಾಗ್ಮಿಗಳಾಗುವುದು. ಅನಂತಮೂರ್ತಿ, ತೇಜಸ್ವಿಯವರ ಕಥೆಗಳೂ ಇದಕ್ಕೆ ಅಪವಾದವಲ್ಲ. ವೈಚಾರಿಕತೆ, ಮಾತುಗಾರಿಕೆ ಹೆಚ್ಚಾದಾಗ ಕತೆಗಾರಿಕೆ ನರಳುತ್ತದೆ. 'ಎಣ್ಬ ಕತೆಗಳು' ಎಂಟು ಜನ ಲೇಖಕರ ಕಥೆಗಳ ಸಂಗ್ರಹವಾಗಿದೆ. ಈ ಲೇಖಕರ ಬಗ್ಗೆ "ಸಣ್ಣ ಕತೆಗಾರರೆಂದು ಈಗಾಗಲೇ ಸಾಕಷ್ಟು ಪ್ರಸಿದ್ಧರಾಗಿಲ್ಲದ ಇಲ್ಲಿನ ಕೆಲವರಾದರೂ ಒಳ್ಳೆಯ ಕಥೆಗಾರರಾಗಿ ಬೆಳೆಯಬಹುದಾದ ಭರವಸೆಯನ್ನು

[1] ಎರಡನೆಯ ಅನುಬಂಧ ನೋಡಿ.

ಹುಟ್ಟಿಸುವಂಥವರು ಎಂಬ ಒಂದು ಮಾತನ್ನು ಹೇಳಬೇಕಾಗುತ್ತದೆ. ಈ ಮಾತು ಕೇವಲ ಔಪಚಾರಿಕವಾದುದಲ್ಲ"[1] ಎಂದು ಹೇಳಲಾಗಿದೆ. ಇದು ಸಂತೋಷದ ವಿಚಾರ.

ಶ್ರೀಮಿತ್ತೂರ್ ಹಾಗೂ ಶ್ರೀನಿವಾಸ ಉಡುಪ ಇವರಿಬ್ಬರೇ ಮೂರು ಮೂರು ಸಂಕಲನಗಳನ್ನು ಪ್ರಕಟಿಸಿದ್ದಾರೆ. ಕಾದಂಬರಿಕಾರರಾದ ಕೃಷ್ಣ ಮೂರ್ತಿ ಪುರಾಣಿಕ ಹಾಗೂ ಕೊರಟಿ ಶ್ರೀನಿವಾಸರಾವ್ ಅವರು ಎರಡೆರಡು ಸಂಕಲನಗಳನ್ನು ತಂದಿದ್ದಾರೆ. ತೀರ ಹೊಸ ಲೇಖಕರಾದ 'ಪ್ರಿಯತಮಾ' ಅವರೂ ತಮ್ಮ ಎರಡು ಸಂಗ್ರಹಗಳನ್ನು ನೀಡಿದ್ದಾರೆ. ಸಮಾಜದ ಕುಂದು ಕೊರತೆಗಳ ಬಗೆಗೆ ಜಾಗ್ರತರಾಗಿರುವ ಮಿತ್ತೂರರ ಕಥೆಗಳು ರಂಜಕವಾಗಿವೆ. ಸರಸವಾಗಿವೆ. ಅವುಗಳಲ್ಲಿ ಹಲವಕ್ಕೆ ಸ್ವಯಂ ಹಿನ್ನೆಲೆಯುಂಟು. ಪುರಾಣಿಕರ ಕಥೆಗಳು ಸಾಮಾನ್ಯವಾಗಿ ಸನ್ನಿವೇಶ ಚಿತ್ರಣಗಳು. ಕೊರಟಯವರ 'ಭದ್ರಾಂಬೆ' ಯಲ್ಲಿ ಅಮ್ಮಿಪ್ಪೆ, ಭೈರಾದೇವಿ, ಭದ್ರಾಂಬೆ, ಗೇರುಸೊಪ್ಪೆಯ ರಾಣಿ, ಸೋಮಲಾದೇವಿ ಮುಂತಾದ ಐತಿಹಾಸಿಕ ಮಹಿಳೆಯರನ್ನು ಒಳಗೊಂಡ ಹತ್ತು ಕಥೆಗಳಿವೆ. ಅವರ ಇನ್ನೊಂದು ಸಂಕಲನವಾದ 'ರಾಮ ರಾಯನ ತಲೆ' ಐತಿಹಾಸಿಕ ನೀಳ್ಗತೆಗಳ ಸಂಕಲನವೆಂದು ಹೇಳಲಾಗಿದೆ. ಪ್ರಿಯತಮಾ ಅವರ ಕಥೆಗಳು ಆರಂಭದ ಪ್ರಯೋಗಗಳೆಂದು ಹೇಳಿದರೆ ಸಾಕು. ಕಥನ ಕ್ರಮದಲ್ಲಿ, ಭಾಷೆಯ ಬಳಕೆಯಲ್ಲಿ ಶ್ರೀನಿವಾಸ ಉಡುಪರಿಗೆ ಪರಿಣತಿ ಸಾಲದು. ಆದರೂ ಅವರ 'ಹೆಗ್ಗಡ್ತಿ ಹೆತ್ತ ದೆವ್ವ' ನಾವು ಅವರನ್ನು ಕಾಯುವಂತೆ ಮಾಡುತ್ತದೆ. ಉತ್ಸಾಹವೊಂದೇ ಯಶಸ್ಸನ್ನು ತರಲಾರದೆಂದು ಉಡುಪರು ನೆನಪಿನಲ್ಲಿಡಬೇಕು.

ಚಂಪಾವತಿ ಮಹಿಷಿ, ಎಚ್. ವಿ. ಸಾವಿತ್ರಮ್ಮ, ಲಲಿತಾಂಬಾ ಚಂದ್ರ ಶೇಖರ್, ಅನುಪಮಾ ನಿರಂಜನ, ಭುವನೇಶ್ವರಿ ಸಿಂಪಿ, ಮತ್ತು ಪ್ರೇಮಾ ಭಟ್ ಇವರೇ ಕಥಾಸಂಕಲನಗಳನ್ನು ಪ್ರಕಟಿಸಿರುವ ಆರು ಜನ ಲೇಖಕಿ ಯರು. ಸಾವಿತ್ರಮ್ಮನವರ 'ಸರಿದ ಬೆರಳು' ಗಂಭೀರವಾದ ಸ್ವಾರಸ್ಯವಾದ ಏಳು ಕಥೆಗಳ ಸಂಕಲನ. ನೂರು ಪುಟಗಳಷ್ಟು ದೀರ್ಘವಾಗಿರುವ 'ಪಾತು

---

1 ಎಣ್ಬ್ಬ ಕಥೆಗಳು, ಪುಟ ೧೫೬.

ಕತೆ' "ಹೆಣ್ಣಿನ ಬಾಳು ಕಣ್ಣೀರು" ಎಂಬ ಪ್ರಸಿದ್ಧವಾದ ಹೇಳಿಕೆಗೆ ಒಂದು ಸ್ಮಾರಕವಾಗಿದೆ. ನಿರಾಡಂಬರದ ಈ ಕಥೆಗಳಲ್ಲಿ ತಂತ್ರದ ಸರ್ಕಸ್ ಇಲ್ಲ. ವಿಷಾದವನ್ನು ಚಿತ್ರಿಸುವಂತೆಯೇ ಅವರು ವಿನೋದವನ್ನೂ ತರಬಲ್ಲರು. ಸಿಂಪಿಯವರ ಆಕರ್ಷಕ ಕಥೆಗಳಲ್ಲಿ ಬಿಗಿ ಬನಿಗಳೆರಡೂ ಇವೆ. ಅವರ ಕಥೆಗಳ ಉದ್ದಕ್ಕೂ ಮೃದುವಾದ 'ಕರುಳಿನ ಕರೆ' ಕೇಳಿಬರುತ್ತದೆ. ಲಲಿತಾಂಬಾ ಚಂದ್ರಶೇಖರ್ ಅವರ 'ಬಿಡಿ ಹೂಗಳ' ಬಗೆಗೆ ಮುನ್ನುಡಿಯಲ್ಲಿ ಪ್ರೊ. ಡಿ. ಕೆ. ಭೀಮಸೇನರಾಯರು "ಲಲಿತ ಪದ ಪ್ರಯೋಗ, ಪ್ರಸನ್ನತಾ ಗುಣದಿಂದ ಒಂದೊಂದು ಕಥೆಯೂ ಹೃದಯಸ್ಪರ್ಶಿಯಾಗಿದೆ" ಎಂದು ಹೇಳಿರುವುದು ಬಹು ಉದಾರವಾದ ಪ್ರಶಂಸೆಯಾದರೂ, ಲಲಿತಾಂಬಾ ಅವರ ಕಥೆಗಳಲ್ಲಿ ಓದಿಸಿಕೊಂಡು ಹೋಗುವ ಗುಣವಿದೆ. ಅನುಪಮಾ ನಿರಂಜನ ಅವರ 'ಏಳು ಸುತ್ತಿನ ಮಲ್ಲಿಗೆ' ಯಲ್ಲಿ ಹತ್ತು ಕಥೆಗಳಿವೆ. ಇವೆಲ್ಲವೂ ಲಲಿತ ನಿರೂಪಣೆಯ ಸಾಮಾನ್ಯ ಕಥೆಗಳು. ವೈದ್ಯಕೀಯ ಜೀವನದ ಸನ್ನಿವೇಶಗಳನ್ನೋ ಸಂದರ್ಭ ಗಳನ್ನೋ ತರುವಲ್ಲಿ ಅನುಪಮಾ ಸಹಜವಾಗಿಯೇ ಯಶಸ್ಸು ಪಡೆಯು ತ್ತಾರೆ.

ತರಾಸು ಅವರ 'ಇದೇ ನಿಜವಾದ ಸಂಪತ್ತು' ಎರಡು ಕಥೆಗಳ ಸಂಕಲನ. ಈ ಹೆಸರಿನ ಕಥೆಯ ಜೊತೆಗೆ ಇರುವ ಇನ್ನೊಂದು ಕಥೆ 'ಸಮಯ ಸ್ಫೂರ್ತಿ.' ಈ ಸಂಕಲನ ೧೯೬೫ ರಲ್ಲಿ ಪ್ರಕಟವಾಗಿ ೬೬ ರಲ್ಲಿ ಮರುಮುದ್ರಣವನ್ನು ಕಂಡಿರುವುದು ವಿಶೇಷವಾದ ಸಂಗತಿ. ಧನಕನಕಗಳಿಗಿಂತಲೂ ಅದನ್ನು ಉತ್ಪಾದಿಸುವ ಶಕ್ತಿಯನ್ನು ಕೊಡುವ ಜ್ಞಾನವೇ ನಿಜವಾದ ಸಂಪತ್ತು ಎಂಬುದನ್ನು ಮೊದಲನೆಯ ಕಥೆ ಪ್ರತಿಪಾದಿಸುತ್ತದೆ; ಎರಡನೆಯ ಕಥೆ ಚಪ್ಪಲಿ ಪುರಾಣ. ಚಪ್ಪಲಿಯ ಉಂಗುಟ ಕಿತ್ತಿದ್ದರಿಂದ ಏನೆಲ್ಲ ಆಯಿತೆಂಬ ಸಮಯಸ್ಫೂರ್ತಿಯ ಚಿತ್ತಾಕರ್ಷಕ ನಿರೂಪಣೆ.

ಅಶ್ವತ್ಥ, ಭಾರತೀಸುತ, ಶೇಷನಾರಾಯಣ, ಜನಾರ್ದನ ಗುರ್ಕಾರ ಇವರು ಕ್ರಮವಾಗಿ, 'ನೋವು ನಲಿವು', 'ಕರೆಗೆ ಓಗೊಟ್ಟಕಾರ್ಡೀಲಿಯಾ', 'ಮೊಲ್ಲೆ ಮಲ್ಲಿಗೆ', ಹಾಗೂ 'ಕಂಬದ ಹುಚ್ಚು' ಎಂಬ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅಶ್ವತ್ಥರು ನಮ್ಮ ಹಿರಿಯ ಕಥೆಗಾರರಲ್ಲಿ ಒಬ್ಬರು. ಅವರ ಈಚಿನ ಕಥೆಗಳು ಈ ಸಂಕಲನದಲ್ಲಿ ಸಂಗ್ರಹಿತವಾಗಿವೆ. ಕೊರಿಯಾ

ಯುದ್ಧದ ಹಿನ್ನೆಲೆಯಲ್ಲಿ ಮೂಡಿರುವ 'ಪಪ್‌ಪಪ್ ಮಮ್‌ಮಮ್',
ಬದುಕು ಬೇಡವಾದ ಗಂಡು ಹೆಣ್ಣುಗಳನ್ನು ಹಸುಗೂಸೊಂದು ಮತ್ತೆ
ಮಣ್ಣಿಗೆ ಅಂಟಿಸಿದ ಕಥೆ. 'ನಂಬಿದರೆ ನಂಬಿ ಬಿಟ್ಟರೆ ಬಿಡಿ' ಯಲ್ಲಿ ಬಂಗಾಳಿ
ಗಳ ಸಂಭಾಷಣೆಯನ್ನು ತಂದ ರೀತಿಯೇ ಸ್ವಾರಸ್ಯಪೂರ್ಣವಾಗಿದೆ. 'ರಾಮಿ'
ಅಶ್ವತ್ಥರ ವರ್ಣನಾ ವಿಸ್ತಾರಕ್ಕೆ ಒಂದು ಉದಾಹರಣೆ. ಅದರ ಮುಕ್ತಾಯ
ಆಕಸ್ಮಿಕ, ಆದರೆ ಅಷ್ಟೇ ಸಹಜ. ಈ ಮುಕ್ತಾಯದಿಂದಾಗಿಯೇ ನಾವು
ರಾಮಿಯನ್ನು ಮರೆಯಲಾಗದು. ದೀರ್ಘವಾದ ವರ್ಣನೆಗಳು ಕಥೆಗಳ
ರಸಾಸ್ವಾದನೆಗೆ ಎಷ್ಟೋ ಸಲ ಅಡ್ಡಿ ಮಾಡುತ್ತವೆ. ಆದರೆ ಅದು ಅಶ್ವತ್ಥರಿಗೆ
ಸಹಜವಾದ ರೀತಿ. 'ಕರೆಗೆ ಓಗೊಟ್ಟ ಕಾರ್ಡೀಲಿಯಾ' ದ ಒಂಬತ್ತು ಕಥೆ
ಗಳಲ್ಲಿ ಭಾರತೀಸುತರು ಕೊಡಗಿನ ಜನಜೀವನದ ವಿವಿಧ ಮುಖಗಳನ್ನು,
ಸಂಪ್ರದಾಯ, ಸೊಗಸುಗಳನ್ನು ಪರಿಚಯಿಸುತ್ತಾರೆ. ಪ್ರಾದೇಶಿಕ ಜೀವನ
ವನ್ನು ಸಾಹಿತ್ಯದಲ್ಲಿ ತರುವ ಕೆಲವೇ ಲೇಖಕರಲ್ಲಿ ಭಾರತೀಸುತರು ಒಬ್ಬರಾಗಿ
ದ್ದಾರೆ. 'ಟೊಳ್ಳು ನಂದಿ ಮರ' ದಂಥ ಕಥೆಯಿಂದಾಗಿ ಈ ಸಂಕಲನ ಆಕರ್ಷಕ
ವಾಗಿದೆ. ಅವರ ಶೈಲಿಯಲ್ಲಿ ಹಲವು ಮಾತುಗಳು, ಪದಪುಂಜಗಳು ಪುನರಾ
ವರ್ತನೆಯಿಂದ ಕೆಲವು ಸಲ ಬೇಸರ ತರಿಸುತ್ತವೆ. ಎಂಟು ಕಥೆಗಳ ಸಂಕಲನ
ವಾದ 'ಮೊಲ್ಲೆ ಮಲ್ಲಿಗೆ' ವಿಶಿಷ್ಟವಾದ ಕಥಾಗುಚ್ಛವಾಗಿದೆ. ಇಲ್ಲಿನ ಕಥೆ
ಗಳಲ್ಲಿ ಪ್ರಧಾನ ಪಾತ್ರವಹಿಸುವರು ಮಾನವರು ಮಾತ್ರವಲ್ಲ; ಒಂದು ಕಥೆ
ಯಲ್ಲಿ ಬೆಕ್ಕು; ಇನ್ನೊಂದರಲ್ಲಿ ಆನೆ; ಮತ್ತೊಂದರಲ್ಲಿ ನವಿಲು; ಮಗು
ದೊಂದರಲ್ಲಿ ಮೊಲ್ಲೆಯ ಬಳ್ಳಿ ! ಜೊತೆಗೆ ಈ ಕಥೆಗಳಲ್ಲಿ ಮೈಸೂರು ಜಿಲ್ಲೆಯ
ದಕ್ಷಿಣ ಭಾಗದ ಪ್ರಾದೇಶಿಕ ಜೀವನ, ಭಾಷೆಗಳ ಮೆರಗಿವೆ. ಈ ಸಂಕಲನ
ವನ್ನು ಓದಲು ವ್ಯಯಿಸುವ ಕಾಲ ವ್ಯರ್ಥವಲ್ಲ. 'ಕಂಬದ ಹುಚ್ಚಿ' ನಲ್ಲಿ
ಗುರ್ಕಾರರ ಹದಿನೇಳು ಚಿಕ್ಕ ಕಥೆಗಳಿವೆ. ಅವರ ಕಥನ ಕಲೆಯ ಸಾಮರ್ಥ್ಯ
'ಕಂಬದ ಹುಚ್ಚಿ', 'ಬಾಪೂಜಿ', 'ಹೊಗೆ' ಮುಂತಾದ ಕಥೆಗಳಲ್ಲಿ ಮನೋ
ಜ್ಞವಾಗಿ ವ್ಯಕ್ತವಾಗಿದೆ. ಅವರು ಹೃದಯಸ್ಪರ್ಶಿಯಾದ ಕಥೆಗಳನ್ನು ಬರೆಯ
ಬಲ್ಲವರೆಂಬುದಕ್ಕೆ 'ಸಿಪಾಯಿ ಮಲಗಿದನು' ಎಂಬ ಒಂದು ಕಥೆ ಸಾಕು.
ಗುರ್ಕಾರರ ಈ ಮೊದಲನೆಯ ಸಂಕಲನ ಅವರಿಂದ ಇನ್ನೂ ಹೆಚ್ಚಿನ ಕಥೆ
ಗಳನ್ನು ಅಪೇಕ್ಷಿಸುವಂತೆ ಮಾಡಿದರೆ ಆಶ್ಚರ್ಯವಿಲ್ಲ.

ಶಂಕರ ನಿರಾತಂಕವಾಗಿ ಕಥೆ ಹೇಳಬಲ್ಲರು. ಆದರೆ ಅರಸು ಅವರಲ್ಲಿ ಅನಪೇಕ್ಷಣೀಯ ವಿಸ್ತಾರ; ಉಮಾಶಂಕರರಲ್ಲಿ ಅಸಹಜವಾದ ಬೆಳವಣಿಗೆ ದೋಷಗಳು. 'ನೈಲಾನ್ ಸಾಕ್ಸ್' ನ ನಾಗಭೂಷಣರಾವ್ ಸಿಂಧೆ ಒಳ್ಳೆ ಕಥೆಗಾರರಾಗುವ ಸೂಚನೆಯನ್ನು ಪ್ರಥಮ ಸಂಕಲನದಲ್ಲಿಯೇ ನೀಡಿದ್ದಾರೆ. ಶ್ರೀಕಾಂತರ ಬೆಳವಣಿಗೆಯನ್ನು ಇನ್ನೂ ನಿರೀಕ್ಷಿಸಬೇಕು. ಸುಪ್ರಸಿದ್ಧ ಕಾದಂಬರಿಕಾರರಾದ ಬಸವರಾಜ ಕಟ್ಟೀಮನಿಯವರು 'ಸೈನಿಕನ ಹೆಂಡತಿ' ಎಂಬ ಒಂದು ಸಂಕಲನವನ್ನು ಈ ಅವಧಿಯಲ್ಲಿ ಪ್ರಕಟಿಸಿದ್ದಾರೆ.

ಈ ಎರಡು ವರ್ಷಗಳಲ್ಲಿ ಇನ್ನಿತರ ಹಲವರು ಹೊಸ ಲೇಖಕರು ಕಥಾಕ್ಷೇತ್ರವನ್ನು ಪ್ರವೇಶಿಸಿ ತಮ್ಮ ಸಂಕಲನಗಳನ್ನು ಪ್ರಕಟಿಸಿರುವರಾದರೂ, ಕನ್ನಡದ ಕಥೆಗೆ ಗಾತ್ರ ಬಂದ ಹಾಗೆ ಗುಣ ಬಂದಿಲ್ಲವೆಂಬುದನ್ನು ನಾವು ಮರೆಯುವಂತಿಲ್ಲ. ಪತ್ರಿಕೆಯ ಪುಟಗಳಲ್ಲಿ ಮರೆಯಾಗಿ ಹೋಗಿರುವ ಎಷ್ಟೋ ಉತ್ತಮ ಕಥೆಗಳು ಇಂದಲ್ಲ ನಾಳೆ ಸಂಕಲನ ರೂಪದಲ್ಲಿ ಬಂದಾವೆಂದೂ, ಕೆಲವರಾದರೂ ಲೇಖಕರು ನಮ್ಮ ಕಥೆಯನ್ನು ಬೆಳೆಸಲು ಸಮರ್ಥರಾದಾರೆಂದೂ ನಂಬಬಹುದಾಗಿದೆ.

* * *

ಕಳೆದ ಎರಡು ವರ್ಷಗಳ ಅವಧಿಯಲ್ಲಿ ಕನ್ನಡದಲ್ಲಿ ಪ್ರಕಟವಾದ ಕಥನ ಸಾಹಿತ್ಯವನ್ನು (Fiction) ಆದಷ್ಟು ಸ್ಥೂಲವಾಗಿ ಈವರೆಗೆ ಅವಲೋಕಿಸಲಾಯಿತು. ಈಗ ಒಟ್ಟಂದದಲ್ಲಿ ಈ ಅವಧಿಯ ಸಾಧನೆಯನ್ನೂ, ಕಂಡು ಬರುವ ಪ್ರವೃತ್ತಿಗಳನ್ನೂ ಕುರಿತು ನಾಲ್ಕು ಮುಕ್ತಾಯದ ಮಾತುಗಳನ್ನು ಆಡಬಹುದಾಗಿದೆ. ಸಂಖ್ಯೆಯ ದೃಷ್ಟಿಯಿಂದ ಈ ಕ್ಷೇತ್ರದಲ್ಲಿ ಸಾಕಷ್ಟು ಕೆಲಸವೇನೋ ನಡೆದಿದೆ. ಆದರೆ ಸಾಹಿತ್ಯದ ಮಹತ್ವ ಸಂಖ್ಯೆಯಿಂದ ನಿರ್ಧಾರವಾಗುವುದಿಲ್ಲ. ಹಳೆಯ ಲೇಖಕರು ಸಮೃದ್ಧವಾಗಿ ಬರೆಯುತ್ತಲೇ ಇದ್ದಾರೆ; ಹೊಸ ಲೇಖಕರು ಉತ್ಸಾಹದಿಂದ ಕಾರ್ಯಾರಂಭ ಮಾಡಿದ್ದಾರೆ. ಹಳೆಯ ಲೇಖಕರಿಗೆ ಬರವಣಿಗೆ ಯಾಂತ್ರಿಕವಾಗಿ ಹೋಗಿದೆಯೇನೋ ಎನ್ನುವಷ್ಟರ ಮಟ್ಟಿಗೆ ಅವರ ಕೃತಿಗಳು ವರ್ಣವಿಹೀನವಾಗಿವೆ; ಜಾಳಾಗಿವೆ; ಜೊಳ್ಳಾಗಿವೆ. ಹೊಸ ಲೇಖಕರಾದರೋ—ಕೇವಲ ಬೆರಳಲ್ಲಿ ಎಣಿಸುವವರನ್ನುಳಿದು

ಉತ್ಸಾಹವೊಂದನ್ನೇ ಅವಲಂಬಿಸಿ, ಹೊಸತನವನ್ನು ಮೆರೆಯುವುದರಲ್ಲಿ ಆಸಕ್ತರಾಗಿದ್ದಾರೆ. ಪಂಥಪೂಜೆಗೆ ಬಲಿಯಾಗಿ ಕಲೆಯನ್ನು ಕಡೆಗಣಿಸುತ್ತಾರೆ.

ಕೃತಿಗಳಲ್ಲಿ ವೈಯಕ್ತಿಕತೆ ಎನ್ನುವುದೇ ಈಚಿನ ಬರವಣಿಗೆಯಲ್ಲಿ ಕಂಡು ಬರುವುದಿಲ್ಲ. ಹತ್ತು ಜನ ಲೇಖಕರ ಹತ್ತು ಕೃತಿಗಳನ್ನು ಒಟ್ಟಾರೆ ನೋಡಿದಾಗ ಅವುಗಳಲ್ಲಿ ಯಾವ ವ್ಯತ್ಯಾಸವೂ ಕಾಣಿಸುವುದಿಲ್ಲ. ಭಾಷೆಯ ಬಳಕೆಯಲ್ಲಂತೂ ಅಸಾಧಾರಣವಾದ ಸಾಧಾರಣೀಕರಣ ಕಂಡು ಬರುತ್ತದೆ. ತೀರ ಹೊಸ ಲೇಖಕರಿಗೂ ಒಂದು ಸಿದ್ಧವಾದ ಶೈಲಿ, ಭಾಷೆ ಲಭ್ಯವಾಗಿದೆ. ಅದರಲ್ಲಿ ವೈವಿಧ್ಯತೆಯಿಲ್ಲ. ನಲ್ಲಿಯನ್ನು ಯಾರು ಬೇಕಾದರೂ ತಿರುಗಿಸಬಹುದಾಗಿದೆ. ಸುಮಾರು ಇಪ್ಪತ್ತು ವರ್ಷಗಳ ಕೆಳಗೆ ಗೋಪಾಲ ಕೃಷ್ಣ ಅಡಿಗರ ಪ್ರಥಮ ಕವನ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಬೇಂದ್ರೆಯವರು "ನಾನು ಕವಿತೆಯನ್ನು ಬರೆಯಲು ಪ್ರಾರಂಭಿಸಿದಾಗ ಇದ್ದ ಶೈಲಿಯ ಪ್ರಾಯೋಗಿಕತೆ ಇಂದಿನ ಕನ್ನಡದಲ್ಲಿ ಅಷ್ಟುಮಟ್ಟಿಗೆ ಇಲ್ಲ. ಒಂದು ಬಗೆಯ ಸಿದ್ಧ ಶೈಲಿಯಿಂದ ನವಕವಿಗಳು ಹೊರಡುತ್ತಾರೆ" ಎಂದು ಹೇಳಿದ್ದಾರೆ.[1] ಈ ಮಾತು ಇಂದಿನ ಗದ್ಯ ಲೇಖಕರಿಗೂ ಸರಿಯಾಗಿ ಅನ್ವಯವಾಗುತ್ತದೆ. ಭಾಷೆಯ ಸಾಮರ್ಥ್ಯ, ಸಾರ್ಥಕತೆಗಳ ಬಗೆಗೆ ವಿಚಾರ ಮಾಡುವ ಯಾರಿಗೂ ಈ ಪ್ರವೃತ್ತಿ ಖೇದವನ್ನುಂಟುಮಾಡುತ್ತದೆ. ಸರಳ ಎಂದರೆ ಶಕ್ತಿಹೀನ ಎಂದು ಅರ್ಥವಲ್ಲ. ಸತ್ವಶಾಲಿಯಾದ ಲೇಖಕ ಬಳಕೆಯ ಭಾಷೆಯಲ್ಲಿಯೂ ಅರ್ಥ ವ್ಯಂಜನೆಯ ಹೊಸ ಲೋಕವನ್ನೇ ನಿರ್ಮಿಸಬಲ್ಲ.

ಕಥೆ, ಪಾತ್ರಪೋಷಣೆ, ಸನ್ನಿವೇಶಗಳ ಚಿತ್ರಣ ಎಲ್ಲದರಲ್ಲಿಯೂ ಇದೇ ಬಗೆಯ ಪೂರ್ವಸಿದ್ಧತೆಯ ಏಕನಾದ ಎದ್ದು ಕಾಣುತ್ತದೆ. ಒಂದು ಕಾದಂಬರಿಗೆ, ಒಂದು ಕಥೆಗೆ ನಿಗದಿಯಾದ ಒಂದು ಸೂತ್ರವಿದೆ. ನಮ್ಮ ಬಹುಪಾಲು ಕೃತಿಗಳು ಈ ಸೂತ್ರದಿಂದ ಬಂಧಿತವಾದವು. ಆದ್ದರಿಂದಲೇ ವಿನೂತನವಾದ ಒಂದು ವಸ್ತು, ಪರಿಣಾಮಕಾರಿಯಾದ ಒಂದು ಪಾತ್ರ ನಮಗೆ ಹುಡುಕಿದರೂ ಸಿಕ್ಕುವುದಿಲ್ಲ. ಲೇಖಕ ಕೃತಿ ನಿರ್ಮಾಣದಲ್ಲಿ ಆತ್ಮೀಯತೆಯನ್ನೂ,

[1] ಗೋಪಾಲಕೃಷ್ಣ ಅಡಿಗ, ಭಾವತರಂಗ (ಮುನ್ನುಡಿಯಲ್ಲಿ ಬೇಂದ್ರೆ) ಪು. iii.

ನಿಷ್ಠೆಯನ್ನೂ ಎಲ್ಲಿಯ ತನಕ ತೋರುವುದಿಲ್ಲವೋ ಅಲ್ಲಿಯವರೆಗೆ ಅವನಿಗೆ ಯಶಸ್ಸು ದೊರೆಯದು. ವೈಯಕ್ತಿಕತೆಯನ್ನು ಮೆರೆಯಲು ನಮ್ಮ ಕಾದಂಬರಿಕಾರರು, ಕಥೆಗಾರರು ಶ್ರಮಿಸಬೇಕು. ಆದರೆ ವಿಕಾರ, ವಿಕೃತಿಗಳಿಂದ ಮಾತ್ರ ಅದು ಲಭ್ಯವಾಗುತ್ತದೆಂದು ಅವರು ಮೋಸ ಹೋಗಬಾರದು.

ಮಾನವನ ಮನಸ್ಸಿನ ಆಳ ಅಗಲಗಳನ್ನೂ, ಬದುಕಿನ ವೈವಿಧ್ಯ ವಿಸ್ತಾರಗಳನ್ನೂ ಸವಿವರವಾಗಿ ಚಿತ್ರಿಸಬಲ್ಲ ಲೇಖಕರಾಗಲಿ, ಸಮಕಾಲೀನ ಜೀವನದ ಅಸಂಖ್ಯಾತ ಸಮಸ್ಯೆಗಳನ್ನು ವಿಶ್ಲೇಷಕ ದೃಷ್ಟಿಯಿಂದ ನೋಡಬಲ್ಲ ಕಲಾವಿದರಾಗಲಿ ಈ ಅವಧಿಯಲ್ಲಿ ಕೃತಿರಚನೆ ಮಾಡಿಲ್ಲ. ಈ ಗುರಿಯತ್ತ ದೃಷ್ಟಿಯಿಟ್ಟುಕೊಂಡ ಮೂರು ನಾಲ್ಕು ಕೃತಿಗಳನ್ನಷ್ಟೇ ನಾವು ಹೆಸರಿಸಬಹುದಾಗಿದೆ. ಬಹುಪಾಲು ಲೇಖಕರು ಜನಪ್ರಿಯತೆಯ ಮತ್ತಿನಲ್ಲಿ, ಮಾರುಕಟ್ಟೆಯ ಆಕರ್ಷಣೆಯಲ್ಲಿ ಅಗ್ಗದ ಕೃತಿಗಳನ್ನು ರಚಿಸಿ ತೃಪ್ತಿಪಡುತ್ತಿದ್ದಾರೆ; ಹೊಸತನವನ್ನು ತರಬೇಕು ಎಂಬ ಹುಚ್ಚು ಹಂಬಲದಲ್ಲಿ ಬಗೆ ಬಗೆಯ ಲಾಗ ಹಾಕುತ್ತಿದ್ದಾರೆ.

ಈ ಸಮೀಕ್ಷೆಯಲ್ಲಿ ಉಲ್ಲೇಖಿತರಾಗದ ಹಲವು ಜನ ಲೇಖಕರು ಕಥೆ ಕಾದಂಬರಿಗಳ ಹೆಸರಿನಲ್ಲಿ ನಾಯಿಕೊಡೆಗಳಂತೆ ಪುಸ್ತಕಗಳನ್ನು ಪ್ರಕಟಿಸುತ್ತಿರುವುದನ್ನು ಈ ಲೇಖಕ ಬಲ್ಲ. ಹೇಸಿಗೆ ತರುವ ಹಾಸಿಗೆ ಪೂಜೆ, ಮಂಚದ ಮಹಿಮೆಗಳ ಈ "ಲಂಗ-ಸೀರೆ ಸಾಹಿತ್ಯ"ವನ್ನು ಮನಶ್ಶಾಸ್ತ್ರದ ಗೋಷ್ಠಿಯಲ್ಲಿ ಪರಿಶೀಲಿಸಬೇಕೆ ವಿನಾ ಸಾಹಿತ್ಯ ಸಮ್ಮೇಳನದಲ್ಲಿ ಪ್ರಸ್ತಾಪಿಸಬಾರದು.

ಒಟ್ಟಿನಲ್ಲಿ ಈ ಎರಡು ವರ್ಷಗಳ ಕಥನ ಸಾಹಿತ್ಯದ ಅವಲೋಕನದಿಂದ ಉತ್ಸಾಹಕಾರಿಯೂ ಪರಿಣಾಮಕಾರಿಯೂ ಆದ ಸಾಧನೆ ತೀರ ಸ್ವಲ್ಪ ಎಂದು ಗೊತ್ತಾಗುತ್ತದೆ. ಇದಕ್ಕೂ ಸಿದ್ಧ ಪ್ರಸಿದ್ಧರಾದ ಹಳೆಯ ಲೇಖಕರ ಕಾಣಿಕೆ ಏನೂ ಇಲ್ಲ. ಹೊಸ ಪೀಳಿಗೆಯ ಕೆಲವರೇ ಆಸೆಯನ್ನೂ ಭರವಸೆಯನ್ನೂ ಮೂಡಿಸಿದ್ದಾರೆ. ಜೀನ್ ಪಾಲ್ ಸಾರ್ತ್ರ್ ಎಂಬ ಲೇಖಕ ತನ್ನ ಆತ್ಮಕಥೆಯಲ್ಲಿ ಒಂದು ಕಡೆ ಹೀಗೆ ಹೇಳಿಕೊಂಡಿದ್ದಾನೆ: "ಲೇಖಕ ತನ್ನ ನೆರೆಯವರಿಗಾಗಿ ಇಲ್ಲವೆ ದೇವರಿಗಾಗಿ ಬರೆಯುತ್ತಾನೆ. ನನ್ನ ನೆರೆಯವರನ್ನು ಉಳಿಸುವ ದೃಷ್ಟಿಯಿಂದ ನಾನು ದೇವರಿಗಾಗಿ ಬರೆಯಲು ನಿಶ್ಚಯಿಸಿದೆ.

ನನಗೆ ಬೇಕಾದದ್ದು ಕೃತಜ್ಞತೆ; ಓದುಗರಲ್ಲ."[1] ದುರ್ದೈವದಿಂದ ನಮ್ಮ ಲೇಖಕರು ನೆರೆಯವರ ಬಗೆಗೆ ಕರುಣೆಯಿಲ್ಲದೆ ಬರೆಯುತ್ತಾರೆ. ಅವರಿಗೆ ಬೇಕಾದದ್ದು ಕೊಳ್ಳಲೋಸುಗ ಓದುಗರು ; ಕೃತಜ್ಞತೆಯಲ್ಲ !

---

[1] Sartre, Jean-Paul, *The Words*, p. 112.

# ಕನ್ನಡ ಭಾಷೆಯ ವಿವಿಧ ಮುಖಗಳು

೧

ಅವ್ಯಕ್ತ ಮನಸ್ಸನ್ನು ಧ್ವನಿಸಂಕೇತಗಳ ಮೂಲಕ ವ್ಯಕ್ತಗೊಳಿಸುವ ಸಾಧನವಾದ ಭಾಷೆ ಒಂದು ಸಾಮಾಜಿಕ ಕ್ರಿಯೆ. ಮಾನವನ ಜೀವನದಲ್ಲಿ ಭಾಷೆ ಅತ್ಯಂತ ಮಹತ್ವದ ಪಾತ್ರವಹಿಸಿದೆ. ಇದರಿಂದಲೇ ಅವನು ಇತಿಹಾಸವನ್ನು ಬೆಳೆಸಿರುವುದು, ಸಂಸ್ಕೃತಿ ನಾಗರಿಕತೆಗಳನ್ನು ನಿರ್ಮಿಸಿರುವುದು; ಸಾಮಾಜಿಕ ಜೀವನವನ್ನು ವ್ಯವಸ್ಥೆಗೊಳಿಸಿರುವುದು. ಮನುಷ್ಯ 'ಮಾತನಾಡುವ ಪ್ರಾಣಿ'ಯಾಗಿ ಉಳಿದ ಪ್ರಾಣಿಗಳಿಂದ ವಿಶಿಷ್ಟ ರೀತಿಯಲ್ಲಿ ಬೇರೆಯಾಗಿದ್ದಾನೆ. ಆದರೆ ಅವನು ಭಾಷೆ ಸಹಜವಾಗಿ, ಉಸಿರಾಡುವಷ್ಟು ಸಹಜವಾಗಿ, ಲಭ್ಯವಾಗಿದೆಯೆಂದು ಭ್ರಮಿಸಿರುವುದರಿಂದ ಅದನ್ನು ಕುರಿತು ಅಷ್ಟಾಗಿ ಯೋಚಿಸುವುದಿಲ್ಲ. ಭಾಷೆ ಅವನಿಗೆ ಬಹು ಪರಿಚಿತವಾಗಿರುವುದರಿಂದ ಅದನ್ನು ಅವನು ಅಷ್ಟಾಗಿ ಲಕ್ಷಿಸುವುದಿಲ್ಲ. ಭಾಷೆ ಮುಖ್ಯವಾಗಿ ಅಭಿವ್ಯಕ್ತಿಯ, ವಿಚಾರ ವಿನಿಮಯದ ಸಾಧನ. ಎಲ್ಲಿಯವರೆಗೆ ಅದು ತನ್ನ ಉದ್ದೇಶವನ್ನು ಸಾರ್ಥಕಗೊಳಿಸುತ್ತದೋ ಅಲ್ಲಿಯ ತನಕ ಯಾರಾದರೂ ಅದನ್ನು ಕುರಿತು ಯಾಕಾಗಿ ವಿಚಾರ ಮಾಡಿಯಾರು? ಜೀವವಿರುವ ಎಷ್ಟು ಜನರಿಗೆ ಜೀವಶಾಸ್ತ್ರದ ಬಗೆಗೆ ಆಸಕ್ತಿಯಿದೆ? ಆದುದರಿಂದ, ಭಾಷೆಯ ವಿವಿಧ ಮುಖಗಳೇನು ಎಂಬುದು ತೋರಿಕೆಗೆ ಅರ್ಥವಿಲ್ಲದ ಪ್ರಶ್ನೆಯಾಗುತ್ತದೆ. ಮನುಷ್ಯನಂತೆಯೇ ಅವನ ಭಾಷೆಯೂ ಕಾಲ ದೇಶಗಳ ಪರಿಮಿತಿಗೆ ಒಳಗಾಗಿದೆಯೆಂದೂ, ಅವನ ಬದುಕು ಬದಲಾದಂತೆ ಭಾಷೆಯೂ ಬದಲಾಗುತ್ತದೆಂದೂ ತಿಳಿದಾಗ ಮಾತ್ರ ಭಾಷೆಯ ವಿವಿಧ ಮುಖಗಳನ್ನು ಕುರಿತ ಪ್ರಶ್ನೆ ಅರ್ಥಹೀನವಾಗಿ ತೋರದೆ, ಆ ವಿವಿಧ ಮುಖಗಳ ನೈಜಸ್ವರೂಪ, ಪರಸ್ಪರ ಸಂಬಂಧ ಸ್ಪಷ್ಟವಾಗುತ್ತದೆ.

ಒಂದು ಭಾಷೆಯನ್ನಾಡುವ ಹಲವು ಜನರಲ್ಲಿ ಪ್ರತಿಯೊಬ್ಬರಿಗೂ ಅವರವರಿಗೇ ಪ್ರತ್ಯೇಕವಾದ ಅನೇಕ ವ್ಯತ್ಯಾಸಗಳಿರುತ್ತವೆ. ಒಂದೇ ಕುಟುಂಬದ,

ಒಂದು ಭಾಷೆಯನ್ನಾಡುವ, ಇಬ್ಬರ ಭಾಷೆ ಎಲ್ಲ ವಿಧದಲ್ಲಿಯೂ ಒಂದೇ ಆಗಿರುವುದು ಸಾಧ್ಯವಿಲ್ಲ. ಕೆಲವು ವರ್ಷಗಳ ಹಿಂದೆ ಅಮೆರಿಕೆಯ ಸಂಯುಕ್ತ ಸಂಸ್ಥಾನಗಳ ಒಕ್ಲಹಾಮದಲ್ಲಿ ಮೂಲನಿವಾಸಿಗಳ ಭಾಷೆಯೊಂದನ್ನು ಮೊದಲು ಗುರುತಿಸಿದಾಗ ಅದನ್ನು ಆಡುತ್ತಿದ್ದ ಇಬ್ಬರೇ ಇಬ್ಬರು-ಒಬ್ಬ ಮುದುಕ, ಒಬ್ಬ ಮುದುಕಿ-ಆ ಭಾಷೆಯ ಎರಡು ಬೇರೆ ಬೇರೆ ಉಪಭಾಷೆ ಗಳನ್ನಾಡುತ್ತಿದ್ದರೆಂದು ಸ್ಟರ್ಟಿವಾಂಟ್ ಎಂಬ ಪಂಡಿತ ಹೇಳಿದ್ದಾನೆ. ಭಾಷಾ ಭಿನ್ನತೆಗೆ ಇದಕ್ಕಿಂತ ಬೇರೆ ಉದಾಹರಣೆ ಬೇಕಾಗಿಲ್ಲ. ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಸಂದರ್ಭದಿಂದ ಸಂದರ್ಭಕ್ಕೆ ಹಾಗೂ ವ್ಯಕ್ತಿ ಯಿಂದ ವ್ಯಕ್ತಿಗೆ ಸತತವಾಗಿ ಬದಲಾಗುತ್ತಿರುವುದೇ ಭಾಷೆಯ ಜೀವಂತ ಗುಣ. ಒಬ್ಬ ವ್ಯಕ್ತಿ ಮಾತನಾಡುವ ವಿಶಿಷ್ಟ ರೀತಿಯೆ ಆ ಒಬ್ಬ 'ವ್ಯಕ್ತಿಯ ಭಾಷೆ' (Idiolect). ಒಂದು 'ಭಾಷೆ' (Language) ಎನ್ನುವುದು ವಾಸ್ತವ ವಾಗಿ ಇಂಥ 'ವ್ಯಕ್ತಿಭಾಷೆ'ಗಳ ಮೊತ್ತ. ಅನಿವಾರ್ಯವಾಗಿ ಈ ಮೊತ್ತದಲ್ಲಿ ತಮ್ಮಲ್ಲಿಯೇ ಹೆಚ್ಚು ಸಾಮ್ಯವಿರುವ ಒಳಗುಂಪುಗಳಿರುತ್ತವೆ. ಈ ಗುಂಪಿಗೇ ನಾವು 'ಉಪಭಾಷೆ' (dialect) ಎನ್ನುವುದು. ಭಾಷೆಯನ್ನು ಕುರಿತ ಸಾಮಾನ್ಯ ವಿಚಾರಗಳೆಲ್ಲವೂ ಈ ವ್ಯಕ್ತಿ ಭಾಷೆಗಳ ಸಾಧಾರಣೀಕರಣವನ್ನು ಆಧರಿಸಿ ನಿಂತಿವೆ.

ಯಾವುದೇ ಭಾಷೆಯ ನಾನಾ ಮುಖಗಳನ್ನು ಪರಿಶೀಲಿಸುವಾಗ ಈ ಕೆಳ ಗಿನ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕು:

೧. ಆ ಭಾಷೆಯ ಚಾರಿತ್ರಿಕ ಬೆಳವಣಿಗೆ (Historical development)
೨. ಭೌಗೋಳಿಕ ಹಂಚಿಕೆ (Geographical distribution)
೩. ಸಾಮಾಜಿಕ ಸ್ಥಿತಿ (Social status)
೪. ಶೈಲಿಯ ರೀತಿ (Stylistic aspect)

ಈ ದೃಷ್ಟಿಯಿಂದ ಕನ್ನಡ ಭಾಷೆಯನ್ನು ಸ್ಥೂಲವಾಗಿ ಸಮೀಕ್ಷಿಸುವುದು ಈ ಪ್ರಬಂಧದ ಉದ್ದೇಶ.

೨

ಪ್ರತಿಯೊಂದು ಭಾಷೆಗೂ ತನ್ನದೇ ಆದ ಇತಿಹಾಸವಿರುತ್ತದೆ. ಹಲವು ಭಾಷೆಗಳು ಈ ಇತಿಹಾಸವನ್ನು, ಮತ್ತು ಕಾಲಕಾಲಕ್ಕೆ ಆದ ಬದಲಾವಣೆ ಗಳನ್ನು ಸೂಚಿಸುವ ದಾಖಲೆಗಳನ್ನು ಪಡೆದಿರುತ್ತವೆ. ಐತಿಹಾಸಿಕ ಬೆಳವಣಿಗೆ ಬದಲಾವಣೆಗಳು ಮನುಷ್ಯನ ಭಾಷೆಯನ್ನು ಉಳಿದ ಪ್ರಾಣಿಗಳ ಸಂಜ್ಞಾ ವ್ಯವಸ್ಥೆಯಿಂದ ಪ್ರತ್ಯೇಕವಾಗಿಸಿವೆ. ಭಾಷೆಯ ಇತಿಹಾಸವನ್ನು ತಿಳಿಯಲು ನಾನಾ ಸಾಧ್ಯತೆಗಳಿವೆ. ಆದ್ರೆ ಭಾಷೆಯಲ್ಲಿ ಉಳಿದು ಬಂದಿರುವ ಬರೆಹ ರೂಪದ ದಾಖಲೆಗಳೆ ಹೆಚ್ಚಿನ ನಂಬಿಕೆಗೆ ಅರ್ಹವಾದ ಆಧಾರಗಳಾಗಿವೆ. ಎಷ್ಟೋಜನ ಭಾಷಾಶಾಸ್ತ್ರದ ಪಂಡಿತರಿಗೆ ಭಾಷೆಯ ಇತಿಹಾಸವೊಂದೇ ಅಭ್ಯಾಸಕ್ಕೆ ಯೋಗ್ಯವಾದ ವಿಷಯವೆಂದು ದೃಢವಾದ ನಂಬಿಕೆ. ಈ ಅಭ್ಯಾಸ ಸಂಪದ್ಯುಕ್ತವಾಗಿ ಬೆಳೆದು, 'ಚಾರಿತ್ರಿಕ ಭಾಷಾಶಾಸ್ತ್ರ' (Historical Linguistics) ಎಂಬ ಹೆಸರಿನಲ್ಲಿ, ಪ್ರತ್ಯೇಕ ಶಾಸ್ತ್ರಭಾಗ ವಾಗಿ ನಿಂತಿದೆ. ಕಾಲ ಕಳೆದಂತೆ ಭಾಷೆ ಬದಲಾಗುತ್ತಾ ಹೋಗುವುದು ಸ್ವಾಭಾವಿಕವಾಗಿದೆ.

ಕ್ರಿ. ಶ. ೪೫೦ ರಿಂದ ಕನ್ನಡ ಭಾಷೆ ಇಂದಿನವರೆಗೆ ಸತತವಾಗಿ ಬೆಳೆದು ಉಳಿದು ಬಂದಿರುವುದಕ್ಕೆ ನಮಗೆ ಸಾಕಾದಷ್ಟು ಆಧಾರಗಳಿವೆ. ಈ ಆಧಾರ ಗಳು ಭಾಷೆ ಬೆಳೆಯುವುದೆಂದರೆ ಬದಲಾಗುವುದೆಂದೆ ಸಾಕ್ಷಿ ಹೇಳುತ್ತವೆ. ಇದು ಕನ್ನಡದ ಲಕ್ಷಣ ಮಾತ್ರವಲ್ಲ; ಎಲ್ಲ ಜೀವಂತ ಭಾಷೆಗಳ ಲಕ್ಷಣ. ಕನ್ನಡ ಈ ಸಾವಿರದ ಐನೂರು ವರ್ಷಗಳಲ್ಲಿ ಜೀವಂತ ಭಾಷೆಯಾಗಿ ಉಳಿದಿದೆ; ಜೊತೆಗೆ ಕಾಲಕ್ರಮದಲ್ಲಿ ರೂಪಾಂತರವಾಗುತ್ತ ಬಂದಿದೆ. ಯಾವುದೇ ಒಂದು ಕಾಲದಲ್ಲಿ ಸತತವಾಗಿ ನಡೆಯುತ್ತಿರುವ ಭಾಷೆಯ ಬದಲಾವಣೆಯನ್ನು ಗಮನಿಸುವುದು ಕಷ್ಟ. ಆದರೆ ಕಾಲ ಕಳೆದ ಮೇಲೆ ಹಿಂದಿನದು ಇಂದಿನದಕ್ಕಿಂತ ಬೇರೆಯಾಗಿರುವುದನ್ನು ಗುರುತಿಸುವುದು ಸುಲಭ. ಈ ಸ್ಥಿತಿ ಭಾಷೆಯ ಬದಲಾವಣೆಯ ಘಟ್ಟಗಳನ್ನು ಸೂಚಿಸುತ್ತದೆ. ಪ್ರತಿಯೊಂದು ಘಟ್ಟಕ್ಕೂ ತನ್ನದೇ ಆದ ಲಕ್ಷಣಗಳಿರುತ್ತವೆ.

ಕನ್ನಡ ಭಾಷೆಯ ಇತಿಹಾಸದಲ್ಲಿ ಸಾಮಾನ್ಯವಾಗಿ ಮೂರು ಘಟ್ಟಗಳನ್ನು ನಿರ್ದೇಶಿಸಲಾಗುತ್ತಿದೆ. ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡಗಳೇ

ಈ ಮೂರು ಘಟ್ಟಗಳು. ಕೆಲವರು ಪೂರ್ವದ ಹಳಗನ್ನಡ ಎಂಬ ಪ್ರತ್ಯೇಕ ಘಟ್ಟವೊಂದನ್ನು ಸೂಚಿಸುತ್ತಾರೆ; ಕೆಲವರು ನಡುಗನ್ನಡ ಹೊಸಗನ್ನಡ ಗಳನ್ನು ಪ್ರತ್ಯೇಕಿಸಲು ಒಪ್ಪದೆ ನಡುಗನ್ನಡವನ್ನು ಹೊಸಗನ್ನಡದಲ್ಲಿಯೇ ಸೇರಿಸುತ್ತಾರೆ. ಪೂರ್ವದ ಹಳಗನ್ನಡದ ರೂಪ ಖಚಿತವಾಗಿ ಹಳಗನ್ನಡದಿಂದ ಬೇರೆಯಾಗಿದೆಯೆಂದೂ, ನಡುಗನ್ನಡ—ಹಳಗನ್ನಡ ಹೊಸಗನ್ನಡವಾಗಿ ಮಾರ್ಪಡುವ, ಸಂಕ್ರಮಣ ಕಾಲವೆಂದೂ ಈ ಭಿನ್ನ ಅಭಿಪ್ರಾಯಗಳು ಪ್ರತಿಪಾದಿಸುತ್ತವೆ. ಚರ್ಚೆಗೆ ಪ್ರವೇಶಿಸದೆ ಸದ್ಯಕ್ಕೆ ನಾವು ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬ ಮೂರು ಘಟ್ಟಗಳನ್ನು ಒಪ್ಪಿ ಕೊಳ್ಳಬಹುದು. ಒಟ್ಟಿನಲ್ಲಿ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಮಾತ್ರ ವಲ್ಲದೆ, ಸಾಹಿತ್ಯ ಪ್ರಕಾರಗಳ ದೃಷ್ಟಿಯಿಂದಲೂ ಕನ್ನಡಿಗರ ಸಾಂಸ್ಕೃತಿಕ ಜೀವನದ ಹಿನ್ನೆಲೆಯ ಕಾರಣಗಳಿಂದಲೂ ಈ ಘಟ್ಟಗಳಿಗೆ ಮಹತ್ವದ ಸ್ಥಾನ ವಿದೆ. ಹಳಗನ್ನಡದ ಕಾಲದಲ್ಲಿ ಚಂಪೂ ಸಾಹಿತ್ಯದ ಕಡೆಗೆ ನಮ್ಮ ಕವಿಗಳ ವಿಶೇಷ ಒಲವಿರುವುದು ತೋರುತ್ತದೆ. ಆಗ ಸಂಸ್ಕೃತದ್ದೇ ಪೂರ್ಣಪ್ರಭಾವ. ನಡುಗನ್ನಡದ ಕಾಲದಲ್ಲಿ ರಗಳೆ, ಷಟ್ಪದಿ, ಸಾಂಗತ್ಯಗಳನ್ನು ಕವಿಗಳು ಮೆರೆಸಿದರು; ಇದೇ ಕಾಲದಲ್ಲಿ ಅರಾಬಿಕ್, ಪರ್ಷಿಯನ್ ಭಾಷೆಗಳ ಸಂಪರ್ಕವೂ ಏರ್ಪಟ್ಟಿತು. ಹೊಸಗನ್ನಡದ ವೇಳೆಗೆ ನಾನಾ ಹೊಸ ಪ್ರಕಾರ ಗಳು ತಲೆಯೆತ್ತಿ ಐರೋಪ್ಯ ಹಿನ್ನೆಲೆ ಗಾಢವಾಯಿತು.

ಕನ್ನಡದ ಆದಿಗ್ರಂಥವೆಂದು ಹೆಸರಾದ 'ಕವಿರಾಜಮಾರ್ಗ'ದಲ್ಲಿ ಉಲ್ಲೇಖಿತವಾದ 'ಪಳಗನ್ನಡ'ವೇ ಪೂರ್ವದ ಹಳಗನ್ನಡವೆಂದು ಒಂದು ಅಭಿಪ್ರಾಯ. ಇದು ನಿಜವಿರಲಿ ನಿಜವಿಲ್ಲದಿರಲಿ ಪ್ರಾಚೀನ ಶಾಸನಗಳ ಭಾಷೆಯ ಕೆಲವು ರೂಪಗಳು ಖಚಿತವಾದ ಹಳಗನ್ನಡ ರೂಪಗಳಿಗಿಂತ ಭಿನ್ನ ವಾದವೆಂಬುದು ನಿರ್ವಿವಾದದ ಮಾತು. ಒಂದೆರಡು ಉದಾಹರಣೆಗಳನ್ನು ಕೊಡುವುದಾದರೆ ಹಳಗನ್ನಡ ವಿಭಕ್ತಿ ಪ್ರತ್ಯಯಗಳು ಅೞ್, ಅ, ಒಳ್ ಕ್ರಮ ವಾಗಿ ಪೂರ್ವದ ಹಳಗನ್ನಡದಲ್ಲಿ, ಆೞ್, ಆ ಮತ್ತು ಉಳ್ ರೂಪಗಳಾಗಿವೆ. ಹಳಗನ್ನಡದ ನಿಷೇಧ ಪ್ರತ್ಯಯ ಅ ಪೂರ್ವದ ಹಳಗನ್ನಡದಲ್ಲಿ ಆ ಆಗಿದೆ. ಹಳಗನ್ನಡದ ಏಕವಚನ ಬಹುವಚನ ಆಖ್ಯಾತ ಪ್ರತ್ಯಯಗಳು ಅನ್, ಅರ್ ಪೂರ್ವದ ಹಳಗನ್ನಡದಲ್ಲಿ ಒೞ್ (ಆೞ್) ಮತ್ತು ಒರ್ (ಆರ್) ಆಗಿವೆ. ಬೆಟ್ಟ,

ಬೆಳೆ ಮುಂತಾದ ಹಳಗನ್ನಡ ಪದಗಳು, ಪೂರ್ವದ ಹಳಗನ್ನಡದಲ್ಲಿ ಪೆಟ್ಟು, ಪೆಳೆ ಮುಂತಾದ ರೂಪದಲ್ಲಿವೆ.

ಹಳಗನ್ನಡವು ನಡುಗನ್ನಡವಾಗಿ ಮಾರ್ಪಡುವಾಗ ಪದಗಳೂ, ಪ್ರತ್ಯಯಗಳೂ, ಸ್ವರಾಂತವಾಗುತ್ತವೆ; ಪ ಧ್ವನಿ ಹ ಆಗಿ ರೂಪಾಂತರಗೊಳ್ಳುತ್ತದೆ; ಹಳಗನ್ನಡದ ವಿಶಿಷ್ಟ ಧ್ವನಿ ೞ ನಡುಗನ್ನಡದಲ್ಲಿ ಮರೆಯಾಗಿ ಅದರ ಜಾಗದಲ್ಲಿ ಳ ತಲೆಯೆತ್ತುತ್ತದೆ; ಕೆಲವೊಮ್ಮೆ ರ ಕೂಡ ಬರಬಹುದು. ವ್ಯಂಜನಗಳ ನಡುವೆ ಸ್ವರವೊಂದು ನುಸುಳಿಬರುವುದು ನಡುಗನ್ನಡದ ಒಂದು ವೈಶಿಷ್ಟ್ಯವಾಗಿದೆ.

ನಡುಗನ್ನಡದಲ್ಲಿ ಆರಂಭವಾದ ಬದಲಾವಣೆಯು ಹೊಸಗನ್ನಡದಲ್ಲಿ ಪೂರ್ಣವಾಯಿತೆಂದು ಹೇಳಬಹುದು. ಅದೊಂದು ನಿರಂತರ ಪ್ರವಾಹ. ವಿವಿಧ ಘಟ್ಟಗಳಲ್ಲಿ ಕಂಡುಬರುವ ಬದಲಾವಣೆಗಳು ಇಲ್ಲಿ ಸೂಚಿಸಿರುವಷ್ಟು ಸರಳ ಸುಲಭವಾಗಿಲ್ಲವೆಂದೂ, ವ್ಯಾಕರಣ–ವಾಕ್ಯರಚನೆಯ ವಿಚಾರಗಳಲ್ಲಿನ ವಿವರಗಳು ಜಟಿಲವಾದವೆಂದೂ ಗಮನಿಸಬೇಕು. ಈ ಬದಲಾವಣೆ ಎಷ್ಟು ಗಾಢವಾಗಿದೆಯೆಂದರೆ ಕನ್ನಡ ಮಾತನಾಡುವ ಇಂದಿನ ಜನರಿಗೆ ವಿಶೇಷ ಅಭ್ಯಾಸವಿಲ್ಲದೆ ಹೋದರೆ ಹಳಗನ್ನಡ ನಡುಗನ್ನಡಗಳು ಅರ್ಥವಾಗದೆಹೋಗುತ್ತವೆ.

೩

ಬದಲಾವಣೆ ಭಾಷೆಯ ಐತಿಹಾಸಿಕ ಬೆಳವಣಿಗೆಯಲ್ಲಿ ಮಾತ್ರ ಕಂಡುಬರುವ ಲಕ್ಷಣವಲ್ಲ. ವಿಶಾಲವಾದ ಭೌಗೋಲಿಕ ಪ್ರದೇಶದಲ್ಲಿ ಬಳಕೆಯಲ್ಲಿರುವ ಭಾಷೆ ಆ ಪ್ರದೇಶದ ಬೇರೆ ಬೇರೆ ಭಾಗಗಳಲ್ಲಿ, ಬೇರೆ ಬೇರೆ ರೂಪಗಳನ್ನು ತಾಳುವುದು ಸ್ವಾಭಾವಿಕ. ಆಯಾ ಭಾಗಗಳ ಆಡುಗರ (speakers) ನಡುವೆ ಸಂಪರ್ಕ ಕುಸಿದಿರುವುದೇ ಈ ವ್ಯತ್ಯಾಸಕ್ಕೆ ಮುಖ್ಯ ಕಾರಣ. ನೈಸರ್ಗಿಕವಾದ ನದಿ, ಬೆಟ್ಟಗಳೋ, ರಾಜಕೀಯ ಗಡಿವ್ಯವಸ್ಥೆಯೋ ಆಡುಗರ ಪರಸ್ಪರ ಸಂಪರ್ಕಕ್ಕೆ ತಡೆಯಾಗಿ ಪರಿಣಮಿಸಬಹುದು. ಪ್ರಾಚೀನ ದಾಖಲೆಗಳಾದ ಅಶೋಕನ ಶಾಸನಗಳಲ್ಲಿಯೇ ನಿರ್ದಿಷ್ಟವಾದ ಪ್ರಾದೇಶಿಕ ಭಿನ್ನತೆಗಳನ್ನು ಗುರುತಿಸಬಹುದಾಗಿದೆ. ಪ್ರಾಚೀನತಮವಾದ ವೈದಿಕ ಸಂಸ್ಕೃತದಲ್ಲಿಯೂ ಈ ಭಿನ್ನತೆಯ ಅವಶೇಷಗಳು ಉಳಿದಿವೆಯೆಂಬುದು ಪಂಡಿತರ ಅಭಿಪ್ರಾಯ. ಒಂದು ಭಾಷೆಯ ಭೌಗೋಲಿಕ ವ್ಯತ್ಯಾಸಗಳು

ಕಾಲ ಕಾಲಕ್ಕೆ ಭಾಷಾಶಾಸ್ತ್ರದ ವಿದ್ಯಾರ್ಥಿಗಳ ಗಮನವನ್ನು ಸೆಳೆದಿವೆ. ಹಲವಾರು ಭಾಷೆಗಳಲ್ಲಿನ ಈ ಬಗೆಯ ವ್ಯತ್ಯಾಸಗಳು ಆಯಾ ಭಾಷೆಗಳ 'ನುಡಿನಕ್ಷೆ' (Dialect Atlas) ಗಳಲ್ಲಿ ಗುರುತು ಕಂಡಿವೆ. 'ಭಾಷಿಕ ಭೂಗೋಳ' (Linguistic Geography) ದ ಹೆಸರಿನಲ್ಲಿ ಈಚೆಗೆ ಈ ಭಾಗದ ಅಭ್ಯಾಸ ತೀವ್ರಗತಿಯಿಂದ ಸಾಗಿದೆ.

ನೆರೆಯ ಭಾಷೆಗಳ ಸಂಪರ್ಕದಿಂದಲೂ ಒಂದು ಭಾಷೆಯಲ್ಲಿ ಭಿನ್ನತೆಗಳುಂಟಾಗಬಹುದು. ಕನ್ನಡನಾಡು ಮರಾಠಿ, ತೆಲುಗು, ತಮಿಳು, ಮಲಯಾಳಂ ಭಾಷಾ ಪ್ರದೇಶಗಳಿಂದ ಆವೃತವಾಗಿರುವ ಪ್ರದೇಶ. ಕೊಂಕಣಿ, ತುಳು, ಕೊಡಗು ಮೊದಲಾದ ಭಾಷೆಗಳನ್ನಾಡುವ ಜನಪ್ರದೇಶ ಈ ನಾಡಿನ ಒಳಭಾಗದಲ್ಲಿಯೇ ಇವೆ. ಈ ಅಂಶ ಕೂಡ ಕನ್ನಡ ಭಾಷೆಯ ಭೌಗೋಳಿಕ ಭಿನ್ನತೆಗಳಿಗೆ ಕಾರಣವಾಗಿದೆ.

ಸಾಮಾನ್ಯವಾಗಿ ಭೌಗೋಳಿಕ ಭಿನ್ನತೆಗಳ ದೃಷ್ಟಿಯಿಂದ ಕನ್ನಡವನ್ನು ಮಂಗಳೂರು ಕನ್ನಡ, ಮೈಸೂರು ಕನ್ನಡ, ಧಾರ್ವಾಡ ಕನ್ನಡ ಎಂದು ಮೂರು ಭಾಗ ಮಾಡುವುದು ಸಂಪ್ರದಾಯವಾಗಿದೆ. ಶಾಲಾ ಕಾಲೇಜುಗಳಲ್ಲಿ ಪಾಠ ಹೇಳುವ ದೃಷ್ಟಿಯಿಂದಲೂ ಮಾಡಿಕೊಂಡ ವರ್ಗೀಕರಣ ಇದಾಗಿದೆ. ಇಲ್ಲಿ ಭೌಗೋಳಿಕವಾಗಿ ಕನ್ನಡ ಭಾಷೆಯನ್ನು ಉತ್ತರ, ದಕ್ಷಿಣ ಹಾಗೂ ಮಧ್ಯ ಪ್ರದೇಶಗಳಿಗನುಗುಣವಾಗಿ ಗುರುತಿಸಿದೆ. ಇದು ತೀರ ಸ್ಥೂಲವಾದ ವಿಭಜನೆ. ಕನ್ನಡದ ಎಲ್ಲ ಪ್ರಾದೇಶಿಕ ಭಿನ್ನತೆಗಳನ್ನೂ ಈ ವಿಭಜನೆ ಒಳಗೊಳ್ಳುವುದಿಲ್ಲ. ಉತ್ತರ ಕರ್ಣಾಟಕದಲ್ಲಿಯೇ ಧಾರವಾಡದ ಉಪಭಾಷೆ, ಬಿಜಾಪುರದ ಉಪಭಾಷೆಯಿಂದ ಬೇರೆಯಾಗುತ್ತದೆ. ಇವೆರಡೂ ಬೀದರ್ ಗುಲ್ಬುರ್ಗಾ ಕಡೆಯ ಉಪಭಾಷೆಗಳಿಂದ ಭಿನ್ನವಾದವು. ಈ ಶತಮಾನದ ಆರಂಭದ ವೇಳೆಯಲ್ಲಿಯೇ ಗ್ರಿಯರ್ಸನ್ ಮಹಾಶಯರು ಬಿಜಾಪುರದ ಕನ್ನಡ ತೀರ ವಿಶಿಷ್ಟವಾದುದೆಂದು ಅದನ್ನು ಪ್ರತ್ಯೇಕವಾಗಿಯೇ ಉಲ್ಲೇಖಿಸಿರುವುದು ಗಮನಾರ್ಹವಾದ ವಿಚಾರವಾಗಿದೆ. ಮಧ್ಯ ಮೈಸೂರಿನಲ್ಲಿ ಮಲೆನಾಡಿನ ಕನ್ನಡ, ಬಯಲುಸೀಮೆಯ ಕನ್ನಡದಿಂದ ಬೇರೆಯಾಗಿದೆ. ಮಾತ್ರವಲ್ಲ, ಮಲೆನಾಡಿನಲ್ಲಿ ಶಿವಮೊಗ್ಗ ಜಿಲ್ಲೆಗೂ ಚಿಕ್ಕಮಗಳೂರು ಜಿಲ್ಲೆಗೂ ವ್ಯತ್ಯಾಸವಿದೆ. ಬಯಲುಸೀಮೆಯ ಮಂಡ್ಯದ ಕನ್ನಡ ಕೋಲಾರದ

ಕನ್ನಡದಿಂದ ಬೇರೆಯಾಗಿದೆ. ಮಂಗಳೂರು ಕನ್ನಡದ ಪ್ರದೇಶವೆಂದು ಹೇಳಲಾಗುವ ದಕ್ಷಿಣ ಕನ್ನಡ ಜಿಲ್ಲೆಯೊಂದರಲ್ಲಿಯೇ ಪುತ್ತೂರಿನ ಮಾತಿಗೂ ಕುಂದಾಪುರದ ಮಾತಿಗೂ ವ್ಯತ್ಯಾಸವಿದೆ.

ಮೈಸೂರಿನ 'ಅಮ್ಮ' ಧಾರ್ವಾಡದಲ್ಲಿ 'ಅವ್ವ' ಮಂಗಳೂರಿನಲ್ಲಿ 'ಅಬ್ಬೆ'; ಮಂಗಳೂರಿನಲ್ಲಿ ತೆಂಗಿನ ಮರ 'ನೆಟ್ಟ'ಗಿದ್ದರೆ, ಧಾರ್ವಾಡದಲ್ಲಿ 'ಚಾ' ಕೂಡ 'ನೆಟ್ಟ'ಗಿರಬಹುದು; 'ಊದುಗೊಳವೆ' ಮಲೆನಾಡಿನ ತೀರ್ಥಹಳ್ಳಿಯಲ್ಲಿ 'ಉರುಟಂಡೆ'ಯಾದರೆ ಪಕ್ಕದ ಮೂಡುಗೆರೆಯಲ್ಲಿ 'ಕೊಳವೆ'; ಮೈಸೂರಿನ 'ಸಂಬಂಧಿ' ಧಾರವಾಡದಲ್ಲಿ 'ಬಂಧು'ವೋ, 'ಬಳಗ'ದವನೋ ಆದರೆ ಮಂಗಳೂರಿನಲ್ಲಿ 'ನೆಂಟ'; ಮಂಗಳೂರಿನ 'ಉದಿಯಪ್ಪಂಗೆ' ಕುಂದಾಪುರದಲ್ಲಿಯೇ ಅರ್ಥವಾಗುವುದಿಲ್ಲ; ಮಲೆನಾಡಿನ ಹಳ್ಳಿಯಲ್ಲಿ ಅದು 'ನಸ್ಸಿಗ್ಗೆ'; ಮೈಸೂರಿನಲ್ಲಿ 'ಬೆಳಗ್ಗೆ'; ಧಾರ್ವಾಡದಲ್ಲಿ 'ಮುಂಜಾನಿ'; 'ಕಡೀಗ್ ಬನ್ನಿ' ಎಂದು ಶಿವಮೊಗ್ಗೆಯಲ್ಲಿ ಹೇಳಿದರೆ, ಮೈಸೂರಿನಲ್ಲಿ 'ಆಮೇಲೆ ಬನ್ನಿ'; ಧಾರವಾಡದಲ್ಲಾದರೋ 'ಹಿಂದಾಗಡೆಯಿಂದ ಬರ್ರಿ.' ಹೀಗೆ ಲೆಕ್ಕವಿಲ್ಲದಷ್ಟು ಉದಾಹರಣೆಗಳು ದೊರೆಯುತ್ತವೆ.

ಈಗ ಪ್ರಚಾರದಲ್ಲಿರುವ ಪ್ರಾಂತೀಯ ಭೇದಗಳು ಹಳಗನ್ನಡ ಕಾಲದಲ್ಲಿಯೂ ಇದ್ದಿರಬಹುದೆಂಬುದರಲ್ಲಿ ಸಂಶಯವಿಲ್ಲ. 'ಕವಿರಾಜಮಾರ್ಗ'ದಲ್ಲಿ ಉಲ್ಲೇಖಿತವಾದ ಉತ್ತರ ಮಾರ್ಗ ದಕ್ಷಿಣ ಮಾರ್ಗಗಳು ಆ ಕಾಲಕ್ಕೆ ಬಳಕೆಯಲ್ಲಿದ್ದ ಪ್ರಾಂತ ಭೇದಗಳನ್ನು ಸೂಚಿಸುತ್ತವೆಂದು ಹಲವರ ಅಭಿಪ್ರಾಯ. ಇದು ನಿಜವಿರಲಿ ಇಲ್ಲದಿರಲಿ, ಪ್ರಾಚೀನ ಶಾಸನ, ಸಾಹಿತ್ಯಗಳ ಸೂಕ್ಷ್ಮ ಅವಲೋಕನ ಅಂದೂ ಪ್ರಾಂತಭೇದಗಳಿದ್ದುವೆಂಬುದನ್ನು ತೆಳುವಾಗಿಯಾದರೂ ದೃಢಪಡಿಸುತ್ತದೆ.

"ತುಳು ಕನ್ನಡದಿಂದ ತೀರಬೇರೆಯಾದುದಲ್ಲ," "ಕೊಡಗು ಭಾಷೆ ಹಳಗನ್ನಡ—ತುಳುಗಳ ನಡುವಿನ ಸ್ಥಿತಿ," "ಕೋತ ಕನ್ನಡದ ಉಪಭಾಷೆ," "ತೋದ ಬಹುವಾಗಿ ಹಳಗನ್ನಡದಿಂದ ಉದಿಸಿದ್ದು; ತೀರ ಪ್ರತ್ಯೇಕವಾದ ಭಾಷೆಯಲ್ಲ," "ಬಡಗ ಕನ್ನಡದ ಪ್ರಾಚೀನ ಉಪಭಾಷೆ"—ಈ ಮುಂತಾದ ಹೇಳಿಕೆಗಳಿಂದ ಪಂಡಿತರು ತುಳು, ಕೊಡಗು, ಕೋತ, ತೋದ, ಬಡಗ ಇವನ್ನೂ ಕನ್ನಡದ ಉಪಭಾಷೆಗಳೆಂದೇ ಸೂಚಿಸಿದ್ದಾರೆ. ಕನ್ನಡಕ್ಕೂ ಈ

ಭಾಷೆಗಳಿಗೂ ಇವರು ನಿಕಟ ಸಂಬಂಧ ಈ ಹೇಳಿಕೆಗಳಿಂದ ವ್ಯಕ್ತವಾಗ ಬಹುದು. ಆದರೆ ಇವು ಇಂದು ಕನ್ನಡದಿಂದ ಸಿಡಿದು ಬೇರೆ ಭಾಷೆಗಳಾಗಿ ವೆಯೆ ಹೊರತು ಉಪಭಾಷೆಗಳಾಗಿ ಉಳಿದಿಲ್ಲ. ಬಡಗವೊಂದನ್ನು ಇಂದಿಗೂ ಕನ್ನಡದ ಉಪಭಾಷೆಯನ್ನಾಗಿ ಪರಿಗಣಿಸಲಾಗುತ್ತಿದೆ. ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಯ ಹವ್ಯಕರು ಆಡುವ ಭಾಷೆ ವಿಶಿಷ್ಟ ಲಕ್ಷಣಗಳಿಂದ ಕೂಡಿದ, ಹಳೆಗನ್ನಡದ ಹಲವಾರು ರೂಪಗಳನ್ನು ಹಾಗೆಯೇ ಉಳಿಸಿಕೊಂಡಿರುವ ಕನ್ನಡದ ಇನ್ನೊಂದು ಉಪಭಾಷೆಯಾಗಿದೆ. ಲಂಬಾಣಿಗರು, ಕುರುಬರು, ಜೇನು ಕುರುಬರು, ಇರುಳರು, ಸೋಲಿಗರು ಮೊದಲಾದ ಆದಿವಾಸಿ ವರ್ಗಕ್ಕೆ ಸೇರಿದ ಗುಂಪಿನವರ ಭಾಷೆಗಳ ಸಂಬಂಧ ಕನ್ನಡದೊಡನೆ ಯಾವ ರೀತಿಯಾದುದೆಂಬುದನ್ನು ಇನ್ನೂ ಅಭ್ಯಾಸಮಾಡಿ ನೋಡಬೇಕಾಗಿದೆ.

೪

ಭಾಷೆಯ ಬದಲಾವಣೆಗೆ ಸಂಬಂಧಿಸಿದಂತೆ ಸಾಮಾಜಿಕ ಸ್ಥಿತಿಗತಿಗಳನ್ನು ಕುರಿತ ಪ್ರಸ್ತಾಪ ಭಾಷಾಶಾಸ್ತ್ರ ಸಾಹಿತ್ಯದಲ್ಲಿ ಆಗೊಮ್ಮೆ ಈಗೊಮ್ಮೆ ವಿರಳವಾಗಿ ದೊರೆಯುತ್ತದೆ. ಭಾಷೆ ಮೂಲತಃ ಸಾಮಾಜಿಕ ಕ್ರಿಯೆಯಾಗಿರುವುದರಿಂದ, ಅದು ತನ್ನಲ್ಲಿ ಅನಿವಾರ್ಯವಾಗಿ ಸಾಮಾಜಿಕ ಪದರಗಳನ್ನು ನಿರ್ಮಿಸಿಕೊಂಡಿದೆ. ಈ ದೃಷ್ಟಿಯಿಂದ ಭಾಷೆ-ಸಮಾಜಗಳ ನಿಕಟ ಸಂಬಂಧವನ್ನು ಕುರಿತು ವಿಚಾರ ಮಾಡುವ ಶಾಸ್ತ್ರಭಾಗವಾಗಿ 'ಸಾಮಾಜಿಕ ಭಾಷಾಶಾಸ್ತ್ರ' (Socio-Linguistics) ಇತ್ತೀಚೆಗೆ ಬೆಳೆಯತೊಡಗಿದೆ. ಈ ಕ್ಷೇತ್ರದಲ್ಲಿ ನಡೆದಿರುವ ಶೋಧನೆಗಳು ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದಲ್ಲಿ ಭಾಷೆಯು ಬದಲಾಗುವ ರೀತಿವಿಧಾನಗಳನ್ನು ವಿವರಿಸುತ್ತವೆ. ಬೇರೆ ಬೇರೆ ಜಾತಿಯ ಜನರ ಬಳಕೆಯಲ್ಲಿ ಒಂದು ಭಾಷೆ ಬೇರೆ ಬೇರೆ ರೂಪ ತಾಳುವುದನ್ನು ನಾವು ನೋಡುತ್ತಿದ್ದೇವೆ. ಸಂಸ್ಕೃತ ನಾಟಕಗಳಲ್ಲಿ ಬೇರೆ ಬೇರೆ ಸಾಮಾಜಿಕ ವರ್ಗದ ಜನ ಭಿನ್ನ ಭಿನ್ನ ಪ್ರಾಕೃತಗಳನ್ನಾಡುವುದನ್ನು ನಾವು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

ಕನ್ನಡ ಭಾಷೆಯನ್ನು ಬಳಸುವ ಜನರಲ್ಲಿ ಹಲವರ ಮಾತೃಭಾಷೆ ಬೇರೆಯಾಗಿರುವುದರಿಂದ ಆ ಮಾತೃಭಾಷೆಯ ಪ್ರಭಾವವನ್ನು ಅವರ ಕನ್ನಡದಲ್ಲಿ

ಕಾಣಬಹುದಾಗಿದೆ. ಕ್ರೈಸ್ತಪಾದ್ರಿಗಳ ಕನ್ನಡ ಬೇರೆಯಾಗಿರುವ ರೀತಿಯಲ್ಲಿ, ಕನ್ನಡ ನಾಡಿನಾದ್ಯಂತ ಇರುವ ಮುಸ್ಲಿಮರು ಬಳಸುವ ಕನ್ನಡ ಪ್ರತ್ಯೇಕ ವಾದುದಾಗಿದೆ. ವಿದ್ಯಾವಂತರು ಹಾಗೂ ಅಕ್ಷರಸ್ಥರಲ್ಲದವರು ಬೇರೆ ಬೇರೆ ವರ್ಗ ವಾಗಿರುವ ಹಾಗೆ, ಪಟ್ಟಣದಲ್ಲಿ ವಾಸಿಸುವವರ ಕನ್ನಡ ಹಳ್ಳಿಯವರ ಕನ್ನಡ ಕ್ಕಿಂತ ಬೇರೆಯಾಗಿರುತ್ತದೆ. ಆರ್ಥಿಕ ಸ್ಥಿತಿಗತಿಗಳಿಗನುಗುಣವಾಗಿ ಕೂಡ ಸಾಮಾಜಿಕ ಸ್ಥಾನಮಾನಗಳಲ್ಲಿ ಪ್ರತ್ಯೇಕ ವರ್ಗಗಳಾಗುವುದು ಸಹಜ. ಬೇರೆ ಬೇರೆ ಉದ್ಯಮಗಳಲ್ಲಿ, ವೃತ್ತಿಗಳಲ್ಲಿ ತೊಡಗಿರುವವರು ತಮ್ಮದೇ ಗುಂಪು ಕಟ್ಟಿ ಕೊಳ್ಳುತ್ತಾರೆ. ಜೊತೆಗೆ ಸಾಮಾಜಿಕವಾಗಿ ಬಲವಾಗಿ ಬೇರೂರಿರುವ ಜಾತಿಯ ಕಟ್ಟುಪಾಡುಗಳಿವೆ. ಈ ಗುಂಪುಗಳು, ಈ ವರ್ಗಗಳು, ಈ ಪಂಗಡಗಳು ಭಾಷೆಯ ಮೇಲೆ ಸ್ಪಷ್ಟವಾದ, ಖಚಿತವಾದ ಪ್ರಭಾವವನ್ನು ಬೀರುತ್ತವೆ. ಏಕೆಂದರೆ ಒಂದು ಗುಂಪಿನ ಸದಸ್ಯರ ನಡುವೆಯಿರುವಷ್ಟು ಪರಸ್ಪರ ನಿಕಟ ಸಂಪರ್ಕ ಮತ್ತೊಂದು ಗುಂಪಿನ ಸದಸ್ಯರೊಂದಿಗಿರುವುದಿಲ್ಲ. ಪಂಗಡವೆಂದರೆ ಪ್ರತ್ಯೇಕತೆ ; ವರ್ಗವೆಂದರೆ ವಿಶಿಷ್ಟತೆ. ಆದ್ದರಿಂದ ಒಂದು ಗುಂಪಿನ ಉಪಭಾಷೆ ತನ್ನದೇ ಆದ ಇನ್ನೊಂದು ಗುಂಪಿನ ಉಪಭಾಷೆಯಿಂದ ಬೇರೆಯಾದ, ಲಕ್ಷಣಗಳನ್ನು ಪೋಷಿಸಿಕೊಂಡು ಬರುತ್ತದೆ. ಜಾತಿ ಪಂಗಡವಷ್ಟನ್ನೇ ಗಣನೆಗೆ ತೆಗೆದುಕೊಂಡರೂ, ಬ್ರಾಹ್ಮಣರು—ಬ್ರಾಹ್ಮಣೇತರರು ; ಬ್ರಾಹ್ಮಣರಲ್ಲಿ ಸ್ಮಾರ್ತರು, ಶ್ರೀವೈಷ್ಣವರು, ಮಾಧ್ವರು, ಸಾರಸ್ವತರು, ಹವ್ಯಕರು, ಕೋಟ ದವರು ಇತ್ಯಾದಿ ; ಬ್ರಾಹ್ಮಣೇತರರಲ್ಲಿ ಒಕ್ಕಲಿಗರು, ವೀರಶೈವರು ಮೊದಲಾಗಿ ಎಷ್ಟೋ ವರ್ಗಗಳನ್ನು ಗುರುತಿಸಬಹುದು.

ಕನ್ನಡ ಭಾಷೆಯ ಸಾಮಾಜಿಕ ಹಿನ್ನೆಲೆಯ ಭಾಷಾಶಾಸ್ತ್ರದ ದೃಷ್ಟಿಯಿಂದ ಸಂಪದ್ಭರಿತವಾಗಿದೆಯಾದರೂ ಈ ಕ್ಷೇತ್ರದಲ್ಲಿ ನಡೆದಿರುವ ಕೆಲಸ ತೀರ ಕಡಮೆ. ಬೆಂಗಳೂರು ಜಿಲ್ಲೆಯ ಒಬ್ಬ ಬ್ರಾಹ್ಮಣ ಹಾಗೂ ಒಕ್ಕಲಿಗ ಆಡುಗ ರಲ್ಲಿ ಕಂಡು ಬರುವ ವ್ಯತ್ಯಾಸಗಳನ್ನು ಅಭ್ಯಾಸ ಮಾಡಿ ಆಯಾ ಭಾಷೆಗೆ ವಿಶಿಷ್ಟವಾದ ಕೆಲವು ಲಕ್ಷಣಗಳನ್ನು ಬ್ರೈಟ್ ಎನ್ನುವ ಲೇಖಕರು ವಿವರಿಸಿ ದ್ದಾರೆ. ಮೆಕಾರ್ಮಿಕ್ ಎನ್ನುವ ಇನ್ನೊಬ್ಬ ಲೇಖಕರು ಧಾರವಾಡ, ಬೆಳ ಗಾವ್, ಬಿಜಾಪುರ ಪ್ರದೇಶದ ಬ್ರಾಹ್ಮಣ, ಲಿಂಗಾಯಿತ, ಮತ್ತು ಹರಿಜನರ ಕನ್ನಡವನ್ನು ವರ್ಣಿಸಿ ವಿಶ್ಲೇಷಿಸಿ ಆಯಾ ಗುಂಪುಗಳಿಗೆ ವಿಶಿಷ್ಟವಾದ ಲಕ್ಷಣ

ಗಳನ್ನು ಸೂಚಿಸಿದ್ದಾರೆ. ಮೈಸೂರು ನಗರದ ಸುತ್ತಮುತ್ತಲಿನ ಹರಿಜನರ ಭಾಷೆಯನ್ನು ಈಗ ಒಬ್ಬ ಸಂಶೋಧನ ವಿದ್ಯಾರ್ಥಿ ಅಭ್ಯಾಸಮಾಡುತ್ತಿದ್ದಾರೆ.

ವಿದ್ಯಾಭ್ಯಾಸ ಮತ್ತು ನಗರೀಕರಣ (Urbanization) ಗಳು ಉಪ ಭಾಷಾ ವ್ಯತ್ಯಾಸಗಳನ್ನು ಕಡಿಮೆ ಮಾಡುವಲ್ಲಿ ಪ್ರಧಾನ ಪಾತ್ರವಹಿಸಿದರೂ ಕೊನೆಗೆ ಅದೇ ಕಾರಣಗಳಿಗಾಗಿ ಪ್ರತ್ಯೇಕ ಉಪ ಭಾಷೆಗಳು ಏರ್ಪಡುತ್ತವೆ. ಸಾಮಾಜಿಕ ಭಾಷಾಶಾಸ್ತ್ರದ ದೃಷ್ಟಿಯಿಂದ ಕನ್ನಡದ ಉಪಭಾಷಾ ಸಮೀಕ್ಷಣೆ ಇನ್ನೂ ನಡೆಯಬೇಕಾಗಿದೆ. ಅದು ಸಮರ್ಪಕವಾಗಿ ನಡೆದಾಗ ಭಾಷೆ ಹಾಗೂ ಸಾಮಾಜಿಕ ಪದರುಗಳಿಗಿರುವ ಸಂಬಂಧದ ಪರಸ್ಪರ ಸ್ವರೂಪ ಸ್ಪಷ್ಟವಾಗುತ್ತದೆ. ಬೇರೆ ಬೇರೆ ವೃತ್ತಿಯವರ ಉಪಭಾಷೆಗಳನ್ನೂ ಗಮನಕ್ಕೆ ತೆಗೆದುಕೊಳ್ಳುವುದಲ್ಲದೆ, ಗುಪ್ತಭಾಷಾ (Secret Language) ವ್ಯವಸ್ಥೆಯನ್ನೂ ಅಭ್ಯಾಸಮಾಡಬೇಕು. ಚಿಕ್ಕಮಕ್ಕಳು ತಮ್ಮ ತಮ್ಮಲ್ಲಿ ಮೊದಲು ಸ್ವಾರಸ್ಯಕ್ಕಾಗಿ, ಕೊನೆಗೆ ದೊಡ್ಡವರ ಅಥವಾ ಬೇರೆಯವರ ಕಣ್ಣು ತಪ್ಪಿಸುವ ಸಲುವಾಗಿ, ತಮ್ಮ ಮಾತಿನಲ್ಲಿ ವರ್ಣಗಳನ್ನು ತಿರುವು ಮುರುವು ಮಾಡುವ ವಿಧಾನವನ್ನೂ, ಅಥವಾ ಪ್ರತಿಯೊಂದು ವರ್ಣದ ಮೊದಲಲ್ಲೂ ಇನ್ನೊಂದು ಬೇರೆ ವರ್ಣವನ್ನು ಜೋಡಿಸುವ ಜಾಣ್ಮೆಯನ್ನೂ ಇಲ್ಲಿ ಉಲ್ಲೇಖಿಸಬಹುದು. ಕಳ್ಳರು ಸಂಪನ್ನರ ಜೊತೆಯಲ್ಲಿದ್ದಾಗಲೂ ತಮ್ಮ ತಮ್ಮ ವ್ಯವಹಾರಕ್ಕಾಗಿ ಬಳಸುವ ಭಾಷೆಯನ್ನೂ, ವರ್ತಕರು ಗಿರಾಕಿಗಳಿಗೆ ಅರ್ಥವಾಗದ ರೀತಿಯಲ್ಲಿ ತಮ್ಮೊಳಗೇ ನಡೆಸುವ ಸಂಭಾಷಣೆಯನ್ನೂ ನಾವು ಕಡೆಗಣಿಸುವಂತಿಲ್ಲ. ಈ ಎಲ್ಲ, ಇಂಥ ಇನ್ನೆಷ್ಟೊ ಭಾಷಾಪ್ರಭೇದಗಳು ಕನ್ನಡ ಭಾಷೆಯ ವಿವಿಧ ಮುಖಗಳಿಗೆ ಮೆರಗು ಕೊಟ್ಟಿವೆ.

೫

ಶೈಲಿಯ ರೀತಿ (Stylistic aspect) ಯನ್ನು ಗಮನಿಸಿದಾಗ, ಭಾಷೆಯ ಬದಲಾವಣೆ ಭೌಗೋಳಿಕ ಹಾಗೂ ಸಾಮಾಜಿಕ ಬದಲಾವಣೆಗಳಿಗಿಂತ ಭಿನ್ನವಾಗಿರುತ್ತದೆ. ಯಾವನೇ ಒಬ್ಬ ಆಡುಗ ಭೌಗೋಳಿಕವಾಗಿ ಹಾಗೂ ಸಾಮಾಜಿಕವಾಗಿ ಆಯಾ ಉಪಭಾಷೆಯನ್ನು ಮಾತ್ರ ಉಪಯೋಗಿಸಬಹುದು. ಆದರೆ ಸಂದರ್ಭಕ್ಕೆ ಅನುಗುಣವಾಗಿ, ಕಾರ್ಯನಿರ್ವಹಣೆಗೆ ತಕ್ಕಂತೆ ಭಾಷೆಯ

ಬೇರೆ ಬೇರೆ ಶೈಲಿಗಳನ್ನು ಬಳಸುವುದು ತೀರ ಸಾಮಾನ್ಯವಾದ ವಿಚಾರ. ಬರಹವನ್ನಲ್ಲ. ಸಾಹಿತ್ಯ ಬರೆಯುವವನ್ನೇ ಯಾವುದೇ ಭಾಷೆಯಲ್ಲಾದರೂ ಜನ ಆಡುವ ಭಾಷೆ, ಬರಹ ಸಾಹಿತ್ಯಗಳಲ್ಲಿ ಉಪಯೋಗಿಸುವ ಭಾಷೆಯಿಂದ ಬೇರೆಯಾಗಿರುತ್ತದೆ. ಬರೆದ ಹಾಗೆ ಮಾತನಾಡುವುದಿಲ್ಲ. ಮನೆಯಲ್ಲಿ ಮಡದಿ ಮಕ್ಕಳೊಡನೆ ಮಾತನಾಡುವ ಹಾಗೆ ಸಾರ್ವಜನಿಕ ವೇದಿಕೆಯ ಮೇಲೆ ಭಾಷಣ ಮಾಡುವುದಿಲ್ಲ. ಇದು ಒಂದು ಭಾಷೆಯ ಬೇರೆ ಬೇರೆ ಶೈಲಿಗಳನ್ನು ಸಂದರ್ಭೋಚಿತವಾಗಿ ಉಪಯೋಗಿಸುವ ವಿಧಾನವಾಗಿದೆ. ಸಾಹಿತ್ಯ ಕೃತಿಗಳಲ್ಲಿ ಮಾತ್ರ ಉಪಯೋಗವಾಗುವ ಭಾಷೆಯ ಭಿನ್ನಶೈಲಿಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನಮಾಡುವ ಶಾಸ್ತ್ರಭಾಗವೊಂದು 'ಶೈಲಿಶಾಸ್ತ್ರ' (Stylistics) ಎಂಬ ಹೆಸರಿನಲ್ಲಿ ಬೆಳಕಿಗೆ ಬರುತ್ತಿದೆ. ಆದರೆ ಬರಿಯ ಸಾಹಿತ್ಯ ಶೈಲಿಗಳನ್ನಲ್ಲದೆ ಮಿಕ್ಕವನ್ನೂ ಈ ಶಾಸ್ತ್ರ ತನ್ನ ಅಧ್ಯಯನಕ್ಕೆ ಅಳವಡಿಸಿಕೊಳ್ಳಬೇಕು.

ಪ್ರತಿಯೊಂದು ಭಾಷಾಸಮಾಜದಲ್ಲಿಯೂ ಒಂದು ಶಿಷ್ಟಭಾಷೆ (Standard Language) ಇರುತ್ತದೆ. ಇದು ಹೆಚ್ಚು ಕಡಿಮೆ ಭಾಷಾ ಪ್ರದೇಶದ ಎಲ್ಲೆಡೆಯಲ್ಲಿಯೂ ಒಂದೇ ವಿಧವಾಗಿರುತ್ತದೆ. ಇಂದಿನ ಕನ್ನಡದಲ್ಲಿ ಸಾಹಿತ್ಯ ಕೃತಿಗಳಲ್ಲಿ, ಚಲನಚಿತ್ರಗಳಲ್ಲಿ, ಪಠ್ಯಪುಸ್ತಕಗಳಲ್ಲಿ, ಬಾನುಲಿ ಪ್ರಸಾರದಲ್ಲಿ, ರಂಗಭೂಮಿಯಲ್ಲಿ, ಸಾರ್ವಜನಿಕ ಸಮಾರಂಭದ ಭಾಷಣಗಳಲ್ಲಿ, ಶಾಲಾ ಕಾಲೇಜುಗಳ ವೇದಿಕೆಯಲ್ಲಿ, ವರ್ತಮಾನ ಪತ್ರಿಕೆಗಳಲ್ಲಿ ಬಳಸುತ್ತಿರುವ ಭಾಷೆ ಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಂಡಿರುವ ಶಿಷ್ಟಭಾಷೆಯಾಗಿದೆ. ಇದು ಬೇರೆ ಬೇರೆ ಭೌಗೋಳಿಕ ಪ್ರದೇಶಗಳಲ್ಲಿ, ಬೇರೆ ಬೇರೆ ಸಮಾಜದ ಜನ ದೈನಂದಿನ ಜೀವನದಲ್ಲಿ ಆಡುವ ಭಾಷೆಗಿಂತ ತೀರ ಭಿನ್ನವಾಗಿದೆ. ಮೊದಲನೆಯದರಲ್ಲಿ ಒಂದು ಏಕತೆ ಇದೆ. ಎರಡನೆಯದು ಬೇರೆ ಬೇರೆ ರೀತಿಯದಾಗಿದೆ. ಮಂಗಳೂರಿನಲ್ಲಿ ಪ್ರಕಟವಾಗುವ ಒಂದು ಪತ್ರಿಕೆಯನ್ನು, ಧಾರವಾಡದಲ್ಲಿ ಪ್ರಕಟವಾಗುವ ಇನ್ನೊಂದು ಪತ್ರಿಕೆಯನ್ನು ಹೋಲಿಸಿ ನೋಡಿದಾಗ ಅವರಲ್ಲಿ ವ್ಯತ್ಯಾಸಗಳಿರಬಹುದು. ಆದರೆ ಬಹುಭಾಗ ಎರಡರಲ್ಲಿಯೂ ಸಮಾನವಾದುದಾಗಿರುತ್ತದೆ. ಇದಕ್ಕೆ ಬದಲಾಗಿ ಮಂಗಳೂರಿನ ಆಡುಮಾತನ್ನು (Spoken dialect) ಧಾರವಾಡದ ಆಡುಮಾತಿನೊಡನೆ

ದೇನೂ ಅಲ್ಲ. ಎಲ್ಲ ಭಾಷೆಗಳಿಗೂ ಕೂಡುವ ಹಾಗೂ ಒಡೆಯುವ ಲಕ್ಷಣ ತೀರ ಸಾಮಾನ್ಯವಾದುದು. ಆಡುಗರಲ್ಲಿ ಏರ್ಪಡುವ ಸಂಪರ್ಕಕ್ಕೆ ಅನುಗುಣವಾಗಿ ಭಾಷೆ ಕೂಡಬಹುದು; ಒಡೆಯಬಹುದು. ನೆನ್ನೆ ಒಂದಾಗಿರುವುದು ಇಂದು ಹಲವಾಗಬಹುದು; ಇಂದಿನ ಹಲವು ನಾಳೆ ಒಂದೇ ಆಗಬಹುದು. ಲೋಕದ ಹಲವು ಭಾಷೆಗಳ ಬದುಕು ಇದಕ್ಕೆ ಸಾಕ್ಷಿ ಹೇಳುತ್ತದೆ. ಈ ವಿವಿಧ ಮುಖಗಳು ಭಾಷೆಗೆ ವೈವಿಧ್ಯವನ್ನು ತರುತ್ತವೆ. ವೈವಿಧ್ಯತೆ ಜೀವನಕ್ಕೆ ಸೊಗಸನ್ನು ತುಂಬುತ್ತದೆ.

# ಕನ್ನಡ ಸಾಹಿತ್ಯದ ಈಚಿನ ಪ್ರವೃತ್ತಿಗಳು

ಸಾಹಿತ್ಯದ ಮೂಲ ದ್ರವ್ಯ ಜೀವನ. ಆದುದರಿಂದ ಜೀವನದಂತೆಯೇ ಸಾಹಿತ್ಯ ಬೆಳೆಯುತ್ತದೆ. ಜೀವನದ ಸುಖ ದುಃಖಗಳು, ಏರು ಪೇರುಗಳು, ನಂಬಿಕೆ ಶ್ರದ್ಧೆಗಳು, ಸಮನ್ವಯ ಘರ್ಷಣೆಗಳು, ಹೊಂದಾಣಿಕೆ ಕಿತ್ತಾಟಗಳು ಸಾಹಿತ್ಯದಲ್ಲೂ ಕಾಣುತ್ತವೆ. ಜೀವನವೊಂದು ಪ್ರವಾಹ. ಸಾಹಿತ್ಯವೂ ಪ್ರವಾಹ. ಸದಾಕಾಲ ಎಲ್ಲಿಂದಲೋ ಹೇಗೋ ಹೊಸ ನೀರು ಹರಿದು ಬರುತ್ತಿರುತ್ತದೆ. ಕ್ರಾಂತಿಕಾರಕ ಎನ್ನಿಸಿಕೊಂಡದ್ದು ಸಂಪ್ರದಾಯವಾಗಿ ಮಾರ್ಪಡುತ್ತದೆ. ಇನ್ನೊಂದು ಹೊಸತು ಬಂದಾಗ ಸಂಪ್ರದಾಯ ಪ್ರತಿಭಟಿಸುತ್ತದೆ. ಬೇಗನೆ ಹೊಸತು ಹಳೆಯದಾಗಿ ಬರಲಿರುವ ಹೊಸದನ್ನು ವಿರೋಧಿಸಲು ಸಿದ್ಧಗೊಳ್ಳುತ್ತದೆ. ಹೊಸದು ಹಳೆಯದಾಗಿ ಇನ್ನೊಂದಕ್ಕೆ ಎಡೆಗೊಡುವ ಸಂಧಿ ಕಾಲ, ಘರ್ಷಣೆಯ ಫಲವಾಗಿಯೇ ಏನೋ ಎಲ್ಲರ ಕಣ್ಣು ಸೆಳೆಯುತ್ತದೆ. ಅದರಲ್ಲಿ ಯಾವದೊಂದು ಕಟ್ಟು, ಕ್ರಮ ಕಾಣಬರದಿದ್ದರೂ ಆರ್ಭಟದ ಫಲವೊಂದು ಇದ್ದೇ ಇರುತ್ತದೆ. ಯಾವುದೇ ಜೀವಂತವಾದ ಜನತೆಗೂ, ಸಾಹಿತ್ಯಕ್ಕೂ ಇದು ಸಾಮಾನ್ಯ.

ಬದಲಾಗುತ್ತಿರುವ ಬದುಕಿನೊಂದಿಗೇ ಸಾಹಿತ್ಯವೂ ಬದಲಾಗುತ್ತಿದ್ದರೆ ಸಾಹಿತ್ಯದ ಹೊಸ ಪ್ರವೃತ್ತಿಗಳ ಬಗೆಗೆ ಅಷ್ಟಾಗಿ ಗೊಂದಲವಾಗದು. ಆದರೆ ಬದಲಾವಣೆಯಲ್ಲಿ ಬದುಕು ಹಿಂದೆ ಬಿದ್ದು ಸಾಹಿತ್ಯ ಮುಂದೆ ಧಾವಿಸುವಾಗ ಪರಿಸ್ಥಿತಿ ಅನಿವಾರ್ಯವಾಗಿ ಗೊಂದಲಮಯವಾಗುತ್ತದೆ. ಸಾಹಿತ್ಯದ ಈ ನಾಗಾಲೋಟ ಬೇರೆ ಎಲ್ಲಿಯದೋ ಚಾಟಿ ಏಟಿನ ಫಲವಾದಾಗ ಈ ಪರಿಸ್ಥಿತಿ ವಿಚಿತ್ರಗೊಳ್ಳುತ್ತದೆ. ಅದರಲ್ಲಿಯೂ ಅಕ್ಷರಸ್ಥರಾದವರ ಸಂಖ್ಯೆ ಬಹಳ ಚಿಕ್ಕದಿರುವ ಭಾರತದಂತಹ ದೇಶದಲ್ಲಿ, ಸಮಾಜದಲ್ಲಿ ಸಾಹಿತ್ಯದ ನವಪ್ರವೃತ್ತಿಗಳು ಈ ಬಗೆಯವಾದಾಗ ಹಳೆಯದು ಹೊಸದರ ಘರ್ಷಣೆ ತೀವ್ರತರದ್ದಾಗುತ್ತದೆ. ಸಾಹಿತ್ಯದ ಈಚಿನ ಪ್ರವೃತ್ತಿಗಳು ಎಂದಾಗ ಈ 'ಈಚೆ' ಎಷ್ಟು ಈಚಿನದೆಂಬುದನ್ನು ನಿರ್ಧರಿಸುವುದು ಕಷ್ಟ. ಅದರಲ್ಲಿಯೂ ಹಳೆಯವು ಹೊಸವು

ಒಟ್ಟೊಟ್ಟಿಗೆ ನಿಂತು ಸಾಹಿತ್ಯವನ್ನು ಕಡೆದು ರೂಪಿಸುತ್ತಿರುವಾಗ ಈ ಸಮಸ್ಯೆ ಇನ್ನಷ್ಟು ಜಟಿಲಗೊಳ್ಳುತ್ತದೆ.

ಕನ್ನಡ ಸಾಹಿತ್ಯದ, ಮಾತ್ರವಲ್ಲ, ಸಮಗ್ರ ಭಾರತೀಯ ಸಾಹಿತ್ಯದ, ಒಂದು ಅತ್ಯಂತ ಗಮನಾರ್ಹವಾದ ಲಕ್ಷಣವೆಂದರೆ ಹೊಸಬರಿಗೆ ಹಳೆಯ ದಾಗಿರುವ ಹಳಬರಿಗೆ ಹೊಸದಾಗಿರುವ ಪ್ರವೃತ್ತಿಗಳು ಸಮ್ಮಿಶ್ರಗೊಂಡು ಎರಡೂ ಸಮಸಮವಾಗಿ ಒಂದರ ಮಗ್ಗುಲಲ್ಲಿ ಇನ್ನೊಂದು ಕಾರ್ಯೋನ್ಮುಖ ವಾಗಿರುವುದು. ಹಳೆಯದು ಅಳಿದಿಲ್ಲ; ಹೊಸದು ನೆಲೆಯಾಗಿಲ್ಲ. ಇಂಥ ಪರಿ ಸ್ಥಿತಿಯಲ್ಲಿ ಈಚಿನದೆಂಬುದನ್ನು ಸೋಸಿ ತೆಗೆಯುವುದು ಸುಲಭವಾದುದಲ್ಲ. ಹಿಂದಿನದರ ಜಿಡ್ಡು ಅದನ್ನು ಪೂರ್ತಿಯಾಗಿ ಬಿಟ್ಟಿರುವುದಿಲ್ಲ. ಹಳೆಯದೆಂಬುದೂ ಹಾಗೆಯೇ ಹೊಸದರಿಂದ ಸಂಪೂರ್ಣವಾಗಿ ಪ್ರತ್ಯೇಕವಾಗಿರುವುದಿಲ್ಲ. ಹೊಸ ದರ ಸ್ಪರ್ಶ ಹಳೆಯದನ್ನು ರೋಮಾಂಚನಗೊಳಿಸುತ್ತದೆ. ಹಳತು-ಹೊಸತರ ಕಣ್ಣು ಮುಚ್ಚಾಲೆ ನಡೆಯುತ್ತಿದೆ. ಒಂದೊಂದೂ ಬೇರೆಯಾದ, ಜೊತೆಗೆ ಪರಸ್ಪರ ವಿರೋಧವಾದ ಈ ದೃಷ್ಟಿಗಳನ್ನು ಒಬ್ಬನೇ ಕವಿ ಸ್ವೀಕರಿಸಿಕೊಂಡು ಅಭಿವ್ಯಕ್ತಗೊಳಿಸುವುದಂತೂ ಹೆಚ್ಚಿನ ಆಶ್ಚರ್ಯಕ್ಕೆ ಕಾರಣವಾಗಿದೆ.

ಕನ್ನಡ ಸಾಹಿತ್ಯದಲ್ಲಿ ತೋರಿಬರುತ್ತಿರುವ ಇತ್ತೀಚಿನ ಪ್ರವೃತ್ತಿಗಳನ್ನು ಪರಿಚಯ ಮಾಡಿಕೊಳ್ಳುವುದಕ್ಕೆ ಮೊದಲು ಕಾಲ ಕಾಲಕ್ಕೆ ಹೊಸ ಪ್ರವೃತ್ತಿ ಗಳಿಗೆ ಆಸ್ಪದವಿತ್ತು, ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿರುವ ಈ ಸಾಹಿತ್ಯದ ಪರಂಪರೆಯನ್ನು ಆ ನಿಟ್ಟಿನಲ್ಲಿ ಸೂಕ್ಷ್ಮವಾಗಿ ಅವಲೋಕಿಸು ವುದು ಒಳ್ಳೆಯದು. ಕನ್ನಡ ಯಾವತ್ತೂ ಕಾಲಕ್ಕೆ ಅನುಗುಣವಾಗಿ ಮಾರ್ಪಡುತ್ತಾ ಬಂದಿದೆ; ಹೊಸತನಗಳನ್ನು ಆಹ್ವಾನಿಸಿದೆ; ಆದರಿಸಿದೆ, ಹೊಸ ಗಾಳಿಗೆ ಅದು ಎಂದೂ ಬಾಗಿಲು ಮುಚ್ಚಿದ್ದಿಲ್ಲ.

ಸಾವಿರದ್ವೆನೂರು ವರ್ಷಗಳ ದೀರ್ಘ ಇತಿಹಾಸದಲ್ಲಿ ಕನ್ನಡ ಮೈಗೂಡಿಸಿ ಕೊಂಡ ಹೊಸತನಗಳು ಅನ್ಯಾದೃಶ. ಭಾಷೆಯೇ ಹಳಗನ್ನಡ, ನಡುಗನ್ನಡ, ಹೊಸಗನ್ನಡಗಳೆಂದು ಮೂರು ಮಜಲು; ಹಿನ್ನೆಲೆಯಾದರೂ ಒಮ್ಮೆ ಸಂಸ್ಕೃತ ಇನ್ನೊಮ್ಮೆ ಪರ್ಷಿಯನ್, ಅರಾಬಿಕ್—ಮತ್ತೊಮ್ಮೆ ಇಂಗ್ಲಿಷ್; ಧರ್ಮದ ದೃಷ್ಟಿಯಿಂದ ಜೈನರು, ವೀರಶೈವರು, ಬ್ರಾಹ್ಮಣರು; ಛಂದಸ್ಸು—ಚಂಪೂ, ಷಟ್ಪದಿ, ಸಾಂಗತ್ಯ, ತ್ರಿಪದಿ; ವಸ್ತುವಿನ ಆಯ್ಕೆಯಲ್ಲಿ ಒಮ್ಮೆ ಭಕ್ತಿ,

ಇನ್ನೊಮ್ಮೆ ಪೌರುಷ, ನೀತಿಬೋಧೆ, ಸಮಾಜಸುಧಾರಣೆ. ಹತ್ತಾರು ರಾಗ; ನೂರಾರು ಬಣ್ಣ; ಹಲವಾರು ಭಂಗಿ. ಯಾವುದೇ ಮಟ್ಟದಿಂದ ಯಾವುದೇ ಮಾನದಿಂದ ಕನ್ನಡದ ಶಕ್ತಿಯನ್ನು ಶಕ್ತಿ ಅಭಿವ್ಯಕ್ತವಾಗಿರುವ ಬಗೆಯನ್ನು ಅಳೆದು ನೋಡಬಹುದು. ಲೋಕದ ಹಲವು ಸಾಹಿತ್ಯಗಳಲ್ಲಿ ಈ ತೇಜಸ್ಸಿಲ್ಲ; ಈ ವರ್ಣವೈವಿಧ್ಯವಿಲ್ಲ; ವಿಲಾಸ ವೈಭವಗಳಿಲ್ಲ.

ನಮ್ಮ ಆಧುನಿಕ ಸಾಹಿತ್ಯ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ. ಎರಡು ನೂರು ವರ್ಷಗಳು ರಾಜಕೀಯ ದಾಸ್ಯದಲ್ಲಿದ್ದ ಈ ದೇಶ ಇನ್ನೂ ಆ ಮಾನಸಿಕ ದಾಸ್ಯದಿಂದ ಬಿಡುಗಡೆ ಹೊಂದಿಲ್ಲ. ನಮ್ಮ ಭಾವ ಭಾವನೆಗಳೂ, ಯೋಚನೆ ಆಲೋಚನೆಗಳೂ ಪಾಶ್ಚಾತ್ಯ ಪ್ರಭಾವವನ್ನು ತಪ್ಪಿಸಿಕೊಂಡಿಲ್ಲ. ಇದು ಎಷ್ಟರ ಮಟ್ಟಿಗೆ ಗಾಢವಾಗಿದೆಯೆಂದರೆ ಈ ಅನ್ಯಪ್ರಭಾವವನ್ನು ಪ್ರಭಾವವೆಂದು ಒಪ್ಪಿಕೊಳ್ಳಲು ಕೂಡ ನಾವು ಸಿದ್ಧರಾಗಿಲ್ಲ. ಈ ಬಗೆಯ ಪಾಶ್ಚಾತ್ಯ ಅನುಕರಣೆಯಿಂದ ಸಾಧಿತವಾಗಿರುವ ನಮ್ಮ ಜೀವನ ವಿಧಾನಗಳಲ್ಲಿ ಸಾಹಿತ್ಯವೂ ಒಂದಾಗಿದೆ. "ಈಗ ಹತ್ತೊಂಬತ್ತನೆಯ ಶತಮಾನದಲ್ಲಿ ಇಂಗ್ಲಿಷರ ಆಳ್ವಿಕೆಯಲ್ಲಿ ಪಾಶ್ಚಾತ್ಯರ ನಾಗರಿಕತೆ, ಐಹಿಕ ಸಾಧನ ಸಂಪತ್ತು, ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ, ಮತ ಮುಂತಾದವುಗಳಿಗೆ ಸಂಬಂಧಪಟ್ಟ ನವೀನ ಜ್ಞಾನದ ಸೆಳೆತಕ್ಕೆ ಮಿಕ್ಕ ದೇಶ ಭಾಷೆಗಳಂತೆಯೇ ಕನ್ನಡವೂ ಸಿಕ್ಕಿ ಒಂದು ಹೊಸ ಅಭಿಮಾನವನ್ನೂ, ಹೊಸ ಅಭಿರುಚಿಯನ್ನೂ ಕಲಿತು, ಹೊಸ ರೀತಿಗಳಲ್ಲಿ ಕಾವ್ಯ ಸೃಷ್ಟಿಯನ್ನು ಅಭ್ಯಾಸ ಮಾಡುತ್ತಿದೆ. ಭಾಷಾಂತರಗಳೂ, ಅನುಕರಣಗಳೂ, ಸ್ವಂತ ಕವಿತೆಗಳೂ, ಹೊಸ ಕಾವ್ಯ ರೂಪಗಳೂ, ಹೊಸ ಛಂದಸ್ಸುಗಳೂ, ಹೊಸ ಅಭಿಪ್ರಾಯಗಳೂ ಸಂಪ್ರದಾಯ ಮಾರ್ಗವನ್ನು ಲಕ್ಷ್ಯಕ್ಕೆ ತಾರದೆ ಸ್ವಾತಂತ್ರ್ಯಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಯಲ್ಲಿ ಹರಡಿಕೊಳ್ಳುತ್ತಿದೆ" ಎಂಬುದಾಗಿ ಆಚಾರ್ಯ ಶ್ರೀಯವರು ಈಗ ಸುಮಾರು ಇಪ್ಪತ್ತು ವರ್ಷಗಳ ಕೆಳಗೇ ಘೋಷಿಸಿದರು.[1] ತಮ್ಮ 'ಇಂಗ್ಲಿಷ್ ಗೀತೆಗಳ' ಮೂಲಕ ಕನ್ನಡ ಕಾವ್ಯದ ನವೋದಯವನ್ನೂ ಸಾರಿದರು.

---

1 ಕನ್ನಡ ಕೈಪಿಡಿ–೨, ಪು. ೪೧೪–೪೧೫

ಗಮನ ಕೊಟ್ಟಿರುವುದೇ ಅದು ನಮ್ಮಲ್ಲಿ ಸುಸಂಗತವಾಗಿ ಬರಲಿಲ್ಲವೆಂಬುದಕ್ಕೆ ಕಾರಣವಾಗಿದೆ. ಆದರೂ ಪ್ರತಿಭಾವಂತರಾದ ಕೆಲವರು ಈ ವಿಸಂಗತವನ್ನೂ ಸುಸಂಗತಗೊಳಿಸುವುದಕ್ಕೆ ಸಮರ್ಥರಾಗಿದ್ದಾರೆಂಬುದು ಸಮಾಧಾನದ ವಿಷಯ. ನವ್ಯತೆ ಕಾವ್ಯದಲ್ಲಿ ಆರಂಭವಾಗಿ, ಸಣ್ಣ ಕಥೆಗೆ ಬಂದು, ಕಾದಂಬರಿ ನಾಟಕಗಳನ್ನೂ ಪ್ರವೇಶಿಸುತ್ತಿದೆ. ಒಂದು ಪಂಥವಾಗಿ ಬೆಳೆಯುತ್ತಿದೆ.

ವಿಜ್ಞಾನದ ಪ್ರಗತಿ, ಸಾಮಾಜಿಕ ಸ್ಥಿತ್ಯಂತರ, ಕುಸಿದ ಬಿದ್ದ ಕುಟುಂಬ ಜೀವನ, ವೈಚಾರಿಕ ಕ್ರಾಂತಿ, ಮೌಲ್ಯ ಸಂಘರ್ಷಣೆ-ಇವುಗಳೆಲ್ಲದರ ಫಲವಾಗಿ ಕಳೆದ ಶತಮಾನದ ಕೊನೆಯಲ್ಲಿ ಹಾಗೂ ಈ ಶತಮಾನದ ಆರಂಭದಲ್ಲಿ ಪಾಶ್ಚಾತ್ಯ ಸಾಹಿತ್ಯದಲ್ಲಿ ನವ್ಯತೆ ತಲೆಹಾಕಿತು. ಪೌಂಡ್ ಎಲಿಯೆಟ್ ಮೊದಲಾದವರು ನವ್ಯತೆಯ ಮುಂದಾಳುಗಳಾಗಿ ಕಾವ್ಯ ಕ್ಷೇತ್ರದಲ್ಲಿ ಕಾಲಿಕ್ಕುವವರಿಗೆ ಅಪೂರ್ವ ಸ್ವಾತಂತ್ರ್ಯವೊಂದನ್ನು ಗಳಿಸಿಕೊಟ್ಟರು. ಅಮೆರಿಕೆಯ ಕವಿಯೊಬ್ಬ "ತಮಗೆ ಅಗತ್ಯವಿದ್ದುದನ್ನೆಲ್ಲ ಮಾಡಿಕೊಳ್ಳಲು ಕವಿಗಳಿಗೆ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟ ಎಲಿಯೆಟ್ ಮತ್ತು ಪೌಂಡರಿಗೆ ನಾನು ಯಾವತ್ತೂ ಕೃತಜ್ಞನಾಗಿದ್ದೇನೆ" ಎಂದು ಹೇಳಿಕೊಂಡು ಇನ್ನೊಂದು ಮಾತನ್ನೂ ಆಡಿದ್ದಾನೆ.

> It was part of our purposeful labor, in those days, to fill our poems with somewhat studied puns which could be said to "work on several different levels" though they often did not work on even one.[1]

ನವ್ಯತೆ ನೆಲದಿಂದಲೇ ಅರಳುವ ಕಡೆಯೇ ಪರಿಸ್ಥಿತಿ ಹೀಗಿದ್ದರೆ, ಅದು ಆಕಾಶದಿಂದ ಉರುಳುವ ಕಡೆ ಏನಾಗಬಹುದೆಂಬುದನ್ನು ನಮ್ಮ ಸಾಹಿತ್ಯದ ಈಚಿನ ಪ್ರವೃತ್ತಿಗಳು ತೋರಿಸುತ್ತಿವೆ.

ನಮ್ಮ ಸಾಹಿತ್ಯದ ಇತಿಹಾಸದಲ್ಲಿ ಕಾಲಕಾಲಕ್ಕೆ ಕಂಡು ಬರುವ ಹೊಸ ಪ್ರವೃತ್ತಿಗಳು, ಸಾಹಿತ್ಯಸೃಷ್ಟಿ ಆಸ್ವಾದನೆಗಳ ದೃಷ್ಟಿಯಿಂದ, ಕೆಲವರ ಸ್ವಾಮ್ಯವನ್ನು ಬಿಡಿಸಿ ಹಲವರ ಕೈಗೆ ತರುವ ಪ್ರಯತ್ನಗಳಾಗಿದ್ದರೆ, ಈಚಿನ ಪ್ರವೃತ್ತಿಗಳು ಸಾಹಿತ್ಯವನ್ನು ಕೆಲವರದನ್ನಾಗಿ ಕೆಲವು ಸಲ ಕೇವಲ ಬರೆದವನದನ್ನಾಗಿ

---

[1] H. Nemerov, *Contemporary American Poetry*, p. 299

ಲೇಖಕ, ಮಾನವನ ಲೈಂಗಿಕ ಜೀವನಕ್ಕೆ ಅತಿ ಪ್ರಾಶಸ್ತ್ಯ ನೀಡಿದ್ದಾನೆ. ಈಚಿನ ಪ್ರವೃತ್ತಿಗಳ ಕೇಂದ್ರಬಿಂದುವಾದ ಕಾಮ ಈಗ ನಿಷಿದ್ಧವೆಂದು ಪರಿಗಣಿಸಲ್ಪಟ್ಟಿಲ್ಲ. ಆದರೆ ಅದರ ಏಕನಾದ ಬದುಕನ್ನು ನೋಡುವ ದೃಷ್ಟಿಗೆ ಪೂರ್ಣತೆಯನ್ನು ಕೊಟ್ಟಿಲ್ಲ. ಜೀವನದಲ್ಲಿ ಕಾಮ ಪ್ರಧಾನವಾಗಿದ್ದರೂ ಜೀವನವನ್ನು ಕಾಮದೊಂದಿಗೆ ಸಮೀಕರಿಸುವುದು ಸಾಧ್ಯವಿಲ್ಲ. ಹೊಸ ಪ್ರವೃತ್ತಿಗಳು ಈ ಸಮೀಕರಣವನ್ನು ಒಪ್ಪಿಕೊಂಡಂತೆ ಕಾಣುತ್ತದೆ. ಇದಕ್ಕೆ ಕಾರಣ ನವ ಲೇಖಕ ಅನುಭವದ ಬಲದ ಮೇಲೆ ನಿಂತಿದ್ದೇನೆಂದುಕೊಂಡಿರುವುದು. "ನನ್ನ ಮಟ್ಟಿಗೆ, ಕಾಮ ವಿಕೃತಿ ತಂದುಕೊಟ್ಟಂಥ ಭಾವತೀವ್ರತೆಯನ್ನು ಸಹಜವಾಗಿ ಬೇರೆ ವಸ್ತು ತಂದುಕೊಟ್ಟಿಲ್ಲ" ಎಂಬುದಾಗಿ ಇಪ್ಪತ್ತರ ಕವಿಯೊಬ್ಬರು ಹೇಳುತ್ತಾರೆ. ವ್ಯಕ್ತಿ, ಸಮಾಜ, ರಾಷ್ಟ್ರಜೀವನಗಳಲ್ಲಿ ಎಂದಿಗಿಂತಲೂ ಹೆಚ್ಚಿನ ಗಂಡಾಂತರ ಎದುರಾಗಿರುವ, ಜಟಿಲತೆ ತಲೆದೋರಿರುವ ಈ ದಿನಗಳಲ್ಲಿ ಎಲ್ಲ ಕವಿಗಳೂ ಹೀಗಾದರೆ ಏನೆಂದು ಭಯವಾಗುತ್ತದೆ. ಈ ಪರಿಸರದಲ್ಲಿ ಕಾಮವೊಂದೇ ಸಹಜವೆಂದು ಹೇಳುವುದು ಅಸಹಜವಾಗಿ ತೋರುತ್ತದೆ. ಕಾಮವಲಯದ ಹೊರಗೆ ಹೊಸ ಲೇಖಕ ಸಾಧಿಸಿರುವುದೇನು ಎಂದು ಕೇಳುವುದು ತಪ್ಪಾಗಲಾರದು.

ಹೊಸ ಕಾವ್ಯದ ಛಂದೋ ರೀತಿಯನ್ನು ಕುರಿತು ಹೇಳುವುದಾದರೆ ಅದು ಒಂದು ಬಗೆಯ ಸ್ವಚ್ಛಂದ. "ವಿಷಮಲಯದ ಅನಿಯಮಿತವಾದ ಸಾಲುಗಳ ಛಂದೋ ಯೋಜನೆ" ನವ್ಯಕಾವ್ಯದ ಒಂದು ಲಕ್ಷಣವೆಂದ ಮಾತ್ರಕ್ಕೆ ಅದು ಕೆಟ್ಟ ಗದ್ಯವಾಗಬಹುದೆಂದು ಅರ್ಥವಲ್ಲ. ಅದರಲ್ಲಿ ಒಂದು ನಿರ್ದಿಷ್ಟವಾದ ರೂಪ, ಛಂದಸ್ಸು, ಪ್ರಾಸ ಇಲ್ಲದಿರಬಹುದು. ಆದರೆ ಅದು ಒಂದು ಬಗೆಯ ನಾದದ ಗತ್ತಿನಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಪೂರ್ವ ಸಿದ್ಧತೆಯಿಲ್ಲದ ನಮ್ಮ ಅನೇಕ ಹೊಸ ಕವಿಗಳಿಗೆ ಈ ಗತ್ತಿನ ಗುಟ್ಟು ತಿಳಿಯದಿರುವುದರಿಂದ ಕಾವ್ಯ ಬಂಧ ಶಿಥಿಲಗೊಂಡಿದೆ. ಅದು ಅಚ್ಚಾಗಿರುವ ರೀತಿಯಲ್ಲಿ ಮಾತ್ರ ಅದನ್ನು ಕಾವ್ಯವೆಂದು ಗುರುತಿಸಬೇಕಾಗಿದೆ.

ನಾನಾ ಅಂಶಗಳನ್ನು ಪ್ರತಿಮೆಗಳನ್ನಾಗಿಸಿ ಜೀವಂತಗೊಳಿಸಿರುವುದೂ, ವ್ಯಂಗ್ಯ ವಿಡಂಬನೆಗಳಿಗೆ ಮಾರುಹೋಗಿರುವುದೂ ಹೊಸ ಪ್ರವೃತ್ತಿಗಳೇ. ಸಂಕೇತ ನಿರ್ಮಾಣದಲ್ಲಿ ಹೊಸ ಲೇಖಕ ತನ್ನ ಚೂಪುಗಾರಿಕೆಯನ್ನೇನೋ

ಪ್ರದರ್ಶಿಸಿದ್ದಾನೆ. ಆದರೆ ವ್ಯಂಗ್ಯ ವಿಡಂಬನೆಗಳು ಮಾತ್ರ ನೀತಿ ಬೋಧೆಯಂತೆ ಕಾವ್ಯ ಸಂಪ್ರದಾಯವಾಗಿ ತಳವೂರಿವೆ. ವ್ಯಂಗ್ಯ ಕಲೆಗಾರಿಕೆಗೆ ಮೊನೆಯನ್ನೂ ಸಾರ್ಥಕತೆಯನ್ನೂ ತಂದುಕೊಡುತ್ತದೆ. ಆದರೆ ಅದೇ ಪರಮವೆಂದು ಪರಿಗಣಿತವಾದಾಗ ನಿಷ್ಪ್ರಯೋಜಕವಾಗುತ್ತದೆ; ಗುರಿ ತಪ್ಪುತ್ತದೆ.

ಹೊಸ ಪ್ರವೃತ್ತಿಯ ನಾಟಕಗಳು, ಕಥೆಗಳು, ಕಾದಂಬರಿಗಳು ಹೆಚ್ಚಾಗಿ ಬರುತ್ತಿಲ್ಲ. ನಾಟಕಗಳಿಗಿಂತ ಕಥೆಕಾದಂಬರಿಗಳು ಹೊಸ ಪ್ರವೃತ್ತಿಯನ್ನು ಅರಗಿಸಿಕೊಂಡಿರುವಂತೆ ತೋರುತ್ತದೆ. ನಾಟಕಗಳಲ್ಲಿ ಪ್ರಯೋಗಶೀಲತೆ, ಕಲೆಗಾರಿಕೆಗಳಿಗೇನೂ ಕೊರತೆಯಿಲ್ಲ. ಆದರೆ ವ್ಯಕ್ತಗೊಳ್ಳಬೇಕಾದ ಪ್ರಮಾಣದಲ್ಲಿ ಆದರ ಸಂಕೀರ್ಣತೆ ಪ್ರಕಟವಾಗುತ್ತಿಲ್ಲ. ಸಣ್ಣ ಕಥೆಗಳಲ್ಲಿ ಒಬ್ಬಿಬ್ಬರು ಅಪೂರ್ವಸಿದ್ಧಿಯನ್ನು ಮೆರೆದಿದ್ದಾರೆ. ಕಾದಂಬರಿ ಕ್ಷೇತ್ರದಲ್ಲಿ ವೈಚಾರಿಕತೆ ಪ್ರಖರವಾಗಿ ರೂಪುಗೊಳ್ಳುತ್ತಿದೆ. ಜೀವನದ ಸಮಗ್ರತೆಗೆ ದನಿಗೂಡಿಸುವ ಪ್ರಯತ್ನ ಅಲ್ಲಿ ನಡೆಯುತ್ತಿದೆ. ಮೂಲಭೂತವಾದ ಪ್ರಶ್ನೆಗಳಿಗೆ ಉತ್ತರ ಹುಡುಕುವ ಕಾರ್ಯ ಭರದಿಂದ ಸಾಗುತ್ತಿದೆ. ಅನನ್ಯವಾದ ಅಭಿವ್ಯಕ್ತಿ ತನಗೆ ತಾನಾಗಿ ರೂಪುಗೊಳ್ಳುತ್ತಿದೆ. ಪ್ರಾದೇಶಿಕ ಜೀವನವೂ ವಿಶಾಲವಾದ ಹಾಸಿನ ಮೇಲೆ ತನ್ನ ವರ್ಣ ವಿಲಾಸಗಳನ್ನು ಪ್ರದರ್ಶಿಸುತ್ತಿದೆ. ಆದರೆ ಈ ರಂಗದಲ್ಲಿ ಹೊಸ ಪ್ರವೃತ್ತಿಯ ಲೇಖಕ ಸಿನಿಕತನವನ್ನು ಪ್ರದರ್ಶಿಸುವುದು, ತಾಂತ್ರಿಕ ಸಿದ್ಧಿಗಾಗಿ ಜೀವನವನ್ನು ಬಲಿಗೊಡುವುದು, ಶಕ್ತಿಯನ್ನು ಅಪವ್ಯಯಗೊಳಿಸುವುದು ವಿರಳವೇನಲ್ಲ.

ಹೊಸ ತಲೆಮಾರಿನ ಲೇಖಕನ ಕಥೆ ಇದಾದರೆ, ಹಿಂದಿನ ತಲೆಮಾರಿನ ಲೇಖಕ ಹೊಸ ಪರಿಸರದ ಬಗೆಗೆ "ದಿವ್ಯ ನಿಲಕ್ಷ್ಯ" ತಾಳಿದ್ದಾನೆ. ಆದರೆ ಆತನ ಸತ್ವ ಮಾತ್ರ ತೀರಿಲ್ಲ. "ಸ್ವರಕ್ಕೆ ಮೋಹಗೊಳ್ಳುವವರಾರು ಅರ್ಥಕ್ಕೆ ಕುದಿಯುತ್ತಾರೆ?" ಎಂಬುದು ಪ್ರಸಿದ್ಧ ಕವಿಯೊಬ್ಬರ ಪ್ರಶ್ನೆಯಾಗಿದೆ. ಭಾಷಾ ಮಾಧ್ಯಮದ ಕವಿ ನಾದ ಮಾಧ್ಯಮದ ಬಗೆಗೆ ಹೀಗೆ ಮೋಹ ತೋರಿರುವುದು ಅವನತಿಯ ದ್ಯೋತಕವಾಗಿದೆ. ಹಳಬರಲ್ಲಿ ಬದುಕಿನ ಎಲ್ಲ ಬಗೆಗಳಿಗೂ ಸ್ಪಂದಿಸುವ ಕವಿ ಚೇತನಗಳಿಗೇನೂ ಕೊರತೆಯಿಲ್ಲ. ನವ್ಯತೆಯ ಪುಕ್ಕ ಕಟ್ಟಿಕೊಂಡು ರಂಗಕ್ಕಿಳಿದ ಕವಿಗಳೂ ಇಲ್ಲದಿಲ್ಲ. ಹಳೆಯದು–ಹೊಸದಕ್ಕೆ

ಸೇತುವೆಯನ್ನು ನಿರ್ಮಿಸಿರುವ ಲೇಖಕರು ಕೆಲವರಾದರೂ ಇದ್ದಾರೆ. ಕಥೆ ಕಾದಂಬರಿಗಳಲ್ಲೂ ಇದೇ ಬಗೆಯ ಪರಿಸ್ಥಿತಿ.

ಜನಪದ ಸಾಹಿತ್ಯದ ಪುನರುಜ್ಜೀವನದ ಆರಂಭ ಕಾಲದಲ್ಲಿ ಹಲಸಂಗಿ ಗೆಳೆಯರು ಮೊದಲಾಗಿ ಬೇಂದ್ರೆಯವರಿಂದ ಸಮರ್ಥವಾಗಿ ಬಳಸಲ್ಪಟ್ಟ ಆಡು ನುಡಿ ಈಗ ಹಲವು ತರುಣರ ಕೈಯಲ್ಲಿ ಯಶಸ್ವಿಯಾಗಿ ಉಪಯೋಗಗೊಂಡು ಸಾಹಿತ್ಯಕ್ಕೆ ಅನನ್ಯವಾದ ಒಂದು ದೇಶೀಯ ಸೊಗಡನ್ನೂ ಸೊಗಸನ್ನೂ ತಂದಿದೆ.

ಹಳೆಯ ಕಾವ್ಯ ರೂಪಗಳಾದ ವಚನ, ಸಾಂಗತ್ಯ, ತ್ರಿಪದಿ, ಷಟ್ಪದಿ, ಚಂಪೂಗಳು ಇಂದಿನ ಲೇಖಕರ ಆಕರ್ಷಣೆಗೆ ಒಳಗಾಗಿವೆ. ಅವು ಬರಿಯ ಆಕರ್ಷಣೆ ಆಗದೆ ವಚನ ಸಾಂಗತ್ಯ ತ್ರಿಪದಿಗಳು ಈಚಿನ ಕೆಲವು ಸಮೃದ್ಧ ಫಲಗಳಿಗೂ ಕಾರಣವಾಗಿವೆ. ಈ ಪ್ರಕಾರಗಳ ಮೂಲರೂಪ ಕೂಡ ನವ ಅಭಿವ್ಯಕ್ತಿಯಲ್ಲಿ ಪರಿಸರಕ್ಕನುಗುಣವಾಗಿ ಬದಲಾವಣೆ ಹೊಂದಿವೆ. ಕೇವಲ ವಚನಗಳ ಬಂಧವನ್ನೇ ಅಧ್ಯಯನಕ್ಕೆ ತೆಗೆದುಕೊಂಡು ನೋಡಿದರೆ ಆಗಿರುವ ಆಗಾಧ ಮಾರ್ಪಾಡು ಕಣ್ಣಿಗೆ ಹೊಡೆಯುವಷ್ಟು ಸ್ಪಷ್ಟವಾಗಿ ಗೋಚರಿಸುತ್ತದೆ.

ಕಥೆ ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಗ್ರಾಮಜೀವನದ ಚಿತ್ರಣ, ಆದಿವಾಸೀ ಜನರ ಜೀವನ ಆಗೊಮ್ಮೆ ಈಗೊಮ್ಮೆ ಕಾಣಿಸಿಕೊಂಡರೂ ಮುಖ್ಯವಾಗಿ ಅಲ್ಲಿ ಚಿತ್ರಿತವಾಗುತ್ತಿರುವುದು ಮಧ್ಯಮ ವರ್ಗದ ನಗರ ಜೀವನ. ಪರಂಪರಾಗತವಾದ ಕೆಲವು ಭಾರತೀಯ ಮೌಲ್ಯಗಳಿಗೆ ಉಪ್ಪು ಕಾರ ಹಾಕಿ, ಓದುತ್ತಿರುವ ಹೆಣ್ಣುಮಗಳು ಸೆರಗಿನ ಕೊನೆಯಿಂದ ಕಣ್ಣೊರಸಿಕೊಳ್ಳುವಂತೆ ಮಾಡುವುದರಲ್ಲಿ ನಿಸ್ಸೀಮರಾದ ಲೇಖಕರದೇ ಒಂದು ಗುಂಪು; ಮುನ್ನುಡಿಗಳಲ್ಲಿ ಬಗೆಬಗೆಯ ವಿಶೇಷಣಗಳ ಮಾತುಗಳನ್ನಾಡಿ ಕಾದಂಬರಿಯಲ್ಲಿ ಬತ್ತಲೆಯನ್ನು ಚಿತ್ರಿಸುವ ಖದೀಮರದು ಇನ್ನೊಂದು ಗುಂಪು; ಕಥೆ, ರಚನೆ ಸಂಭಾಷಣೆಗಳಲ್ಲಿ ಪೂರ್ವ ನಿಯೋಜಿತವಾದ ಸೂತ್ರವನ್ನು ಲಕ್ಷ್ಮಣ ಗೆರೆಯಂತೆ ಪರಿಪಾಲಿಸುವ ಪಳಗಿದ ಕೈಗಳದು ಮತ್ತೊಂದು ಗುಂಪು. ಇವುಗಳ ನಡುವೆ ಹೊಸ ಪ್ರವೃತ್ತಿಗಳು ತಲೆಯೆತ್ತಿ ಅವುಗಳದೇ ಇನ್ನೊಂದು ವರ್ಗ ನಿರ್ಮಾಣಗೊಳ್ಳುತ್ತಿದೆ.

ವಿಚಾರ ಸಾಹಿತ್ಯ, ಮಕ್ಕಳ ಸಾಹಿತ್ಯ, ವಯಸ್ಕರಿಗಾಗಿ ನಿರ್ಮಾಣವಾಗುವ ಸಾಹಿತ್ಯ, ಪ್ರಬಂಧ, ಪ್ರವಾಸ ಸಾಹಿತ್ಯ, ಜೀವನಚರಿತ್ರೆ ಮುಂತಾದ ನಾನಾ ಭಾಗಗಳಲ್ಲಿ ಪ್ರಗತಿ ಒಂದೇ ಬಗೆಯಾಗಿ ಕುಂಟಿಕೊಂಡು ಸಾಗಿದೆ. ಹತ್ತು ವರ್ಷಗಳ ಹಿಂದಿಗಿಂತ ಈ ಪ್ರಗತಿ ಖಂಡಿತವಾಗಿಯೂ ಉತ್ತಮವಾಗಿದೆ. ಆದರೆ ಈ ಸಾಹಿತ್ಯದ ಶೀಘ್ರ ಬೆಳವಣಿಗೆಯಲ್ಲಿ ಕಾತರರಾದವರಿಗೆ ಮಾತ್ರ ನಿಧಾನವೆಂದು ತೋರುತ್ತದೆ.

ಸಾಹಿತ್ಯ ಪ್ರವೃತ್ತಿಗಳಿಗೆ ವೃತ್ತ ಪತ್ರಿಕೆಗಳೂ, ಪ್ರಕಟನ ಪ್ರಪಂಚದ ಸ್ಥಿತಿ ಗತಿಗಳೂ ಪ್ರಭಾವ ಬೀರದೆ ಇಲ್ಲ. ಒಂದು ಕಾಲದಲ್ಲಿ ನಮ್ಮ ಪತ್ರಿಕೆಗಳ ತುಂಬ ಕಥೆಗಳು ತುಂಬಿರುತ್ತಿದ್ದುವು. ಈಗ ಅವುಗಳ ಜೊತೆಗೆ ಕಾದಂಬರಿಗಳೂ ಕೂಡಿಕೊಂಡು ಧಾರಾವಾಹಿಯಾಗಿ ಪ್ರಕಟವಾಗುತ್ತಿವೆ. ಪತ್ರಿಕೆಗಳ ಅನಿವಾರ್ಯ, ಆಗತ್ಯ, ಲೇಖಕನ ಪ್ರತಿಫಲದ ಆಸೆ–ಇವುಗಳಿಂದ ಕಾದಂಬರಿಯ ಹೆಸರಿನಲ್ಲಿ ಏನೇನೋ ಬರುತ್ತಿದೆ. ಕೃತಿ ಚೌರ್ಯ ಏಕ ಪ್ರಕಾರವಾಗಿ ನಡೆಯುತ್ತಿದೆ.ಅನಾಮಧೇಯ ಕೃತಿಗಳನ್ನು ಮಾತ್ರವಲ್ಲ, ಪ್ರಸಿದ್ಧವಾದ ಕಥೆಕಾದಂಬರಿಗಳನ್ನೇ ತಮ್ಮವೆಂದು ಪ್ರಕಟಿಸಿಕೊಳ್ಳಲಾಗುತ್ತಿದೆ. ಒಂದು ಕನ್ನಡ ಪತ್ರಿಕೆಯಲ್ಲಿ ಬಂದ ಕಥೆಯೇ ಒಂದೆರಡು ತಿಂಗಳುಗಳಲ್ಲಿ ಇನ್ನೊಂದು ಕನ್ನಡ ಪತ್ರಿಕೆಯಲ್ಲಿ ಪ್ರಕಟವಾಗುವುದೂ ಈಗ ಸಾಮಾನ್ಯವಾದ ವಿಚಾರವಾಗಿದೆ. ಪತ್ರಿಕಾ ಸಂಪಾದಕರು ಎಷ್ಟರಮಟ್ಟಿಗೆ ಅಸಹಾಯಕರಾಗಿದ್ದಾರೆಂದರೆ ಚೌರ್ಯ ಅವರ ಗಮನಕ್ಕೆ ಬಂದಾಗಲೂ ಅದನ್ನು ಒಪ್ಪಿಕೊಳ್ಳಲು ಅವರು ಸಿದ್ಧವಾಗಿಲ್ಲ. ಫಲವಾಗಿ ಕೃತಿಚೋರನಿಗೆ ಒಂದು ಬಗೆಯ ಪ್ರೋತ್ಸಾಹವೇ ದೊರೆತಂತಾಗುತ್ತದೆ. ಜೀವನದ ಮೌಲ್ಯಗಳ ನಿರ್ಮಾಣದಲ್ಲಿ ಮಹತ್ತರವಾದ ಪಾತ್ರ ವಹಿಸುವ ಲೇಖಕನೇ ಕೀರ್ತಿ ಲಾಭಗಳಿಗಾಗಿ ಅಧಮಮಾರ್ಗ ಹಿಡಿದಿರುವುದು ಶೋಚನೀಯವಾದ ಸಂಗತಿ.

ಪ್ರಕಟಣ ಪ್ರಪಂಚದಲ್ಲಿಯೂ ಹಲವಾರು ಬದಲಾವಣೆಗಳಾಗಿವೆ. ಪ್ರಕಾಶನಗಳಲ್ಲಿ ಮೂರು ಬಗೆಯಾಗಿದೆ. ಮೊದಲನೆಯದು – ಸಾಹಿತ್ಯ ಅಕಡೆಮಿ, ವಿಶ್ವವಿದ್ಯಾನಿಲಯ ಮೊದಲಾದ ಸರ್ಕಾರದ ಹಣದಿಂದ ನಡೆಯುವ ಸಂಸ್ಥೆಗಳ ಗುಂಪು. ಸಹಕಾರೀ ಪ್ರಕಾಶನ ಸಂಸ್ಥೆಗಳು, ದಕ್ಷಿಣಭಾರತ ಪುಸ್ತಕ ಸಂಸ್ಥೆ, ಸಾಹಿತ್ಯ ಪರಿಷತ್ತು ಮುಂತಾದವೂ ಇದೇ ಗುಂಪಿಗೆ ಸೇರುತ್ತವೆ.

ಎರಡನೆಯದು--ವೃತ್ತಿ ಪ್ರಕಾಶಕರ ಗುಂಪು. ಇವರೇ ಬಹಳ ಮುಖ್ಯ. ಪ್ರಕಾಶನವೇ ಅವರ ವೃತ್ತಿ. ಮೂರನೆಯದು–ವಿಲಾಸೀ ಪ್ರಕಾಶಕರ ಗುಂಪು. ತಮ್ಮ ಪುಸ್ತಕವನ್ನೋ ಸ್ನೇಹಿತರ ಪುಸ್ತಕಗಳನ್ನೋ ಪ್ರಕಟಿಸುವ ವ್ಯಕ್ತಿಗಳು, ಕನ್ನಡ ಸಂಘ, ಕನ್ನಡ ಭಾರತಿ ಮುಂತಾದ ಸಂಸ್ಥೆಗಳು ಈ ಗುಂಪಿಗೆ ಸೇರುತ್ತವೆ. ಪ್ರಕಾಶನ ಇವರ ಪಾಲಿಗೆ ಒಂದು ಹವ್ಯಾಸ. ಕಥೆ ಕಾದಂಬರಿಗಳಿಗೆ ಸೀಮಿತರಾಗಿದ್ದ ವೃತ್ತಿಪ್ರಕಾಶಕರು ಈಗ ಬಗೆ ಬಗೆಯ ಸಾಹಿತ್ಯವನ್ನು, ಹೊಸ ಹೊಸ ಲೇಖಕರ ಕೃತಿಗಳನ್ನು, ನವ ಪ್ರಯೋಗಗಳನ್ನು ಪ್ರಕಟಿಸಲು ಹಿಂದೆಗೆಯುವುದಿಲ್ಲ. ಮೈಸೂರಿನ ಕಾವ್ಯಾಲಯ, ಶಾರದಾ ಮಂದಿರ, ಡಿ. ವಿ. ಕೆ. ಮೂರ್ತಿ, ಉಷಾ ಸಾಹಿತ್ಯಮಾಲೆ, ಬೆಂಗಳೂರಿನ ಶಾರದಾ ಪ್ರಕಟಣಾಲಯ, ಧಾರವಾಡದ ಮನೋಹರ ಗ್ರಂಥಮಾಲೆ, ಮಿಂಚಿನ ಬಳ್ಳಿ, ಪ್ರತಿಭಾ ಗ್ರಂಥಮಾಲೆ ಮೊದಲಾದ ಪ್ರಕಾಶಕರು ಈಚಿನ ವರ್ಷಗಳಲ್ಲಿ ಅಮೋಘವಾದ ಕೆಲಸ ಮಾಡಿದ್ದಾರೆ. ಕನ್ನಡಸಾಹಿತ್ಯದ ಬೆಳವಣಿಗೆಗೆ ಅದ್ಭುತವಾದ ಚಾಲನೆಯನ್ನು ಕೊಟ್ಟಿದ್ದಾರೆ. ಶಾರದಾ ಮಂದಿರದವರ ಚಿರ ಕಾವ್ಯಗಳ ಪ್ರಕಟಣೆ, ಮಿಂಚಿನ ಬಳ್ಳಿಯವರ ವಿಚಾರ ಸಾಹಿತ್ಯ ಪ್ರಕಟಣೆ, ಮನೋಹರ ಗ್ರಂಥಮಾಲೆಯವರ ನವ ಪ್ರತಿಭೆಯ ಶೋಧನೆ— ಹೆಮ್ಮೆಯನ್ನುಂಟುಮಾಡುವ ಸಾಧನಗಳಾಗಿವೆ. ಹಳೆಯದರ ಜೋಪಾನ, ಹೊಸತಕ್ಕೆ ಪ್ರೋತ್ಸಾಹ ಈ ಸಾಧನೆಗಳಿಂದ ಸಾಧ್ಯವಾಗಿವೆ.

ಈಗ ಸಾಹಿತ್ಯದ ಸರ್ವಮುಖಗಳ ಸಮತೋಲನವನ್ನೂ ಕಾಪಾಡಿಕೊಳ್ಳಬೇಕಾದ ವಿಮರ್ಶೆಯ ಪ್ರವೃತ್ತಿಗಳನ್ನು ಕುರಿತು ಎರಡು ಮಾತು ಹೇಳಬೇಕು. ನಮ್ಮಲ್ಲಿ ಏನೂ ಬೆಳೆಯದ ಸಾಹಿತ್ಯ ಭಾಗವೆಂದರೆ ವಿಮರ್ಶೆಯೆ. ಹೊಗಳಿಕೆ ಇಲ್ಲ ತೆಗಳಿಕೆಗಳೇ ನಮ್ಮ ವಿಮರ್ಶೆಯ ಮೂಲ ಲಕ್ಷಣಗಳು. ಎರಡಕ್ಕೂ ಬಹು ಸಂದರ್ಭಗಳಲ್ಲಿ ಕಾರಣವಿರುವುದಿಲ್ಲ. ಸಮಕಾಲೀನ ವಿಮರ್ಶೆ ಅತ್ಯಂತ ಕಷ್ಟದ ಕೆಲಸ. ಅದರಲ್ಲಿಯೂ ಕನ್ನಡನಾಡಿನಂಥ ಚಿಕ್ಕ ಪ್ರದೇಶದಲ್ಲಿ ದಿನ ಬೆಳಗಾದರೆ ಲೇಖಕ ವಿಮರ್ಶಕ ಒಬ್ಬರ ಮುಖವನ್ನು ಇನ್ನೊಬ್ಬ ನೋಡಬೇಕಾಗಿರುವುದರಿಂದ ಎಷ್ಟೋ ಸಂದರ್ಭಗಳಲ್ಲಿ ನಿಷ್ಪಕ್ಷಪಾತ ವಿಮರ್ಶೆ ಸಾಧ್ಯವಾಗುವುದಿಲ್ಲ. ತೀರ ದೊಡ್ಡವರಾದ ಲೇಖಕರೂ ವಿಮರ್ಶೆಯೆಂದರೆ ಪ್ರಶಂಸೆಯೆಂದೇ ಭಾವಿಸುತ್ತಾರೆ. ವಿಮರ್ಶಕನೂ ರಾಗ

ದ್ವೇಷಗಳಿಂದ ಮುಕ್ತನಾಗಿರುವುದಿಲ್ಲ. ಲೇಖಕ ಕೃತಿಯನ್ನು ಪ್ರಕಟಿಸಿದ ಮೇಲೆ ಅದನ್ನು ನಿರ್ವಿಕಾರ ದೃಷ್ಟಿಯಿಂದ ಲೋಕಕ್ಕೆ ಬಿಟ್ಟುಕೊಡಲು ಸಿದ್ಧನಿಲ್ಲ. ಇಂದಿನ ಪ್ರಸಿದ್ಧ ಲೇಖಕರೊಬ್ಬರಿಗೆ ಸಮಕಾಲೀನ ವಿಮರ್ಶೆಯಿಂದ ಸಾಮಾಜಿಕ ವಿರಸಗಳು ಉದ್ಭವಿಸುವುದರಿಂದ ಅದು ಬೇಕಾಗಿಲ್ಲ; ಪ್ರಖ್ಯಾತ ವಿಮರ್ಶಕರೊಬ್ಬರಿಗೆ ಬರವಣಿಗೆಯಲ್ಲಿನ ವಿಮರ್ಶೆ ಬೇರೆ, ಅವರ ನಿಜವಾದ ಅಭಿಪ್ರಾಯ ಬೇರೆ! ಇಂಥ ಪರಿಸರದಲ್ಲಿ ವಿಮರ್ಶೆ ಬೆಳೆಯದೆ ಹೋದದ್ದು ಆಶ್ಚರ್ಯವಿಲ್ಲ.

ಆದರೆ ಸಾಹಿತ್ಯದ ಸತ್ವವೃದ್ಧಿಗೆ, ಸಾಮಾಜಿಕ ಆರೋಗ್ಯಕ್ಕೆ ವಿಮರ್ಶೆ ಅತ್ಯಗತ್ಯ ಎಂಬುದನ್ನು ನಾವು ಮರೆಯಬಾರದು. ನಿಜವಾದ ವಿಮರ್ಶೆ ಸಾಹಿತ್ಯ ಸಿದ್ಧಾಂತವನ್ನು ತನ್ನ ಗುರಿಯನ್ನಾಗಿರಿಸಿಕೊಳ್ಳುತ್ತದೆ. ವಿವರಣೆ, ವ್ಯಾಖ್ಯಾನ, ವರ್ಣನೆ, ವರ್ಗೀಕರಣ ಹಾಗೂ ತೀರ್ಪುಗಳ ವಿಷಯದಲ್ಲಿ ಅದು ಒಂದು ಮಟ್ಟವನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸುತ್ತದೆ. ಸಾಹಿತ್ಯದ ವಿವಿಧ ವಿಷಯಗಳ ಕ್ರೋಢೀಕರಣ ಅದರ ಉದ್ದೇಶ. ಸುಸಂಬದ್ಧವಾದ ಸಾಹಿತ್ಯ ಸಿದ್ಧಾಂತಕ್ಕೆ ಇದು ನಿಜವಾದ ಅಡಿಗಲ್ಲು.

ದುರ್ದೈವದ ಮಾತೆಂದರೆ ಸಮಕಾಲೀನ ರಾಜಕೀಯ ಜೀವನದಲ್ಲಿ ಕಂಡು ಬರುವ ದುಷ್ಟ ಪ್ರವೃತ್ತಿಗಳು ನಮ್ಮ ಸಾಹಿತ್ಯ ವಿಮರ್ಶೆಯಲ್ಲೂ ತಲೆದೋರಿವೆ. ಲೇಖಕನ ಮಹತ್ವ ಅವನ ಕೃತಿಗಳಿಂದಲ್ಲದೆ ವಿಮರ್ಶಕರ ವೈಯಕ್ತಿಕ ಅಭಿರುಚಿಗಳಿಂದ ನಿರ್ಣಯವಾಗುತ್ತದೆ. ವ್ಯಕ್ತಿಪೂಜೆ ಜೊತೆಗೆ ಜಾತೀಯತೆ, ಪ್ರಾದೇಶಿಕ ಭಾವನೆಗಳು ಅತ್ಯಂತ ನವುರಾದ ರೀತಿಯಲ್ಲಿ ಕಾರ್ಯೋನ್ಮುಖವಾಗಿವೆ. ಈ ಅನಿಷ್ಟಗಳ ನಡುವಿನಲ್ಲಿಯೂ ಈಚಿನ ಪ್ರವೃತ್ತಿಗಳಲ್ಲಿ, ವಿಮರ್ಶಕ ಸಮಕಾಲೀನ ಪ್ರಜ್ಞೆಯನ್ನು ಹೆಚ್ಚಿಸಿಕೊಂಡಿರುವುದು, ತನಗೆ ತೋರಿದ್ದನ್ನು ಧೈರ್ಯವಾಗಿ ಹೇಳುವ ಮನೋಭಾವವನ್ನು ಬೆಳೆಸಿಕೊಂಡಿರುವುದು, ವಿಮರ್ಶೆಗಾಗಿಯೇ ನಿಯತಕಾಲಿಕಗಳು ಹುಟ್ಟಿಕೊಂಡಿರುವುದು, ಹೆಚ್ಚು ಸಂಖ್ಯೆಯಲ್ಲಿ ಗ್ರಂಥಗಳು ಪ್ರಕಟವಾಗುತ್ತಿರುವುದು–ಉಲ್ಲೇಖನೀಯ ವಿಚಾರಗಳಾಗಿವೆ.

ಬೇಕಾಗಿಯೋ, ಬೇಡಾಗಿಯೋ, ಸಹಜವಾಗಿಯೋ,ಅಸಹಜವಾಗಿಯೋ ಹೊಸತು ಕಾಲಿಟ್ಟಿದೆ. ಈಗ ಅದನ್ನು ಕುರಿತ ಚರ್ಚೆ ಅಪ್ರಸ್ತುತ. ಮುಖ್ಯ

ವಾಗಿ ನಾವು ಗಮನಿಸಬೇಕಾಗಿರುವುದು ನಮ್ಮೆದುರಿಗಿನ ಸಾಹಿತ್ಯ ಸೃಷ್ಟಿ; ಅದರ ಸಿದ್ಧಿ, ಅದರ ಬೆಲೆ, ಅದರ ಮೌಲ್ಯ ; ಹಳೆಯದನ್ನು ಕುರಿತೂ ಇದೇ ಮಾತನ್ನು ಹೇಳಬೇಕು. ಸಾಹಿತ್ಯ ಎಂದೂ ನವ್ಯ; ಹೊಸತನವನ್ನು ಕಳೆದು ಕೊಂಡಾಗ ಅದು ನಿಂತ ನೀರಾಗುತ್ತದೆ, ಮೃತವಾಗುತ್ತದೆ. ಎಲ್ಲದರ ವಿಷಯ ದಲ್ಲಿಯೂ ಪ್ರೀತಿ ಗೌರವಗಳು ಅಗತ್ಯ. ಸಂಪ್ರದಾಯದ ಬಗ್ಗೆ ತರುಣ ಲೇಖಕರಲ್ಲಿ ಇಂದು ಕಾಣುತ್ತಿರುವ ತಿರಸ್ಕಾರ ಮನೋಭಾವ ಯೋಗ್ಯವಲ್ಲ. ಮೌಲ್ಯ ಶೋಧನೆಯಲ್ಲಿ ತೊಡಗಿರುವ ಲೇಖಕ ನೋಡಬೇಕಾಗಿರುವುದು ನಿಜಮೌಲ್ಯವನ್ನನ್ನೇ. ಕೊಂಬು ಕಹಳೆಗಳನ್ನು ಊದುತ್ತ ತನ್ನತನವನ್ನು ಮೆರೆಯಲು ಸಾಹಿತ್ಯದಲ್ಲಿ ಹೊಸ ಗುಂಪನ್ನು ಕಟ್ಟಲು ಅವನು ಪ್ರಯತ್ನಿಸ ಬಾರದು. ಹಳೆಯ ತಲೆಮಾರಿನ ಲೇಖಕರಾದರೂ ಹೊಸಬರ ಬಗೆಗೆ ಅಸಹನೆ ತೋರಬಾರದು. ಪ್ರಸಿದ್ಧರಾದ ಕೆಲವು ಲೇಖಕರಿಗೆ ಕನ್ನಡ ಸಾಹಿತ್ಯದಲ್ಲಿ ಇಂದು ಏನಿದೆ ಎಂಬುದರ ಬಗೆಗೇ ತೀವ್ರ ಅಜ್ಞಾನವಿದೆ. ಈ ಪರಿಸ್ಥಿತಿ ತೊಲಗ ಬೇಕು. ಹಳೆಯದು ಹೊಸದು ಎಂಬ ತಲೆ ಪಟ್ಟೆ ಮಾಯವಾಗಿ ಸಾಹಿತ್ಯ ಸಮನ್ವಯ ಸಿದ್ಧಗೊಳ್ಳಬೇಕು. ಆಗ ಎದುರಿಗಿರುವ ಪ್ರಶ್ನೆ—ಈ ಕೃತಿ ಸಾಹಿತ್ಯವೆ ? ಒಳ್ಳೆಯದೆ ? ಯಾಕೆ ? ಹೇಗೆ ? ಈ ಪ್ರಶ್ನೆಗಳಿಗೆ ಉತ್ತರ ಹುಡುಕುವುದೇ ಎಲ್ಲ ಅಭ್ಯಾಸಿಗಳ, ವಿಮರ್ಶಕರ ಕೆಲಸವಾಗಬೇಕು. ಈ ಕೆಲಸ ಎಷ್ಟು ಹೆಚ್ಚಾದರೆ ಅಷ್ಟು ಒಳ್ಳೆಯದು.

ಇತ್ತೀಚಿನ ಪ್ರವೃತ್ತಿಗಳ ಫಲವಾಗಿ ನಮ್ಮಲ್ಲಿ ಸೃಷ್ಟಿಯಾಗಿರುವ ಸಾಹಿತ್ಯ ವನ್ನು ನೋಡಿದಾಗ ನನಗೆ ಡಬ್ಲ್ಯು. ಎಚ್. ಆಡೆನ್ ಎಂಬ ಪ್ರಸಿದ್ಧ ಕವಿ ಹೇಳಿರುವ ಮಾತುಗಳು ನೆನಪಿಗೆ ಬರುತ್ತವೆ. ಪ್ರತಿಯೊಬ್ಬ ಲೇಖಕನ ಕಣ್ಣಿಗೂ ಅವನ ಗತಸಾಹಿತ್ಯ ನಾಲ್ಕು ಬಗೆಯಾಗಿ ಕಾಣುತ್ತದಂತೆ. ಮೊದಲನೆಯದು—ಶುದ್ಧ ಹೊಲಸು; ಎರಡನೆಯದು—ಸಂಕಟಕಾರಿ; ಮೂರನೆಯದು—ಅಮುಖ್ಯ; ನಾಲ್ಕನೆಯದು—ಹೆಮ್ಮೆ ಪಡುವಂಥದು. ಮೊದಲ ವರ್ಗದ ಸೃಷ್ಟಿಗೆ ಲೇಖಕ ವ್ಯಥೆಪಡುತ್ತಾನೆ. ಎರಡನೆಯದು ಒಳ್ಳೆಯದಾಗಬಹುದಾಗಿತ್ತು. ಆದರೆ ಲೇಖಕನ ಅವಸರ ಅಸಾಮರ್ಥ್ಯಗಳ ಫಲವಾಗಿ ಯಶಸ್ಸು ಗಳಿಸಲಿಲ್ಲ. ಮೂರನೆಯದರಲ್ಲಿ ಕೊರತೆಯಿಲ್ಲ, ಆದರೆ ಅದು ಮುಖ್ಯವಲ್ಲ. ನಾಲ್ಕನೆಯದು ಮಹತ್ವದ್ದು ; ಇರುವುದೇ ತೀರ ಸ್ವಲ್ಪ.

ನಮ್ಮ ಲೇಖಕರು ತಮ್ಮ ಸಾಹಿತ್ಯದ ಬಗೆಗೆ ಯಾವ ಅಭಿಪ್ರಾಯ ಇಟ್ಟು ಕೊಂಡಿದ್ದಾರೆಯೋ ತಿಳಿಯದು. ಸಂವೇದನಾಶೀಲನಾದ, ಚಿಕಿತ್ಸಕ ಬುದ್ಧಿಯ ಓದುಗನಿಗೆ ಮಾತ್ರ ಈಚಿನ ಸಾಹಿತ್ಯ—ಕೆಲವನ್ನು ಉಳಿದು, ಅದಕ್ಕೆ ನಮ್ಮ ನಮಸ್ಕಾರ!—ಆಡೆನ್ನನ ವರ್ಗೀಕರಣದಲ್ಲಿ ಬಹು ಪಾಲು ಮೊದಲಿನ ವರ್ಗದ ಸೃಷ್ಟಿ. ನಾಲ್ಕನೆಯ ವರ್ಗದ್ದಕ್ಕಾಗಿ ನಾವು ಇನ್ನೆಷ್ಟು ಕಾಲ ಕಾಯ ಬೇಕೊ!

# ಗೋವಿಂದ ಪೈ ಅವರ 'ದೀವಿಗೆ'

ಭಾರತದ ಸ್ವಾತಂತ್ರ್ಯ ಸಂಗ್ರಾಮ ಇತಿಹಾಸದಲ್ಲಿ ೧೯೩೦ರ ದಂಡಿ ಯಾತ್ರೆ ಚಿರಸ್ಮರಣೀಯವಾದುದು. ದೇಶದ ಜನ ಒಂದಾಗಿ ನಡೆಸಿದ ಹೋರಾಟದಲ್ಲಿ ಅದು ಅತ್ಯಂತ ಪರಿಣಾಮಕಾರಿಯಾದ ಹೆಜ್ಜೆ. ರಾಷ್ಟ್ರಪಿತ ಗಾಂಧೀಜಿ ಆ ಯಾತ್ರೆಯ ನಾಯಕತ್ವ ವಹಿಸಿದ್ದರು. ಸುಮಾರು ಇನ್ನೂರ ವರ್ಷಗಳ ದಾಸ್ಯದ ನೊಗವನ್ನು ಕಿತ್ತೊಗೆಯಲು ಸಮಗ್ರ ಜನಾಂಗ ಸಿದ್ಧವಾದುದನ್ನು ಆ ಘಟನೆ ಎತ್ತಿ ತೋರಿಸಿತು. ಬಲವಾದ ಒಂದು ದೊಣ್ಣೆಯನ್ನೂರಿ ಸ್ವಾತಂತ್ರ್ಯ ಯಾತ್ರಾರ್ಥಿಗಳ ತಂಡದ ಮುಂದಾಳಾಗಿ ಗಾಂಧೀಜಿ ನಿಂತಿರುವ ಒಂದು ಚಿತ್ರ ಆ ತಲೆಮಾರಿನ ಜನರೆಲ್ಲರ ಮನಸ್ಸಿನಲ್ಲಿ ಅಚ್ಚಳಿಯದ ಮೂಡಿದೆ. ಆ ದೊಣ್ಣೆಯನ್ನೂರಿದ ಧೈರ್ಯ ದೃಢತೆಗಳು ಆಳರಸರ ಎದೆಯನ್ನು ನಡುಗಿಸಿದವು. ಭಾರತೀಯರಿಗೆ ಭರವಸೆ ನೀಡಿದವು.

ಕೋಟ್ಯನುಕೋಟಿ ಭಾರತೀಯರ ದೃಢನಿರ್ಧಾರವನ್ನು ಕುಟ್ಟಿ ತೋರಿಸಲು ಗಾಂಧೀಜಿ ಹಿಡಿದ ಆ ದೊಣ್ಣೆ ಇಂದೂ ಗಾಂಧೀಜಿ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶಿತವಾಗಿದೆ. ದಂಡೀಯಾತ್ರೆಯ ನಕ್ಷೆಯ ಎದುರಿಗೆ ಒರಗಿ ನಿಂತಿರುವ ಆ ಬೆತ್ತ ಒಂದು ಜನಾಂಗದ ಹೋರಾಟದ ಸಂಕೇತವಾಗಿದೆ. ಅಂದು ಅದು ಸ್ವಾತಂತ್ರ್ಯಗಳಿಕೆಯ ಶಕ್ತಿಯಾಗಿತ್ತು ; ಇಂದು ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಅದು ಸ್ಫೂರ್ತಿಯಾಗಿದೆ.

ದಂಡೀಯಾತ್ರೆ ಲೋಕಪ್ರಸಿದ್ಧವಾಗಿದೆ. ಗಾಂಧೀಜಿ ಹಿಡಿದಿದ್ದ ಆ ದೊಣ್ಣೆಯನ್ನು ಅನೇಕರು ಬಲ್ಲರು. ಆದರೆ ಅದು ಕರ್ನಾಟಕದ ದೊಣ್ಣೆಯೆಂಬುದನ್ನೂ ಅದು ಕರ್ನಾಟಕದ ರಾಷ್ಟ್ರಕವಿಗಳಾಗಿದ್ದ ಗೋವಿಂದ ಪೈಗಳಿಗೆ ಸೇರಿದ್ದೆಂಬುದನ್ನೂ ಬಲ್ಲವರು ತೀರ ವಿರಳ. ಈ ಸಂಗತಿ ಹೀಗೆ:

ಗೋವಿಂದ ಪೈಗಳ ಗೆಳೆಯರಾಗಿದ್ದ ಕಾಕಾ ಕಾಲೇಲ್ಕರ್ ಒಮ್ಮೆ ಪೈಗಳನ್ನು ನೋಡಲು ಮಂಜೇಶ್ವರಕ್ಕೆ ಬಂದರು. ಭೇಟಿಯನ್ನು ಮುಗಿಸಿಕೊಂಡು ಕಾಲೇಲ್ಕರ್ ಹೊರಟು ನಿಂತಾಗ ಪೈಗಳು ಅವರಿಗೆ ಹಗುರವಾದ ಆದರೆ ಬಲ

ವಾಗಿದ್ದ “ ನಡೆದೊಣ್ಣೆ ”(walking stick) ಯೊಂದನ್ನು ಉಡುಗೊರೆಯಾಗಿ ನೀಡಿದರು. ಪೈಗಳ ಅಜ್ಜ ಉಪಯೋಗಿಸುತ್ತಿದ್ದ ಆ ಆಕರ್ಷಕ ಬೆತ್ತ ಗಂಟು ಗಂಟುಗಳಲ್ಲಿಯೂ ಕಪ್ಪು ಉಂಗುರಗಳನ್ನು ಹೊಂದಿತ್ತು. ದಂಡೀಯಾತ್ರೆ ಹೊರಡುವ ಮುನ್ನ ಕಾಲೇಲ್ಕರ್ ಈ ಬೆತ್ತವನ್ನೇ ಗಾಂಧೀಜಿಯವರ ಕೈಗೆ ಕೊಟ್ಟರು. ಸ್ವಾತಂತ್ರ್ಯಗಳಿಕೆಯ ಪ್ರತಿಜ್ಞೆ ಮಾಡಿ ಬಾಪೂ ಬೆತ್ತ ಊರಿದರು; ಇತಿಹಾಸ ಸೃಷ್ಟಿಸಿದರು.

ಈ ಪ್ರಸಂಗವನ್ನು ದಾಖಲಿಸುವುದು ತಮಗೆ ಅತ್ಯಂತ ಸಂತೋಷದ ಸಂಗತಿಯೆಂದು ಕಾಕಾ ಸಾಹೇಬರೇ ಹೇಳಿಕೊಂಡಿದ್ದಾರೆ. ಇದು ಕನ್ನಡಿಗರೆಲ್ಲ ರಿಗೂ ಸಂತೋಷದ ಸಂಗತಿ; ಅಭಿಮಾನದ ಪ್ರಸಂಗ.

ಮೊರೆಯುವ ಕಡಲು ಕಾರ್ಕಳದ ಗೊಮ್ಮಟ ಮತ್ತು ಪಂಡಿತವಕ್ಕಿ ಗೋವಿಂದ ಪೈ ದಕ್ಷಿಣ ಕನ್ನಡದ ಮೂರು ಮಹಾ ಆಕರ್ಷಣೆಗಳೆಂದು ಗೋವಿಂದ ಪೈಗಳು ಜೀವಂತರಾಗಿದ್ದಾಗ ಲೇಖಕರೊಬ್ಬರು ವರ್ಣಿಸಿದ್ದ ನೆನಪು. ಕಡಲು, ಕಡಲೆ; ಗೊಮ್ಮಟ, ಗೊಮ್ಮಟನೆ. ಒಂದರ ಸೊಗಸು ಇನ್ನೊಂದಕ್ಕಿಲ್ಲ. ಒಂದರ ಗಾಂಭೀರ್ಯ ಒಂದು ತರದ್ದು; ಇನ್ನೊಂದರ ಸೌಂದರ್ಯ ಬೇರೆ ರೀತಿಯದು. ಆದರೆ ಗೋವಿಂದ ಪೈ ಅವರ ವ್ಯಕ್ತಿತ್ವದಲ್ಲಿ ಪಾಂಡಿತ್ಯದಲ್ಲಿ ಕಡಲು ಗೊಮ್ಮಟ ಎರಡೂ ಬೆರೆತಿವೆ. ಕಡಲಿನ ವಿಸ್ತಾರ ಗೊಮ್ಮಟನ ಗಾಂಭೀರ್ಯ ಪೈಗಳ ಹಿರಿಮೆ; ಅವರ ಪಾಂಡಿತ್ಯದ ಪತಾಕೆ. ಆದ್ದರಿಂದಲೇ ಅವರನ್ನು ಕುರಿತು ಕವಿ ಕುವೆಂಪು ಹಾಡಿದ್ದು: “ಅವರೆ ತಾವೊಂದು ಗೊಮ್ಮಟ ಸಮ ಮಹಾಕಾವ್ಯ!”

ಎಂ. ಗೋವಿಂದ ಪೈಗಳು ಪ್ರಸಿದ್ಧರಾದದ್ದು ಮಂಜೇಶ್ವರ ಗೋವಿಂದ ಪೈ ಗಳೆಂದು. ಅವರ ಹೆಸರಿನ ಮೊದಲ “ಎಂ.” ಮಂಜೇಶ್ವರನನ್ನು ಸೂಚಿಸುತ್ತ ದೆಂದು ಹಲವರ ತಿಳಿವಳಿಕೆ. ಆದರೆ ಅದು ಮಂಗಳೂರಿನ ಮೊದಲ ಅಕ್ಷರ. ಪೈಗಳ ತಂದೆ ಮತ್ತು ಕುಟುಂಬದವರ ಮನೆ ಮಂಗಳೂರು. ೧೮೮೩ರ ಮಾರ್ಚ್ ೨೩ರಂದು ಪೈಗಳು ಜನಿಸಿದ್ದು; ನಿಧನರಾದದ್ದು ೧೯೬೩ರ ಸೆಪ್ಟಂಬರ್ ೬ ರಂದು. ಎಪ್ಪತ್ತು ವರ್ಷಗಳ ತಮ್ಮ ಜೀವಮಾನದಲ್ಲಿ ಸುಮಾರು ೫೦ ವರ್ಷ ಗಳನ್ನು ಅವರು ಮಂಜೇಶ್ವರದಲ್ಲಿಯೇ ಕಳೆದರು. ಅದು ಅವರ ತಾಯಿಯ ತವರು ಮನೆ. ಹೀಗಾಗಿ ಗೋವಿಂದ ಪೈ–ಮಂಜೇಶ್ವರ ಅಭಿನ್ನವಾಗಿದ್ದುವು.

ಮಂಗಳೂರು ಸಾವಕಾರ ತಿಮ್ಮ ಪೈಗಳ ನಾಲ್ವರು ಗಂಡು ಮಕ್ಕಳಲ್ಲಿ ಗೋವಿಂದ ಪೈ ಹಿರಿಯರು. ಪೂರ್ವಿಕರು ಗಳಿಸಿದ ಸಂಪತ್ತು ಸ್ವಲ್ಪ ಮಟ್ಟಿಗಿದ್ದುದರಿಂದ ಪೈಗಳು ಯಾವ ವೃತ್ತಿಯನ್ನೂ ಬೆನ್ನಟ್ಟುವ ಪ್ರಯತ್ನ ಮಾಡಲಿಲ್ಲ. ಸಾಹಿತ್ಯ, ಸಂಶೋಧನೆಗಳು ಅವರ ಪ್ರಥಮ ಪ್ರೇಮ; ಎರಡನೆಯ ಪ್ರೇಮವೂ ಅವೇ. ತೀರಾ ಚಿಕ್ಕವಯಸ್ಸಿನಲ್ಲಿದ್ದಾಗಲೇ ಪೈಗಳು ಸಾಹಿತ್ಯ ಕೃಷಿಗೆ ತೊಡಗಿದರು.

ಆಗ ಅವರು ಹನ್ನೆರಡು ವರ್ಷದ ಎಳೆಯ ಹುಡುಗ. ಮಂಗಳೂರಿನ ಅವರ ಮನೆಯಲ್ಲಿ ಯಾವುದೋ ಶುಭಕಾರ್ಯಕ್ಕಾಗಿ ಬಂಧುಬಳಗದವರೆಲ್ಲಾ ಕೂಡಿ ಸಂಭ್ರಮದಿಂದ ಓಡಾಡುತ್ತಿದ್ದಾರೆ. ಚಪ್ಪರ ಹಾಕಿ, ತೋರಣ ಕಟ್ಟಿ ಸಿಂಗಾರ ಮಾಡುವ ಗಡಿಬಿಡಿಯಲ್ಲಿ ಎಲ್ಲರೂ ಮಗ್ನರಾಗಿದ್ದಾರೆ. ಉತ್ಸಾಹ ಗರಿಗಟ್ಟಿದೆ. "ಜೋಳದ ಗದ್ದೆಯಲ್ಲಿ ಗಿಳಿಗಳ ಕೋಲಾಹಲದಂತೆ ಚಪ್ಪರವೆಲ್ಲಾ ಗದ್ದಲ." ಈ ಗದ್ದಲದ ನಡುವೆ ಕುಗ್ಗಿದ ಕೊರಳ ದನಿಯೊಂದರಿಂದ ಹಾಡೊಂದು ತೇಲಿ ಬಂತು. "ಅಡವಿಗೆ ಪೋಪರೆನೆ ಕಂದಯ್ಯಾ" ಎಂಬುದು ಹಾಡಿನ ಪಲ್ಲವಿ. ಹಾಡು ಬಾಲ ಪೈಗಳ ಕಿವಿ ಸೇರಿತು. ಕನ್ನಡದ ಭಾಗ್ಯದರಮನೆಯ ಒಂದು ಬಾಗಿಲು ತೆರೆಯಿತು. ಸಂದರ್ಭವನ್ನು ಪೈಗಳೇ ಮುಂದೆ ಹೀಗೆ ವರ್ಣಿಸಿದರು:

"ಆಗ್ಗೆ ನನಗೆ ಏನಾಯಿತೋ, ಏನು ತೋಚಿತೋ ದೇವರೇ ಬಲ್ಲ. ಮತ್ತೆ ಚಪ್ಪರದ ಗವುಜು ನನಗೆ ಕೇಳಿಸಲಿಲ್ಲ. ನೆಟ್ಟಗೆ ಹೋದೆ, ಅಭ್ಯಾಸದ ಪುಸ್ತಕವನ್ನು ಹಿಡಿದೆ, ಬರೆಯತೊಡಗಿದೆ. ಇಂದಿನ ಮಾತಿನಲ್ಲಿ ಏಕಾಂಕ ನಾಟಕ ಎನ್ನಬಹುದಾದ ಒಂದು ನಾಟಕವನ್ನು ಇಳಿಹೊತ್ತಿನೊಳಗೆ ಬರೆದು ಮುಗಿಸಿದೆ. ಅದಾದ ೨-೩ ದಿನಗಳಲ್ಲಿ ಅಂತಹದೇ ಮತ್ತೊಂದು ನಾಟಕವನ್ನು ಬರೆಯಹತ್ತಿದೆ. ಆದರೆ ಅದನ್ನು ಕೊನೆಗೂ ಮುಗಿಸಿಲ್ಲ. ಆ ನಾಟಕಗಳಲ್ಲಿ ಬರೇ ಮಾತು ಹಾಡುಗಳಲ್ಲದೆ ವೃತ್ತ-ಕಂದಗಳೂ ಇಲ್ಲ. ಒಂದೋ ಅಥವಾ ಎರಡೋ ನೋಟಗಳಲ್ಲದೆ ಹೆಚ್ಚಿಗೆ ನೋಟಗಳೂ ಇಲ್ಲ. ಅವಕ್ಕೆ ಹೆಸರಿಕ್ಕಲೂ ಇಲ್ಲ. ಮುಗಿಸಿದ ನಾಟಕದಲ್ಲಿ ತಾಯಿ ತಂದೆಯರ ಒಬ್ಬನೇ ಮಗನು ಕಾಡಿಗೆ ಹೋಗುತ್ತಾನೆ, ಹೋಗಬಾರದೆಂದು ಅವರು ಅಂಗಲಾಚಿ ಬೇಡುತ್ತಾರೆ. ಆಮೇಲಣ ಕಥೆ ಮರೆತುಹೋಗಿದೆ. ಕೇಳಿದ ಹಾಡಿಗೂ ಬರೆದ ನಾಟಕಕ್ಕೂ ಭೇದವಿಷ್ಟೇ, ಅದು ತತ್ಸಮ, ಇದು ತದ್ಭವ."

ಗೋವಿಂದ ಪೈಗಳ ಸಾಹಿತ್ಯ ಜೀವನ ಆರಂಭವಾದದ್ದು ಹೀಗೆ. ನನಗೆ ಗೊತ್ತಿರುವ ಅನೇಕ ಜನರ ಬರವಣಿಗೆಯು ಆರಂಭ ಪದ್ಯದಿಂದ. ಪೈಗಳ ಓನಾಮವಾದರೋ ನಾಟಕ. ಯಕ್ಷಗಾನ ಕಲೆ ಎಳೆಯ ಮನಸ್ಸಿನ ಮೇಲೆ ಬೀರಿದ ಗಾಢ ಪ್ರಭಾವದ ಫಲ ಇದು. ಯಕ್ಷಗಾನ ಅವರಲ್ಲಿ ವಿಸ್ಮಯವನ್ನೂ, ಕುತೂಹಲವನ್ನೂ ಮೂಡಿಸಿತು. ಯಕ್ಷಗಾನವನ್ನು ಬರೆಯಲೂ ಅವರಿಗೆ ಸ್ಫೂರ್ತಿಯೊದಗಿಸಿತು. ಹನ್ನೆರಡು ವರ್ಷದ ಬಾಲಕರಾಗಿದ್ದಾಗಲೇ 'ಮಕರಾಕ್ಷನ ಕಾಳಗ' ಎಂಬ ಯಕ್ಷಗಾನ ರಚನೆಗೆ ತೊಡಗಿದರು. ಮೂರನೇ ಒಂದು ಪಾಲು ಬರೆಯುವಷ್ಟರಲ್ಲಿಯೇ ಅದು ಅವರಿಗೆ ಇಷ್ಟವಾಗಲಿಲ್ಲ. ಬರವಣಿಗೆ ಅಷ್ಟಕ್ಕೇ ನಿಂತಿತು. ಬರೆದಷ್ಟನ್ನೂ ಹರಿದುಹಾಕಲಾಯಿತು. ಮುಂದೆ ಅವರ ಒಲವು ವ್ಯಾಕರಣ ಛಂದಸ್ಸುಗಳ ಕಡೆ ತಿರುಗಿತು. ಹಳಗನ್ನಡ ಮಹಾಕಾವ್ಯಗಳು ಅವರನ್ನು ಆಕರ್ಷಿಸಿದವು. ಹದಿನೈದು ವರ್ಷಗಳ ಹೊತ್ತಿಗಾಗಲೇ ಅವರು ಭಾಷೆ ಛಂದಸ್ಸುಗಳ ಮೇಲೆ ತಮ್ಮ ಹಿಡಿತವನ್ನು ಸಾಧಿಸಿಕೊಂಡರು. ವೃತ್ತ, ಕಂದ, ಷಟ್ಪದಿಗಳಲ್ಲಿ ನೂರಾರು ಪದ್ಯಗಳನ್ನು ರಚಿಸಿದರು. ಆಗಲೇ ಪೈಗಳಲ್ಲಿ ಕವಿಗಿಂತ ವಿಮರ್ಶಕ ಪ್ರಬಲನಾಗಿದ್ದುದರಿಂದ ಬಾಲಕವಿಯ ಈ ಸೃಷ್ಟಿ ಸಂಪತ್ತು ಈಗ ನಮಗೆ ಉಳಿದಿಲ್ಲ.

ಪೈ ಅವರಿಗೆ ಹದಿಮೂರು ವರ್ಷಗಳಾಗಿದ್ದಾಗ ಒಂದು ಸ್ವಾರಸ್ಯಪೂರ್ಣ ಸಂಗತಿ ನಡೆಯಿತು. ಯಾವುದೋ ಕಾರಣಕ್ಕಾಗಿ ಅಣ್ಣ ತಮ್ಮಂದಿರಲ್ಲಿ ಜಗಳ ಹತ್ತಿಕೊಂಡಿತು. ಚಿಕ್ಕ ತಮ್ಮನಿಗೆ ತಾಯಿಯ ಬಳಿ ಅಣ್ಣನ ಮೇಲೆ ದೂರು ಕೊಡಲು ಯಾವ ವಿಷಯವೂ ಸಿಗಲಿಲ್ಲ. ಅಣ್ಣ ಕವನಗಳನ್ನು ರಚಿಸುತ್ತಿದ್ದುದು ತಮ್ಮನಿಗೆ ಗೊತ್ತಿತ್ತು. ಸರಿ ಅದಕ್ಕಿಂತ ದೊಡ್ಡ ತಪ್ಪು ಯಾವುದು? ತಾಯಿಯ ಬಳಿ ಓಡಿದ. ಅಣ್ಣ ಕವನಿಸುತ್ತಿರುವುದಾಗಿ ದೂರು ಕೊಟ್ಟ. ಇದನ್ನು ಕೇಳಿ ತೀರಾ ಸಂಪ್ರದಾಯವಂತಳಾದ ತಾಯಿ ಭಯಗೊಂಡರು. ಸಿಟ್ಟು ಬಂತು. ಕವನಿಸುವ ಹುಚ್ಚು ಬಿಡಿಸಲು ಅವರು ಮಗನನ್ನು ದಂಡಿಸಿದರು. ತುಳುನಾಡಿನ ಪ್ರಸಿದ್ಧ ಯಕ್ಷಗಾನ ಕವಿಯೊಬ್ಬನಿಗೆ ಕೃತಿಯೊಂದನ್ನು ರಚಿಸಿ ಹುಚ್ಚು ಹಿಡಿದಿತ್ತಂತೆ. ಆಮೇಲೆ ಹುಚ್ಚಿನ ಬಿಡುಗಡೆಗಾಗಿ ಆತ ಇನ್ನೊಂದು ಕೃತಿ ರಚಿಸಬೇಕಾಯಿತಂತೆ. ಯಾವ ತಾಯಿ, ತನ್ನ ಮಗ ಕವನ ರಚಿಸಿ ಹುಚ್ಚು ಹಿಡಿಸಿಕೊಳ್ಳುವುದನ್ನು ಒಪ್ಪುತ್ತಾಳೆ? ಫಲವಾಗಿ ಪೈಗಳು

ಕೆಲಕಾಲ ಮನೆಯೊಳಗೆ ಕವನಿಸುವುದು ಸಾಧ್ಯವಾಗಲಿಲ್ಲ. ಹೊಲಕ್ಕೆ ಹೋದಾಗಲೂ ಹಾದಿಯಲ್ಲಿ ಅಲೆಯುವಾಗಲೂ ಅವರು ಗುನುಗಿಕೊಳ್ಳ ಬೇಕಾಗಿತ್ತು.

ಷೇಕ್ಸ್‌ಪಿಯರನ 'ಟ್ವೆಲ್ಫ್ತ್ ನೈಟ್' ನಾಟಕದ ಮೊದಲನೆಯ ಅಂಕ ವನ್ನು ಅವರು ೧೯೪೯ರಲ್ಲಿ ವೃತ್ತಕಂದಗಳಲ್ಲಿ ಕನ್ನಡಿಸಿದರು. ಇದನ್ನು ಪರಿಶೀಲಿಸಿದ "ಮುದ್ದಣ" ನಾಮಾಂಕಿತ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು ನಾಟಕವನ್ನು ಪೂರ್ತಿಗೊಳಿಸುವಂತೆ ಹೇಳಿದರು. ಆದರೆ ಪೈಗಳು ಅದನ್ನು ಮುಗಿಸಲಿಲ್ಲ. ೧೯೦೦ರಲ್ಲಿ ಮಂಗಳೂರಿನಲ್ಲಿ "ಸುವಾಸಿನಿ" ಎಂಬ ಮಾಸಪತ್ರಿಕೆ ಪ್ರಕಟವಾಯಿತು. ಪತ್ರಿಕೆಯನ್ನು ಕುರಿತು ಯೋಗ್ಯ ಪದ್ಯ ರಚಿಸುವವರಿಗೆ ಐದು ರೂಪಾಯಿ ಬಹುಮಾನ ನೀಡುವುದಾಗಿ ವ್ಯವಸ್ಥಾಪಕರು ಸಾರಿದರು. ಮೂರು ಕಂದ ಪದ್ಯಗಳನ್ನು ರಚಿಸಿ ಪೈಗಳು ಬಹುಮಾನ ಗಿಟ್ಟಿಸಿಕೊಂಡರು. ಇದೇ ಅವರ ಅಚ್ಚಾದ ಮೊದಲ ಬರಹ. ಆಗ ಅವರಿಗೆ ಹದಿನೇಳು ವರ್ಷ.

ಪ್ರಾಸವನ್ನು ತ್ಯಜಿಸಿ ಕವಿತೆಗಳನ್ನು ರಚಿಸಬೇಕೆಂಬುದು ಮೊದಲಿನಿಂದಲೂ ಪೈಗಳ ಇಚ್ಛೆ. ಅದನ್ನು ಅವರು ಸತತವಾಗಿ ಪ್ರಯತ್ನಿಸುತ್ತಲೇ ಬಂದಿದ್ದರು. ಅದು ಕಾರ್ಯರೂಪಕ್ಕೆ ಬಂದ ಸಂದರ್ಭವನ್ನು ಅವರೇ ಹೀಗೆ ವರ್ಣಿಸಿದ್ದಾರೆ:

"೧೯೧೧ನೆಯ ಏಪ್ರಿಲ್ ತಿಂಗಳಲ್ಲಿ ನಾನು ಸುಮಾರು ಒಂದು ತಿಂಗಳು ಬಡೋದಾ ರಾಜ್ಯದ ನವಸಾರಿ ಎಂಬಲ್ಲಿದ್ದೆ. ಆಗ್ಗೆ ಒಂದು ಮುಂಜಾನೆ ಮಾಳಿಗೆಯಲ್ಲಿ ಶತಪದಗೆಯ್ಯುತ್ತಿದ್ದಾಗ ಹಠಾತ್ತಾಗಿ, ಆಗೋದು ಹೋಗೋದು ದೇವರ ಇಚ್ಛೆ, ಹೂಡೋದು ಬಿತ್ತೋದು ನನ್ನ ಇಚ್ಛೆ, ಇನ್ನು ಮಿನ ಮೇಷ ನೋಡದೆ 'ಪ್ರಾಸವನೀಗಲೇ ತೊರೆದುಬಿಡುವುದೇ ನಿಶ್ಚಯಂ' ಎಂದಾಯಿತು. ಮರದ ಹಣ್ಣು ಮರದ ಬುಡದಾಗೆ ಬಂತು....ಅಲ್ಲಿಂದ ಮಾರನೆಯ ತಿಂಗಳಲ್ಲಿ ಊರಿಗೆ ಮರಳಿದವನೇ ಅದನ್ನು 'ಸ್ವದೇಶಾಭಿಮಾನಿ'ಯಲ್ಲಿ ಪ್ರಕಟಿಸಿದೆ. ಪ್ರಾಸರಹಿತವಾದ ನನ್ನ ಕವಿತೆಗಳು ಅಚ್ಚಾದುದು, ಅದೇ ಮೊದಲ ಬಾರಿ."

ಪೈಗಳು ಮೂಲತಃ ಸಂಶೋಧಕ ಪ್ರವೃತ್ತಿಯವರು, ಅವರ ಕವಿತೆಗಳಿಗೂ ಅಡಿ ಟಿಪ್ಪಣಿಯ ಅಡಿಗುಂಡುಗಳ ಭಾರವಿದೆ. ಕಾವ್ಯ, ಪ್ರಬಂಧ, ನಾಟಕ

ಗಳನ್ನು ರಚಿಸಿರುವ ಅವರು ತನ್ನ ತಲೆಮಾರಿನ ಭಾರತೀಯ ವಿದ್ವಾಂಸರಲ್ಲಿ ಬಹು ದೊಡ್ಡ ಸ್ಥಾನ ಪಡೆದಿದ್ದಾರೆ. ಕನ್ನಡ ವಿದ್ವತ್ತಿನಲ್ಲಂತೂ ಅವರು ಅಗ್ರ ಗಣ್ಯರು. ಅನೇಕ ಭಾಷೆಗಳನ್ನು ಬಲ್ಲವರಾಗಿದ್ದ ಈ ಮಹಾ ಪಂಡಿತರು ಹದಿ ಮೂರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇತಿಹಾಸ, ಧರ್ಮ, ತತ್ತ್ವಜ್ಞಾನ, ಹಳಗನ್ನಡ ಸಾಹಿತ್ಯ, ಹೊಸಗನ್ನಡ ಸಾಹಿತ್ಯ, ನಾಟಕ ಸಾಹಿತ್ಯ—ಹೀಗೆ ನಾನಾ ವಿಷಯಗಳನ್ನು ಕುರಿತು ಇನ್ನೂರಕ್ಕೂ ಹೆಚ್ಚು ಸಂಶೋಧನ ಪ್ರಬಂಧ ಗಳನ್ನು ಪ್ರಕಟಿಸಿದ್ದಾರೆ. ಹಲವು ಗ್ರಂಥಗಳನ್ನು ವಿಮರ್ಶಿಸಿದ್ದಾರೆ. ಅನೇಕ ಗ್ರಂಥಗಳಿಗೆ ಮುನ್ನುಡಿ ಬರೆದಿದ್ದಾರೆ. ಇಂಗ್ಲಿಷಿನಲ್ಲಿಯೂ ಅವರ ಕೆಲವು ಬರವಣಿಗೆಗಳು ಪ್ರಕಟವಾಗಿವೆ. ಅವರ ತಿಳಿವಳಿಕೆಯ ವಿಸ್ತಾರ, ಪಾಂಡಿತ್ಯದ ಆಳ ಅನ್ಯಾದೃಶವಾದುವು. ಅನೇಕರ ಜೀವಮಾನಗಳು ಶ್ರಮಿಸಬೇಕಾದ ಸಾಹಸವನ್ನು ಗೋವಿಂದ ಪೈಗಳು ತಮ್ಮ ಒಂದು ಜೀವಮಾನದಲ್ಲಿ ಮೆರೆದು ಹೋಗಿದ್ದಾರೆ.

ಗೋವಿಂದ ಪೈಗಳ ಮನೆ ಮಾತು ಕೊಂಕಣಿ. ಆದರೆ ಅವರಿಗಿಂತ ದೊಡ್ಡ ಕನ್ನಡಿಗರು ಬೇರೆಯಿಲ್ಲ. ಅವರು ತಮ್ಮನ್ನು ಕನ್ನಡಕ್ಕಾಗಿ ಕನ್ನಡ ಪಾಂಡಿತ್ಯ ಕ್ಕಾಗಿ ಮುಡಿಪು ಕಟ್ಟಿಕೊಂಡರು. ತಮ್ಮ ಕನ್ನಡ ಕೈಂಕರ್ಯವನ್ನು ಕುರಿತು ಅವರು ಹೇಳಿಕೊಂಡಿರುವ ಮಾತುಗಳು ಹೃದಯಸ್ಪರ್ಶಿಯಾಗಿವೆ:

"ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತ ತಾಯಿ. ಕನ್ನಡ ಸಾಕು ತಾಯಿ, ನನ್ನನ್ನು ಸಾಕಿದ ತಾಯಿ. ಕೊಂಕಣಿಯಲ್ಲಿ ಹೆಸರಿಗೆ ತಕ್ಕಷ್ಟರ ಸಾಹಿತ್ಯವಿದ್ದರೆ ಸಾಕಿತ್ತು. ಫ್ರಾನ್ಸ್ ದೇಶದ ಪ್ರೊವಾಂಸ್ ಎಂಬ ತೆಂಕಣಜಿಲ್ಲೆಯವನಾದ ಫ್ರೆಡರಿಕ್ ಮಿಸ್ತ್ರಾಲ್ ಎಂಬ ಕವಿ ಫ್ರೆಂಚ್ ಭಾಷೆ ಯಲ್ಲಿ ವಿಪುಲವೂ ಜಗದ್ವಿಖ್ಯಾತವೂ ಆದ ಸಾಹಿತ್ಯವಿದ್ದರೂ ಅದರಲ್ಲಿ ರಚಿಸದೆ ಅದರಿಂದ ಭಿನ್ನವಾದ ತನ್ನ ತಾಯಿನುಡಿಯಾದ ಪ್ರೊವೆಂಸಾಲ್ ಭಾಷೆಯಲ್ಲಿ ತಾನೆ ತನ್ನ ಕೃತಿಗಳನ್ನು ರಚಿಸಿದಂತೆ, ನಾನೂ ನನ್ನ ತಾಯ್ನುಡಿಯಲ್ಲಿ ತಾನೆ ರಚಿಸುತ್ತಿದ್ದೆನೇನೋ. ಆದರೆ ತಾಯಿಯ ಮೊಲೆಯಲ್ಲಿ ಹಾಲಿಲ್ಲ, ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆಕೆ ಆ ಬಗ್ಗೆ ನನ್ನನ್ನು ಕನ್ನಡದ ಮೊರೆಯಲ್ಲಿ ಹಾಕಿದಳು. ಈ ತಾಯಿಯಾದರೆ ಪಯಸ್ವಿನಿ. ಎಷ್ಟು ಕಾಲದಿಂದ ಎಷ್ಟೋ ಕವಿಗಳನ್ನು ಊಡಿಸಿಯೂ ಮತ್ತೂ ಬತ್ತದ ದೇವರ ದಯದಿಂದ ಸರ್ವದಾ

ಚಿತ್ರಹಾರದ ಸಮಾಪ್ತಿ. ತನ್ನ ಮೊಲೆಯನ್ನು ಆಕೆ ತಾಯಿಗೂ ಮಿಕ್ಕ ಅಕ್ಕರೆಯಿಂದ ನನಗೆ ಉಣಿಸಿದಳು. ಆಕೆಯ ಅಕ್ಕರೆಯ ಸಾಲವನ್ನು ಏಳೇಳು ಜನ್ಮಕ್ಕೆ ತೆತ್ತು ತೀರಿಸಲಾರೆ...."

ಅನ್ಯತಾಯ ಮೊಲೆ ಹಾಲನ್ನು ಹುಡುಕಿ ಹೊರಟಿರುವ ಅಭಿಮಾನ ಶೂನ್ಯರಾದ ಕನ್ನಡಿಗರನ್ನು ಕಣ್ಣು ತೆರೆಸುವ ಮಾತುಗಳು ಇವು. ಅಭಿಮಾನವನ್ನು ಉಕ್ಕೇರಿಸುವ ಸತ್ವ ಇದು. ಕನ್ನಡದ ಹಾಲು ಕುಡಿದ ಗೋವಿಂದ ಪೈ ಅವರು ಕನ್ನಡದ ಕೀರ್ತಿಯನ್ನು ಹೆಚ್ಚಿಸಿದರು. ಅದರ ಸಂಪತ್ತನ್ನು ಬೆಳೆಸಿದರು. ಗೋವಿಂದ ಪೈ ಕನ್ನಡತನಕ್ಕೆ ಮತ್ತೊಂದು ಹೆಸರಾದರು. ತಮ್ಮ ಮಂಜೇಶ್ವರ, ಕನ್ನಡದ ನೆಲ, ಕೇರಳಕ್ಕೆ ರಾಜಕೀಯವಾಗಿ ಸೇರಿಹೋದದ್ದು ಅವರ ಬದುಕಿನ ಕೊನೆಯ ವರ್ಷಗಳಲ್ಲಿ ದೊಡ್ಡ ಆಘಾತವಾಯಿತು. ಆ ಕೊರಗಿನಲ್ಲಿಯೇ ಅವರು ಪ್ರಾಣಬಿಡಬೇಕಾಗಿ ಬಂದದ್ದು ಕನ್ನಡಿಗರ ದುರ್ದೈವ.

ಗೋವಿಂದ ಪೈ ಅವರು ಸತತವಾಗಿ ಕನ್ನಡದ ಅಭ್ಯುದಯವನ್ನೇ ಧ್ಯಾನಿಸಿದರು. ಅದಕ್ಕಾಗಿ ದುಡಿದರು. ಅವರು ಹಳೆಯ ತಲೆಮಾರಿನವರಾದರೂ ಅವರ ದೃಷ್ಟಿ ಅತ್ಯಾಧುನಿಕವಾದುದಾಗಿತ್ತು. ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅವರು ಮಾಡಿದ ಪ್ರಯೋಗಗಳು ಅವರು ತಾಳಿದ ಧೋರಣೆ ಎಲ್ಲ ಕಾಲಕ್ಕೂ ಅನುಕರಣೀಯವಾಗಿವೆ. "ಶಕ್ಯವಾದ ಮಟ್ಟಿಗೆ ಹೊಸಹೊಸ ಶಬ್ದಗಳನ್ನು ಸೃಷ್ಟಿಸಿ ನಮ್ಮ ಶಬ್ದಸ್ತೋಮವನ್ನು ಹೆಚ್ಚಿಸಬೇಕು. ಏಕೆಂದರೆ ಈಗ ಹೊಸ ಹೊಸ ಭಾವನೆಗಳು ಹುಟ್ಟುತ್ತಿರುವಲ್ಲಿ ಅವುಗಳನ್ನು ಯಥಾವತ್ತಾಗಿ ಮೂಡಿಸಲಿಕ್ಕೆ ಹಳೆಯ ಶಬ್ದಸಂಗ್ರಹ ಸಾಲದು." ಎಂದು ಅವರು ತಮ್ಮ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಕರೆಕೊಟ್ಟು, ಅದಕ್ಕಾಗಿ ಕೆಲವು ಸೂಚನೆಗಳನ್ನೂ ಮಂಡಿಸಿದರು. ಗೋವಿಂದ ಪೈಗಳ ಯಾವುದೇ ಬರವಣಿಗೆಯನ್ನು ಎತ್ತಿಕೊಂಡರೂ ಅಲ್ಲಿ ಅವರು ನಡೆಸಿದ ಪ್ರಯೋಗ ಪ್ರಯತ್ನಗಳು ಸಾಕಷ್ಟು ಕಾಣಿಸುತ್ತವೆ. ಕನ್ನಡದಲ್ಲಿ ಶಬ್ದಸಂಪತ್ತು ಇಲ್ಲವೆಂದು ಗೊಣಗುವ "ವಿದ್ವಾಂಸರು" ಪೈಗಳ ದಾರಿಯಲ್ಲಿ ಸ್ವಲ್ಪ ದೂರ ಹೋಗಲಿ: ಭಾಷೆಯ ಸಹಜ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲಿ.

ಈ ಕೆಲವು ಉದಾಹರಣೆಗಳು ಪೈ ಅವರ ಪ್ರಯೋಗ ಫಲಗಳು:

ಅಕ್ಷರಿಕೆ Spelling; ಗೊಂದಳ Chorus; ಕಾಬಳ್ಳಿ Alphabet; ಮರುಕಳಿಸು Revive; ಕಣ್ಮರವೆ Oversight; ತಿದ್ದುಗೆ Proof in printing; ಒಳಸೂರು Import; ಹೊರಸೂರು Export; ಹೋಲುವೆ Similarity; ಮಸಿಗೇಡು Waste of ink; ಕೇಳುಗ Listener; ಕಲಿಕೆ Learning; ಓದಿಕೆ Reading; ಹಿಂಗತೆ (ಪೂರ್ವೇತಿಹಾಸ); ಕಂಡುಗೊಂಡೆ (ಬಾಡಿದ ಹೂಗಳದಂಡೆ); ಹಿಂಡುಗತ್ತಲೆ (ಕಾಳರಾತ್ರಿ); ನುಡಿತ (ನುಡಿದ ಮಾತು); ಹೂವುತ್ತಿರು (Flowering); ಸವ್ಯಸಾಚಿಸು; ಅರ್ಥವಿಸು; ಕವನಿಸು; ಪುನರುಕ್ತಿಸು; ಭಗೀರಥಿಸು; ಅಜ್ಞತನ; ವರ್ತಕತನ; ಕಾಣಲಾಪ; ಕೊಡಲಾಪ; ಕೈಹೊಡೆಯನ್ನು ಬಿಸುಡು Throw down the gauntlet; ಜಂಬರ; ಪಟ್ಟಾಂಗ; ಗವುಜು—ಇತ್ಯಾದಿ.

ಅಗತ್ಯಕ್ಕೆ ಅನುಸಾರವಾಗಿ ಅನ್ಯಭಾಷೆಯ ಪದಗಳನ್ನು ಸ್ವೀಕರಿಸಿಕೊಳ್ಳುವುದು; ಹಾಗೆ ಸ್ವೀಕರಿಸುವಾಗ ನಮ್ಮ ಭಾಷೆಯ ಜಾಯಮಾನಕ್ಕೆ ಅದನ್ನು ಅಳವಡಿಸಿಕೊಳ್ಳುವುದು; ಹೊಸ ಪದಗಳನ್ನು, ಸಮಾಸಗಳನ್ನು ನಿರ್ಮಿಸುವುದು; ಹಳೆಯ ಪದಗಳಿಗೆ ಜೀವತುಂಬಿ ಚಲಾವಣೆಗೆ ತರುವುದು; ಪ್ರಾದೇಶಿಕ ಆಡುನುಡಿಗೆ ಸಾಹಿತ್ಯದ ಸ್ಥಾನ ಗಳಿಸುವುದು—ಈ ದಿಕ್ಕಿನಲ್ಲಿ ಗೋವಿಂದ ಪೈಗಳು "ಎಸಗಿದ ಕಜ್ಜ" ಮಹತ್ವದ್ದು. ಕನ್ನಡ ಭಾಷೆಗೆ ಅವರು ನೀಡಿರುವ ಕೊಡುಗೆಯ ಈ ಮುಖವೇ ವಿಶೇಷವಾದ ಅಧ್ಯಯನಕ್ಕೆ, ಸಂಶೋಧನೆಗೆ ಅರ್ಹವಾಗಿದೆ. ಹುಲಿ ಬಂತು ಹುಲಿ ಎಂದು ಕೂಗುವವರ ನಡುವೆ ಗೋವಿಂದ ಪೈಗಳು ತೋರಿದ ಧೈರ್ಯ ಸಾಹಸಗಳು ಸ್ತೋತ್ರಾರ್ಹವಾಗಿವೆ.

ಪೈ ಅವರ ಗ್ರಂಥಗಳಲ್ಲಿ 'ಗಿಳಿವಿಂಡು' 'ಗೊಲ್ಗೊಥಾ', 'ಮೂರು ಉಪನ್ಯಾಸಗಳು,' 'ಹೆಬ್ಬೆರಳು', 'ವೈಶಾಖಿ', ತುಂಬ ಪ್ರಸಿದ್ಧವಾಗಿವೆ. 'ಶ್ರೀಕೃಷ್ಣ ಚರಿತ್ರೆ' ಹಾಗೂ 'ಚಿತ್ರಭಾನು ಅಥವಾ ೧೯೪೨' ಎರಡೂ ೧೯೬೩ರಲ್ಲಿ ಪ್ರಕಟವಾದವು. 'ನಂದಾದೀಪ' ಕವನಮಾಲಿಕೆ ಪ್ರಕಟಣೆಗೆ ಸಿದ್ಧವಾಗಿದೆಯೆಂದು ಗೊತ್ತಾಗಿದೆ. ಅವರ ಪಂಡಿತ ಪ್ರಬಂಧಗಳ ಸಂಗ್ರಹ ಒಟ್ಟಾಗಿಯೋ ವಿಷಯಗಳಿಗನುಗುಣವಾಗಿ ಬೇರೆ ಬೇರೆ ಸಂಪುಟಗಳಲ್ಲಿಯೋ ಎಷ್ಟು ಬೇಗ ಪ್ರಕಟವಾದರೆ ಅಷ್ಟೂ ಒಳ್ಳೆಯದು. ಏಕೆಂದರೆ ವಿಮರ್ಶಕರಿಗೆ, ಸಂಶೋಧಕರಿಗೆ ಅವು ಕಡೆಗಣಿಸಲಾಗದ ಅಮೂಲ್ಯ ನಿಧಿ.

ಕನ್ನಡಿಗರಿಗೆ ಗೋವಿಂದ ಪೈ ಅವರು ಹೊರೆಸಿಹೋಗಿರುವ ಋಣದ ಭಾರ ದೊಡ್ಡದು. ಇದರ ತೀರಿಕೆಗೆ ಸಣ್ಣ ಸ್ವರೂಪದಲ್ಲಿಯಾದರೂ ಕನ್ನಡಿಗರು ಆಗಾಗ ಪ್ರಯತ್ನಿಸಿದ್ದಾರೆ. ಮುಂಬಯಲ್ಲಿ ಕೂಡಿದ ಮೂವತ್ತನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಆರಿಸಿದರು. ಅವರನ್ನು "ರಾಷ್ಟ್ರಕವಿ"ಗಳೆಂದು ಗುರುತಿಸಿ ಗೌರವಿಸಿದರು. ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಲು ತೀರ್ಮಾನಿಸಿತ್ತು. ಆದರೆ ಅದು ತಮ್ಮ ಬದುಕಿನಲ್ಲಿ ಬಹು ತಡವಾಗಿ ಬಂದ ಗೌರವವೆಂದು ಅವರು ಅದನ್ನು ಸ್ವೀಕರಿಸಲು ಒಪ್ಪಿಕೊಳ್ಳಲಿಲ್ಲ.

ಈ ದಿನ (೧೭ ಜನವರಿ, ೧೯೬೮) ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ದಲ್ಲಿ, ಅಲ್ಲಿನ ಭಂಡಾರ್‌ಕರ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜಿನ ವತಿಯಿಂದ ನಡೆಯುವ ಸಮಾರಂಭದಲ್ಲಿ, ಡಾ. ಶಿವರಾಮಕಾರಂತರು ಬಿಡುಗಡೆ ಮಾಡುವ 'ದೀವಿಗೆ'—ಗೋವಿಂದ ಪೈ ಅವರ ಸ್ಮಾರಕ ಗ್ರಂಥ—ಕವಿಋಣ ತೀರಿಕೆಯ ಇನ್ನೊಂದು ಕಂತು.

ದೊಡ್ಡ ಆಕಾರದ ನಾಲ್ಕುನೂರು ಐವತ್ತು ಪುಟಗಳ ಈ ಗ್ರಂಥದಲ್ಲಿ ಎರಡು ಸಂಪುಟಗಳಿವೆ: ಮೊದಲನೆಯ ಸಂಪುಟದಲ್ಲಿ ಐದು ಭಾಗಗಳಿವೆ. ಮೊದಲ ನೆಯ ಭಾಗದಲ್ಲಿ ೨೪ ಕವಿತೆಗಳಿದ್ದು, ಇವುಗಳಲ್ಲಿ ಪೈಗಳಿಗಾಗಿ ಕಣ್ಣೀರು ಕಾವ್ಯ ರೂಪದಲ್ಲಿ ಹರಿದಿದೆ. ಕುವೆಂಪು, ಅಂಬಿಕಾತನಯದತ್ತ, ಪು.ತಿ.ನ, ವಿನಾಯಕ ಮೊದಲಾದವರು ಇಲ್ಲಿ ಶ್ರದ್ಧಾಂಜಲಿಯನ್ನು ಅರ್ಪಿಸಿದ್ದಾರೆ. ಎರಡನೆಯ ಭಾಗ ನೆನಹುಗಳ ಮಂಜರಿಯಾಗಿದ್ದು, ದಿವಾಕರ, ಬೇಂದ್ರೆ, ಕಾರಂತ, ಶ್ರೀರಂಗ, ಮಾಸ್ತಿ, ರಾಜರತ್ನಂ, ಆರ್. ಕೆ. ಪ್ರಭು, ಕಾಕಾ ಕಾಲೇಲ್‌ಕರ್ ಮೊದಲಾದ ಮೂವತ್ತನಾಲ್ಕು ಲೇಖಕರು ದಿವಂಗತ ಪೈಗ ಳೊಡನೆ ತಮಗಿದ್ದ ಸಂಬಂಧವನ್ನು ಆತ್ಮೀಯತೆಯಿಂದ ರೇಖಿಸಿದ್ದಾರೆ. ಅವರ ವ್ಯಕ್ತಿತ್ವದ ನಾನಾ ಮುಖಗಳನ್ನು ಮಾತುಗಳಲ್ಲಿ ಸೆರೆಹಿಡಿಯಲು ಪ್ರಯತ್ನಿ ಸಿದ್ದಾರೆ. ಇವುಗಳಲ್ಲಿ ಆರು ಇಂಗ್ಲಿಷ್ ಲೇಖನಗಳಿವೆ. ವಿಮರ್ಶೆ ಎನ್ನುವ ಮೂರನೆ ಭಾಗದಲ್ಲಿ ಮುಗಳಿ, ಗೊರೂರ್ ಮುಂತಾದ ಒಂಬತ್ತು ಜನ ಲೇಖಕರು ಪೈ ಅವರ ಸಾಹಿತ್ಯ ಸಂಶೋಧನೆಗಳ ಬೇರೆ ಬೇರೆ ಮುಖಗಳನ್ನು ಕುರಿತು ಪ್ರಸ್ತಾಪಿಸಿದ್ದಾರೆ. ನಾಲ್ಕನೆಯದು ಕಾಣಿಕೆಯ ಭಾಗವಾಗಿದ್ದು,

ಕುಲದೇವತಾ ಸಮೀಕ್ಷೆ, ಒನಕೆವಾಡು, ವಿಗ್ರಹಾರಾಧನೆಯ ತತ್ವಜ್ಞಾನ-- ಇತ್ಯಾದಿ ಆರು ನಾನಾ ವಿಷಯಕವಾದ ಲೇಖನಗಳನ್ನೊಳಗೊಂಡಿದೆ. ಶಂ. ಬಾ. ಜೋಶಿ, ವೆಂಕಟರಾಮಪ್ಪ, ಯಾಮುನಾಚಾರ್ಯ ಮೊದಲಾದವರು ಈ ವಿಭಾಗದಲ್ಲಿ ಬರೆದಿದ್ದಾರೆ. ಕೊನೆಯ ಭಾಗ ಓಲೆಗಳು ಹೇಳುವ ಕಥೆ. ಇದರಲ್ಲಿ ಕು. ಶಿ. ಹರಿದಾಸ ಭಟ್ಟರು, ಪೈ ಅವರು ಬೇರೆ ಬೇರೆಯವರಿಗೆ ಬರೆದ ೫೦ ಪತ್ರಗಳನ್ನು ಸಂಗ್ರಹಿಸಿದ್ದಾರೆ. ತಮಗೆ ಬಂದ ಪ್ರತಿಯೊಂದು ಕಾಗದಕ್ಕೂ, ಅದು ಎಷ್ಟೇ ಮುಖ್ಯವಾಗಿರಲಿ, ಅಮುಖ್ಯವಾಗಿರಲಿ, ತಪ್ಪದೆ ಒಡನೆಯೇ ಉತ್ತರ ಬರೆಯುವ ಸೌಜನ್ಯ, ಹಿರಿತನ ಗೋವಿಂದ ಪೈಗಳಿಗಿದ್ದವು. ನೇರಳೆ ಮಸಿಯಲ್ಲಿ ಬರೆಯಲ್ಪಟ್ಟ ಸಹಸ್ರಾರು ಕಾಗದಗಳು ಮಂಜೇಶ್ವರ ಅಂಚೆಮನೆ ಯಿಂದ ನಾಡಿನ ಮೂಲೆಮೂಲೆಗಳಿಗೆ ಹೋಗಿವೆ; ರಾಷ್ಟ್ರವ್ಯಾಪಕವಾಗಿ ಸುತ್ತಿವೆ; ಕಡಲನ್ನೂ ದಾಟಿವೆ. ಅವರು ಬರೆದ ಪತ್ರಗಳ ಸಂಖ್ಯೆ ನಿಜವಾದ ಅರ್ಥದಲ್ಲಿ ಅಸಂಖ್ಯಾತ. ಇಲ್ಲಿ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಐವತ್ತು ಪತ್ರಗಳು ಸಾಗರದ ಕೆಲವು ಹನಿಗಳು, ಅಷ್ಟೆ. "ಇನ್ನುಳಿದ ವಿಪುಲ ಪತ್ರ ಸಂಗ್ರಹದ ಹುಡುಕಾಟಕ್ಕೆ ಕಾಲಾವಕಾಶವನ್ನು" ಬೇಡಿ, ಇದು ತಮ್ಮ ಯೋಜನೆಯ ಪ್ರಥಮ ಭಾಗವೆಂದು ಹರಿದಾಸ ಭಟ್ಟರು ಹೇಳಿಕೊಂಡಿರುವುದು ನಮ್ಮಲ್ಲಿ ಆಸೆಯನ್ನು ಹುಟ್ಟಿಸುತ್ತದೆ. ಅವರ ಯೋಜನೆಗೆ ಯಶಸ್ಸನ್ನು ಕೋರುವುದು ನಮ್ಮ ಕರ್ತವ್ಯ.

"ದೀವಿಗೆ"ಯ ಎರಡನೆ ಸಂಪುಟ ಗೋವಿಂದ ಪೈ ಅವರ ಕೆಲವು ಆಯ್ದ ಬರಹಗಳ ಸಂಕಲನ. ಇದರ ಗದ್ಯ ವಿಭಾಗದಲ್ಲಿ ಹದಿಮೂರು ಲೇಖನಗಳಿದ್ದು ಎರಡು ಇಂಗ್ಲಿಷಿನಲ್ಲಿವೆ. ಪೈಗಳ ಆತ್ಮವೃತ್ತಕ್ಕೆ ಸಂಬಂಧಿಸಿದ ಸಾಹಿತ್ಯಜ್ಞರ ಆತ್ಮಕಥನ ಮತ್ತು ಬರಹಗಾರನ ಹಣೆಬರಹ ಎಂಬೆರಡು ಬರಹಗಳೂ, ಸಾಹಿತ್ಯ ಸಮ್ಮೇಳನದ ಅವರ ಅಧ್ಯಕ್ಷ ಭಾಷಣವೂ ಇಲ್ಲಿ ಸೇರಿವೆ. ಪದ್ಯ ವಿಭಾಗದಲ್ಲಿ ಇಪ್ಪತ್ತು ಕವಿತೆಗಳಿವೆ. ಕೊನೆಯ ಕವಿತೆ ಕೊಂಕಣಿಯಲ್ಲಿದೆ.

ಬರಹಗಳ ಜೊತೆಗೆ ಸೇರಿರುವ ಹೆಚ್ಚಿನ ಇನ್ನೊಂದು ಆಕರ್ಷಣೆಯೆಂದರೆ ಆರ್ಟ್ ಕಾಗದದಲ್ಲಿ ಮುದ್ರಿತವಾಗಿರುವ ನಲವತ್ತಾರು ಚಿತ್ರಗಳು. ಇವುಗಳಲ್ಲಿ ಅನೇಕ ಚಿತ್ರಗಳು ಅಪೂರ್ವವಾದವು.

ಇಂಥದೊಂದು ಗ್ರಂಥವನ್ನು ಸಿದ್ಧಪಡಿಸಿ, ಕವಿ ಪೂಜೆಯಲ್ಲಿ ತೊಡಗಿರುವ

ಭಂಡಾರ್‌ಕರ್ ಕಾಲೇಜಿನ ಗೋವಿಂದ ಪೈ ಸ್ಮಾರಕ ನಿಧಿಯ ಅಧಿಕಾರ ವರ್ಗದವರು ತುಂಬ ಒಳ್ಳೆಯ ಕೆಲಸ ಮಾಡಿದ್ದಾರೆ. ಕನ್ನಡಕ್ಕಾಗಿ ಮಾಡುವ ಕೆಲಸ ಬರಿಯ ಕನ್ನಡದ ಕೆಲಸವಲ್ಲ; ನಾಡಿನ ಕೆಲಸ. ನಾಡಿನ ಕೆಲಸ ಲೋಕದ ಕೆಲಸವೂ ಹೌದು. ಭಂಡಾರ್‌ಕರ್ ಕಾಲೇಜಿನ ಪ್ರಿನ್ಸಿಪಾಲರಾದ ಪ್ರೊ. ಟಿ. ಕೃಷ್ಣರಾಯರು ಈ ಕೆಲಸದ ಚಾಲಕ ಶಕ್ತಿಯಾಗಿದ್ದಾರೆ. ಅವರು ಉತ್ಸಾಹಿಗಳು; ಕನ್ನಡದ ಹಿತರಕ್ಷಣೆಯಲ್ಲಿ ಆಸಕ್ತರು. ಕುಂದಾಪುರದ ದೊಡ್ಡ ಬಯಲಿನಲ್ಲಿ ಅವರು ಶಿಕ್ಷಣ ಸಂಸ್ಥೆಯನ್ನು ದೊಡ್ಡ ಆದರ್ಶಗಳೊಡನೆ ರೂಪಿಸುತ್ತಿದ್ದಾರೆ. ಅವರಿಗೆ ಎಲ್ಲ ಬಗೆಯ ಯಶಸ್ಸೂ ಇರಲಿ.

ತಮ್ಮ ಋಜು ಜೀವನ, ಪಾಂಡಿತ್ಯ ನಿಷ್ಠೆ, ಸಾಹಿತ್ಯ ಸೃಷ್ಟಿ—ಇವುಗಳಿಂದ ಗೋವಿಂದ ಪೈ ಅವರು ಕನ್ನಡಿಗರ ಪಾಲಿಗೆ ಆರದ "ದೀವಿಗೆ"ಯಾಗಿದ್ದಾರೆ. ಆ ದೀವಿಗೆಯ ಬೆಳಕಿನಲ್ಲಿ ನಾಡಿನ ಜನ ದಾರಿ ಕಾಣಲಿ; ಗುರಿ ಮುಟ್ಟಲಿ.

Moderately well educated people nowadays find so little difficulty in writing down what they have to say, in easy and straight forward language, that it is hardly possible for us to realize that there was a time when even practised writers found prose troublesome to manage.[1]

ಇಂಗ್ಲಿಷಿನ ಗದ್ಯವಿಕಾಸವನ್ನು ಕುರಿತು ವಿಚಾರ ಮಾಡುತ್ತಾ ವಿಮರ್ಶಕರೊಬ್ಬರು ಆಡಿರುವ ಈ ಮಾತುಗಳು ಕನ್ನಡದ ಗದ್ಯಬೆಳವಣಿಗೆಗೂ ತುಂಬ ಚೆನ್ನಾಗಿ ಒಪ್ಪುತ್ತವೆ. ಸುಮಾರು ಸಾವಿರದೈನೂರು ವರ್ಷಗಳ ನಮ್ಮ ಸಾಹಿತ್ಯದ ಸಂಪದ್ಯುಕ್ತ ಇತಿಹಾಸದಲ್ಲಿ ಗದ್ಯದ್ದು ಕುರುಚಲು ಬೆಳೆ. ಗದ್ಯ ಪದ್ಯಗಳ ರಚನೆಯಲ್ಲಿ ಪದ್ಯವನ್ನು ರಚಿಸುವುದೇ ಪ್ರತಿಷ್ಠೆಯೆಂದು ಭಾವಿಸಿದ್ದರಿಂದಲೋ ಏನೊ ಗದ್ಯ ಬೆಳೆಯಬೇಕಾದ ಹಾಗೆ ಬೆಳೆಯಲಿಲ್ಲ. ಅಲ್ಲದೆ ಒಳ್ಳೆಯ ಗದ್ಯದ ಬರವಣಿಗೆ ಸುಲಭಸಾಧ್ಯವಲ್ಲವೆಂಬುದನ್ನೂ ನಮ್ಮ ಪ್ರಾಚೀನರು ತಿಳಿದುಕೊಂಡಿದ್ದಿರಬೇಕು. ಗದ್ಯದ ರಚನೆಯೂ ಪ್ರತಿಭೆಯ ಒರೆಗಲ್ಲಾಗಬಹುದೆಂಬುದನ್ನು ಕೂಡ ಅವರು ಗಮನಿಸಿದ್ದರು. "ಗದ್ಯಂ ಕವೀನಾಂ ನಿಕಷಂ ವದಂತಿ" ಎಂಬ ಪ್ರಸಿದ್ಧವಾದ ಹೇಳಿಕೆಯಲ್ಲಿ ಅವರು ಗದ್ಯಕ್ಕೆ ಗೌರವ ಸಲ್ಲಿಸಿದರು.

ನಮ್ಮ ಹೊಸ ಸಾಹಿತ್ಯದ ಹರಿಕಾರನಾದ ಮುದ್ದಣನು "ಪದ್ಯಂ ವಧ್ಯಂ ಗದ್ಯಂ ಹೃದ್ಯಂ" ಎಂದು ಇಪ್ಪತ್ತನೆಯ ಶತಮಾನದ ಸಾಹಿತ್ಯಪ್ರವೃತ್ತಿಯನ್ನು ಘೋಷಿಸಿದ; ರಸಿಕರ ಬದಲಾದ ಒಲವಿನ ದಿಕ್ಕನ್ನು ಸೂಚಿಸಿದ. ಸಮಕಾಲೀನ ಸಾಹಿತ್ಯದಲ್ಲಿ ಗದ್ಯವೇ ಪ್ರಥಮ, ಪ್ರಧಾನ; ಅದರದೇ ರಾಜ್ಯಭಾರ, ರಾಯಭಾರ. ಹಾಗಾಗಿ ಗದ್ಯರಚನೆಯನ್ನು ಎತ್ತಿಕೊಂಡವರು ಹಲವರು;

[1]A. C. Ward, *Foundations of English Prose*, ಪು. ೧೯

ಆದರಲ್ಲಿ ಯಶಸ್ಸುಪಡೆದವರು ಕೆಲವರು; ಈ ಮಾರ್ಗದಲ್ಲಿ ಮಾದರಿಯನ್ನು ನಿರ್ಮಿಸಿದವರು ತೀರ ವಿರಳ.

ಈ ವಿರಳರಲ್ಲಿ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಅಗ್ರಗಣ್ಯರು. ನಿಸ್ಸಂದೇಹವಾಗಿ ಅವರು ಹೊಸಗನ್ನಡದ ಗದ್ಯಶಿಲ್ಪಿಗಳಲ್ಲಿ ಶ್ರೇಷ್ಠರು.

ಎ. ಸಿ. ವಾರ್ಡ್ ಇಂಗ್ಲಿಷ್ ಗದ್ಯದ ವಿಚಾರವಾಗಿ ಬರೆಯುತ್ತಾ ಡ್ರೈಡನ್ನನ ಕೊಡುಗೆಯನ್ನು ಪ್ರಸ್ತಾಪಿಸುವಾಗ ಡ್ರೈಡನ್ನನಿಗಿಂತ ಮೊದಲು ಇಂಗ್ಲಿಷ್ ಗದ್ಯ ಸಾಮಾನ್ಯವಾಗಿ ಬೇನಾಜೂಕಿನದಾಗಿತ್ತೆಂದೂ, ಶ್ರಮಪಟ್ಟು ರಚಿಸಿದ್ದಾಗಿದ್ದು ಅದನ್ನು ಓದುವುದೇ ಒಂದು ಶ್ರಮದ ಕೆಲಸವೆಂದೂ ಹೇಳುತ್ತಾನೆ.[2] ಇಂಗ್ಲಿಷ್ ಗದ್ಯಕ್ಕೆ ನಯನಾಜೂಕುಗಳನ್ನೂ ಶಕ್ತಿಸಾಮರ್ಥ್ಯಗಳನ್ನು ಡ್ರೈಡನ್ ತಂದುಕೊಟ್ಟನೆಂದು ಅವನನ್ನು ಹೀಗೆ ಪ್ರಶಂಸಿಸಿದ್ದಾನೆ:

> Dryden was our greatest benefactor in this respect for it was he who first demonstrated how prose might be made a clear, sharp, plain instrument for workaday purpose.[3]

ನಮ್ಮ ಹೊಸ ಗದ್ಯದ ಇತಿಹಾಸದಲ್ಲಿ ಕೃಷ್ಣಶಾಸ್ತ್ರಿಗಳ ಸಾಧನೆ ಈ ಬಗೆಯಾದುದು. ಐವತ್ತು ವರುಷಗಳ ಹಿಂದೆ ಅವರು ಬರವಣಿಗೆಗೆ ತೊಡಗಿ, 'ಪ್ರಬುದ್ಧಕರ್ಣಾಟಕ'ವನ್ನು ಸ್ಥಾಪಿಸಿದ್ದಾಗ, ಕನ್ನಡ ಗದ್ಯಕ್ಕೆ ಒಂದು ನೆಲೆ ಇರಲಿಲ್ಲ. ಇದ್ದ ಗದ್ಯಕ್ಕೆ ಯಾವಬಗೆಯ ಆಕರ್ಷಣೆಯೂ ಇರಲಿಲ್ಲ. ಕೃಷ್ಣಶಾಸ್ತ್ರಿಗಳು ಹೊಸ ಸಾಹಿತ್ಯಕ್ಕೆ ಒಂದು ಸ್ಪಷ್ಟವಾದ, ನಿಶಿತವಾದ, ಸರಳ ಮಾಧ್ಯಮವೊಂದನ್ನು ತಮ್ಮ ಬರವಣಿಗೆಯ ಮೂಲಕ ದೊರಕಿಸಿ ಕೊಟ್ಟರು. ಅದನ್ನು ತಮ್ಮ ಪತ್ರಿಕೆಯ ಮೂಲಕ ಬಲಪಡಿಸಿದರು. ಕನ್ನಡಗದ್ಯ ಅವರ ಕೈಯಲ್ಲಿ ಒಂದು ಪ್ರಬುದ್ಧತೆಯನ್ನು ಪಡೆದುಕೊಂಡಿತು. ನಿತ್ಯಬಳಕೆಯ ಮಾತುಗಳೇ ಸಾಹಿತ್ಯದ ಮಹತ್ವ ಪಡೆಯಬಲ್ಲವೆಂಬುದನ್ನು ತೋರಿಸಿಕೊಟ್ಟ ಮಹಾನುಭಾವರು ಅವರು.

ಭಾಸಕವಿಯ ಕಲಾಚಾತುರ್ಯವನ್ನು ಪ್ರಶಂಸಿಸುತ್ತಾ ಶಾಸ್ತ್ರಿಗಳು ಹೇಳು

---

[2] ಅದೇ.

[3] ಅದೇ, ಪು. ೧೫.

ತ್ತಾರೆ: "ಮನೆಯಲ್ಲಿ ಇರುವ ಒಂದೆರಡು ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆಗಳಲ್ಲಿಯೇ, ಹತ್ತಾರು ರುಚಿರುಚಿಯಾದ ಅಡಿಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ ಕವಿಯು ಮುಂದಿರುವ ಒಂದೆರಡು ಪಾತ್ರಗಳಲ್ಲಿಯೇ, ಹಳೆಯ ಕಥಾಸಾಮಗ್ರಿಗಳಿಂದಲೇ ಸುಂದರವಾಗಿ ಕಂಗೊಳಿಸುವ ಮನೋಹರವಾದ ರಸಪದಾರ್ಥಗಳನ್ನು ಸೃಷ್ಟಿಸಿದ್ದಾನೆ."[4]

ಇದು ಕೃಷ್ಣಶಾಸ್ತ್ರಿಗಳ ಗದ್ಯವಿಲಾಸಕ್ಕೇ ಅನ್ವಯವಾಗುವಂಥದು. ದಿನ ಬಳಕೆಯ ಚಿರಪರಿಚಿತ ಸಾದಾ ಸರಳ ಪದಗಳಲ್ಲಿಯೇ ಅವರು ಶಕ್ತಿಯನ್ನೂ ಸೌಂದರ್ಯವನ್ನೂ ಮೆರೆಸಬಲ್ಲರು. ಬಗೆ ಬಗೆಯ ಬಣ್ಣವನ್ನೂ ರುಚಿಯನ್ನೂ ತೋರಬಲ್ಲರು. ಅದಕ್ಕಾಗಿ ಅವರು ಶ್ರಮಪಡರು. ಬರವಣಿಗೆ ಅವರಿಗೆ ನಿರಾಯಾಸವಾಗಿ ಲಭಿಸಿದ್ದು; ಅದು ಉಸಿರಾಡುವಷ್ಟೇ ಸಹಜ. ಕನ್ನಡ ಗದ್ಯ ಶಾಸ್ತ್ರಿಗಳ ಕೈಯಲ್ಲಿ ರೂಪುಗೊಂಡ ಬಗೆ ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಒಂದು ಅಪೂರ್ವಸಿದ್ಧಿ. ಈ ಗದ್ಯದ ಒಂದು ಪವಾಡವೆಂದರೆ, ಅದು ಅನುಕರಣೆಗೆ ಸಿಕ್ಕದಿರುವುದು. ಎಷ್ಟೋ ಜನರ ಅತ್ಯಂತ ಸುಂದರವಾದ ಗದ್ಯ ಅನೇಕರ ಅನುಕರಣೆಗೆ ಒಳಗಾಗಿರುವುದನ್ನು ಗುರುತಿಸಬಹುದಾಗಿದೆ. ಆದರೆ ಕೃಷ್ಣಶಾಸ್ತ್ರಿಗಳ ಗದ್ಯವನ್ನು ಅನುಸರಿಸಿ, ಇವರದು ಶಾಸ್ತ್ರಿಗಳ ರೀತಿ ಎನ್ನಿಸಿಕೊಂಡವರೊಬ್ಬರನ್ನೂ ನಾನು ಕಾಣೆ. ಇದೇ ಶಾಸ್ತ್ರಿಗಳ ಗದ್ಯದ ವೈಶಿಷ್ಟ್ಯ.

* * *

ಬರವಣಿಗೆಯಲ್ಲಿ ಕನ್ನಡ–ಸಂಸ್ಕೃತಗಳ ಸಂಬಂಧ ಯಾವ ಬಗೆಯದಾಗಿರಬೇಕೆಂಬುದೊಂದು ಹಳೆಯ ಪ್ರಶ್ನೆ. ಇವುಗಳ ಬೆರಕೆ ಮುತ್ತು ಮೆಣಸುಗಳ ಬೆರಕೆಯೆಂದೂ, ಎಣ್ಣೆ ತುಪ್ಪಗಳ ಬೆರಕೆಯೆಂಮೂ ಪ್ರಾಚೀನರು ಕೊರಗಿದ್ದುಂಟು. ಆಧುನಿಕರು ತಮ್ಮ ಸಂಸ್ಕೃತಭೂಯಿಷ್ಠ ಶೈಲಿಯಲ್ಲಿ ಪದಗಳಿಗೆ ಮಾರುಹೋಗಿ ಅರ್ಥವನ್ನು ಕಡೆಗಾಣಿಸಿದ್ದಾರೆಂದೂ ಒಂದು ಆಪಾದನೆ.

ಕೃಷ್ಣಶಾಸ್ತ್ರಿಗಳು ವಂಶದಿಂದಲೂ, ವಿದ್ಯೆಯಿಂದಲೂ ದೊಡ್ಡ ಸಂಸ್ಕೃತ ವಿದ್ವಾಂಸರು. ಅವರ ಕೃತಿರಚನೆಯ ಕೇಂದ್ರಬಿಂದುವೂ ಸಂಸ್ಕೃತವೇ. ಆದರೂ

---

[4] ಭಾಸಕವಿ, ಪು. ೫೯.

ಸಂಸ್ಕೃತದ ಬಳಕೆಯಲ್ಲಿ ಅವರು ತೋರುವ ಸಂಯಮ ಅನ್ಯಾದೃಶವಾದುದು. ಸಂಸ್ಕೃತ-ಕನ್ನಡಗಳನ್ನು ಹಿತಮಿತವಾಗಿ ಬಳಸಿಕೊಳ್ಳುವ ಅವರ ರೀತಿಯಂತೂ ಕಲಾತ್ಮಕ, ಆಕರ್ಷಣೀಯ, ಮನೋಜ್ಞ. ಅವರು ಎಂದೂ ಅನವಶ್ಯವಾಗಿ ಸಂಸ್ಕೃತವನ್ನು ಬಳಸಿದವರಲ್ಲ. ಸಂಸ್ಕೃತದ ಬಳಕೆಯಲ್ಲಿ ಲೇಖಕರು ಯಾವ ಬಗೆಯ ವಿವೇಚನೆ ತೋರಬೇಕೆಂದು ಅವರೇ ವೆಂಕಟಾಚಾರ್ಯರ ಶೈಲಿಯ ಬಗೆಗೆ ಬರೆಯುತ್ತಾ ಹೇಳಿದ್ದಾರೆ:

"ಬಂಗಾಳಿ ಭಾಷೆಯಲ್ಲಿ ಸಂಸ್ಕೃತಶಬ್ದಗಳು ಹೇರಳವಾಗಿ ಬರುತ್ತವೆ. ಕನ್ನಡಕ್ಕೆ ತರ್ಜುಮೆ ಮಾಡುವಾಗ ಆ ಶಬ್ದಗಳನ್ನೇ ಇಟ್ಟುಕೊಂಡರೆ ಕನ್ನಡ ಶೈಲಿಯು ಸಂಸ್ಕೃತಭೂಯಿಷ್ಠವಾಗುತ್ತದೆ. ಸಂಸ್ಕೃತವನ್ನು ಸೇರಿಸುವುದು ತಪ್ಪೆಂದಲ್ಲ. ಸಂಸ್ಕೃತದ ಸಹಾಯವಿಲ್ಲದಿದ್ದರೆ ಎಲ್ಲಾ ಅಭಿಪ್ರಾಯಗಳನ್ನೂ ಕನ್ನಡದಲ್ಲಿ ತಿಳಿಸುವ ಬಗೆ ಹೇಗೆ? ಆದರೆ ಇದರಲ್ಲಿ ಸ್ವಲ್ಪ ವಿವೇಚನೆ ಬೇಕು. ಎಲ್ಲಿ ಸುಲಭವಾದ ಕನ್ನಡ ಮಾತುಗಳಿಂದಲೇ ಅರ್ಥವನ್ನು ತಿಳಿಸುವುದು ಸಾಧ್ಯವೋ ಅಲ್ಲಿ ಅನಾವಶ್ಯಕವಾಗಿ ಸಂಸ್ಕೃತವನ್ನು ಉಪಯೋಗಿಸಬಾರದು."[5]

ವೆಂಕಟಾಚಾರ್ಯರ ಬರವಣಿಗೆಯಲ್ಲಿ ಬೇಡವಾದ ಎಷ್ಟೋ ಪೆಡಸು ಸಂಸ್ಕೃತ ಶಬ್ದಗಳು ನುಸುಳಿಕೊಂಡು ಬಂದವು. ಇವುಗಳನ್ನು ಕೈಬಿಟ್ಟು ಕನ್ನಡ ಪದಗಳನ್ನೇ ಬಳಸಲು ಅವರು ಪ್ರಯತ್ನಿಸಿದ ಫಲವಾಗಿ ಅನೇಕ 'ಅಪ್ರಸಿದ್ಧ ಕನ್ನಡ ಪದಗಳು ಬಂದು ಸೇರಿದವು'. ಇದನ್ನು ಟೀಕಿಸಿ ಶಾಸ್ತ್ರಿಗಳು ಹೇಳಿದರು: "....ಇಂಥ ಕನ್ನಡ ಪದಗಳನ್ನು ಪ್ರಯೋಗಿಸುವುದು ಚೆನ್ನಾಗಿ ತೋರುವುದಿಲ್ಲ. ಅವುಗಳಿಗೆ ಬದಲಾಗಿ ಸಂಸ್ಕೃತ ಪದಗಳನ್ನು ಉಪಯೋಗಿಸು ವುದು ಎಷ್ಟೋ ಮೇಲು".[6]

ಪದಗಳ ಬಳಕೆಯ ವಿಚಾರದಲ್ಲಿ ಶಾಸ್ತ್ರಿಗಳು ಅಂಧಶ್ರದ್ಧೆ, ಮಡಿಭಾವನೆ, ಸ್ವಮೋಹ ಈ ಯಾವುದರಿಂದಲೂ ಪೀಡಿತರಾಗಲಿಲ್ಲ. ಅವರ ಎದುರಿಗಿದ್ದದ್ದು ತೂಕವಾದ, ನಿಷ್ಕೃಷ್ಟವಾದ, ತಿಳಿಯಾದ ಗದ್ಯದ ಆದರ್ಶ.

ಅವರ 'ವಚನ ಭಾರತ' ಒಂದು ರಸದ ಚಿಲುಮೆ. ಅದರ ಯಾವ ಪುಟವನ್ನು

---

[5] ಭಾಷಣಗಳು ಮತ್ತು ಲೇಖನಗಳು, ಪು. ೩೫೦.

[6] ಅದೇ.

ತೆರೆದರೂ ಅತ್ಯುತ್ತಮ ಕನ್ನಡ ಬರವಣಿಗೆಗೆ ಉದಾಹರಣೆಯಾಗಬಲ್ಲದು. ಯಾವ "ಭೂತಕಾವ್ಯ"ವನ್ನು ಸಂಪೂರ್ಣವಾಗಿ ಓದಲು ಒಂದು ಜೀವ ಮಾನವೇ ಸಣ್ಣದೆಂದು ತೋರಿಬರುತ್ತದೆಯೋ ಆ ಕಾವ್ಯವನ್ನು ನಾನೂರು ಪುಟಗಳಿಗೆ ಭಟ್ಟಿ ಇಳಿಸುವುದು ಸಾಮಾನ್ಯವಾದ ಸಾಹಸವಲ್ಲ. ಶಾಸ್ತ್ರಿಗಳ ದೃಷ್ಟಿ ಹಾಗೂ ಸೃಷ್ಟಿಯಲ್ಲಿ ಈ ಯಶಸ್ಸಿನ ಗುಟ್ಟು ಅಡಗಿದೆ. 'ವಚನ ಭಾರತ'ದ ರಚನೆಯ ವಿಷಯವಾಗಿ ಹೇಳುತ್ತಾ ಅವರೇ ತಮ್ಮ ದೃಷ್ಟಿಯನ್ನು ವಿವರಿಸಿದ್ದಾರೆ: "ಈ ಗ್ರಂಥದ ರಚನೆಯಲ್ಲಿ ನನ್ನ ದೃಷ್ಟಿಯು ಮುಖ್ಯವಾಗಿ ಕಾವ್ಯದೃಷ್ಟಿ, ಸಾಹಿತಿಯ ದೃಷ್ಟಿ. ಕಥೆ ಚೆನ್ನಾಗಿರಬೇಕು, ಆದಷ್ಟು ರಸವತ್ತಾಗಿರಬೇಕು, ವರ್ಣನೆ ಅಲಂಕಾರ ಧರ್ಮ ನೀತಿ ಎಲ್ಲಾ ಉಚಿತ ಪ್ರಮಾಣದಲ್ಲಿ ಹದವಾಗಿ ಹೊಂದಿಕೊಂಡಿರಬೇಕು; ಮೂಲದಲ್ಲಿ ಸಾರವತ್ತಾದ ದ್ದೆಲ್ಲಾ ಪಾಕವಿಳಿಯಬೇಕು; ಆದರೂ ಹಿಡಿತವಲ್ಲಿರಬೇಕು; **ಭಾಷೆ ಬಿಗಿಯಾಗಿ, ಆದರೆ ತಿಳಿಯಾಗಿ ಇರಬೇಕು**—ಇದು ನನ್ನ ಗುರಿ. (ದೊಡ್ಡಕ್ಷರಗಳು ನನ್ನವು)"

'ವಚನ ಭಾರತ'ದ ಮಿಕ್ಕ ಎಲ್ಲ ಗುಣಗಳಿಗೂ ಮಹತ್ವ ಬಂದಿರುವುದು ಈ ಬಿಗಿಯಾದ ಆದರೆ ತಿಳಿಯಾದ ಭಾಷೆಯಿಂದ ಎಂಬುದು ಮೇಲು ನೋಟಕ್ಕೇ ವ್ಯಕ್ತವಾಗುವ ವಿಷಯ. ಸಂಗ್ರಹಗುಣ, ಔಚಿತ್ಯ, ರಸಗ್ರಹಣಶಕ್ತಿ ಇವೆಲ್ಲ ಎಷ್ಟೇ ಮಹತ್ವದವಾಗಿದ್ದರೂ ಬರವಣಿಗೆಯಲ್ಲಿಪ್ರಾಸಾದಿಕತೆ ಇಲ್ಲದಿದ್ದರೆ ಅವು ಈಗಿನಷ್ಟು ಶೋಭಾಯಮಾನವಾಗಿ ಇರುತ್ತಲೇ ಇರಲಿಲ್ಲ. ಇದರಿಂದಲೇ 'ವಚನ ಭಾರತ' ಆಧುನಿಕ ಕಾದಂಬರಿಯ ಅನೇಕ ಲಕ್ಷಣಗಳನ್ನು ಪಡೆದಿದೆ. ಇಂದಿನ ಕಾದಂಬರಿಕಾರನ ಕೈಯಲ್ಲಿ ಇದು ತಂತ್ರವನ್ನುಳಿದು ಅನ್ಯವಿಷಯ ಗಳಲ್ಲಿ ಇದಕ್ಕಿಂತ ಬೇರೆಯಾಗಿರುವುದು ಸಾಧ್ಯವಿರುತ್ತಿರಲಿಲ್ಲ. ಇಲ್ಲಿನ ಸಂಭಾಷಣೆಗಳಂತೂ ಇಂದಿನ ಲಲಿತ ಸಾಹಿತ್ಯದ ಬರವಣಿಗೆಗೆ ತೀರ ಹತ್ತಿರದ ವಾಗಿವೆ.

'ಶ್ರೀಪತಿಯ ಕಥೆಗಳ'ನ್ನುಳಿದು ಕೃಷ್ಣಶಾಸ್ತ್ರಿಗಳು ಬೇರೆ ಲಲಿತ ಸಾಹಿತ್ಯ ವನ್ನು ನಿರ್ಮಿಸಲಿಲ್ಲ. ಆದರೆ ಅವರ ಶಕ್ತಿ ಆ ನಿಟ್ಟಿನಲ್ಲಿ ಅದ್ಭುತವಾದುದೆಂಬುದಕ್ಕೆ ಅವರ ವಿಮರ್ಶಾತ್ಮಕ ಬರವಣಿಗೆಯ ಪುಟಪುಟಗಳಲ್ಲಿಯೂ ನಮಗೆ ಆಧಾರ ಗಳು ಸಿಕ್ಕುತ್ತವೆ. 'ಭಾಸ' ಮತ್ತು 'ಸಂಸ್ಕೃತನಾಟಕ'ಗಳಲ್ಲಿ ಅವರು ಸಂಸ್ಕೃತ

ನಾಟಕದ ತುಣುಕುಗಳನ್ನು ಉದಾಹರಣೆಗಾಗಿ ಅನುವಾದಿಸಿಕೊಟ್ಟಿದ್ದಾರೆ. ಅವು ಎಷ್ಟು ಮೋಹಕವಾಗಿವೆಯೆಂದರೆ ಅವನ್ನು ಓದುವ ಯಾರಿಗಾದರೂ ಕೃಷ್ಣಶಾಸ್ತ್ರಿಗಳು ಕೆಲವಾದರೂ ನಾಟಕಗಳನ್ನು ಅನುವಾದಿಸದೇ ಹೋದರಲ್ಲಾ ಎಂಬ ವ್ಯಥೆಯಾಗುತ್ತದೆ.

ತಮ್ಮ ವಿಮರ್ಶೆಯ ಗ್ರಂಥಗಳಲ್ಲಿ ಅವರು ಸಂಸ್ಕೃತ ನಾಟಕಗಳ ಮತ್ತು ಬಂಕಿಮಚಂದ್ರ ಚಟರ್ಜಿಯವರ ಕಾದಂಬರಿಗಳ ಸಾರಾಂಶವನ್ನು ಕೊಟ್ಟಿದ್ದಾರೆ. ಪ್ರತ್ಯೇಕವಾಗಿ ಪ್ರಕಟಿಸಿದರೆ ಇವುಗಳ ಸಂಕಲನವೇ ರಸಸ್ಯಂದಿಯಾದ ಕಥಾಗುಚ್ಛಗಳಾಗಬಲ್ಲವು. ಕೆಲವೇ ಪುಟಗಳಲ್ಲಿ ಮೂಲಕ್ಕೆ ಭಂಗಬರದಂತೆ ದೊಡ್ಡ ದೊಡ್ಡ ಕಥಾವಸ್ತುಗಳನ್ನು ಹಿಡಿದಿಡುವ ಅವರ ನೈಪುಣ್ಯ ಅನನ್ಯಸಾಧ್ಯವಾದುದು. ಸಾರಾಂಶವನ್ನು ಕೊಡುವಾಗ ಪಾತ್ರದ ಬೆಳವಣಿಗೆಯನ್ನೂ, ಸನ್ನಿವೇಶಗಳ ಮಹತ್ವವನ್ನೂ ಅವರು ಮರೆಯುವುದಿಲ್ಲ. ಮೂಲದ ಅಂಕಗಳ ಇಲ್ಲವೆ ಅಧ್ಯಾಯಗಳ ಬೆಳವಣಿಗೆಯನ್ನು ಹಾಗೆಯೇ ಉಳಿಸಿಕೊಳ್ಳುವುದರಿಂದ ಒಟ್ಟು ರೂಪವಿನ್ಯಾಸಕ್ಕೆ ಭಂಗ ಬರುವುದಿಲ್ಲ. ಈ ಸಾರಾಂಶಗಳೇ ಶಾಸ್ತ್ರಿಗಳ ಸೃಜನ ಶಕ್ತಿಗೊಂದು ಸಾಕ್ಷಿ.

'ಶ್ರೀಪತಿಯ ಕಥೆಗಳ'ಲ್ಲಾಗಲಿ, ಈ ಸಾರಾಂಶಗಳಲ್ಲಾಗಲಿ, ವಿಮರ್ಶೆಗಳಲ್ಲಾಗಲಿ ಶಾಸ್ತ್ರಿಗಳ ವರ್ಣನಚಾತುರ್ಯ ಮೆಚ್ಚುವಂಥದು. 'ವಿಷವೃಕ್ಷ' ಕಾದಂಬರಿಯನ್ನು ವಿಮರ್ಶಿಸುತ್ತಾ ಬಂಕಿಮಚಂದ್ರರ ವರ್ಣನಶಕ್ತಿಯನ್ನೂ, ಭಾವರಸಾರ್ಥಗಳಿಗೆ ಸಮನಾಗಿ ಕೂಡಿಕೊಂಡು ಹೋಗುವ ಅವರ ಶೈಲಿಯನ್ನೂ ಕುರಿತು ವಿಚಾರಮಾಡುವಾಗ, ಬರವಣಿಗೆಯಲ್ಲಿ ವರ್ಣನೆ ಯಾವ ಬಗೆಯಾಗಿರಬೇಕೆಂಬುದನ್ನು ಶಾಸ್ತ್ರಿಗಳೇ ಹೀಗೆ ನಿರೂಪಿಸಿದ್ದಾರೆ:

"ವರ್ಣನೆಯ ಮುಖ್ಯ ಉದ್ದೇಶವೇನೆಂದರೆ—ವರ್ಣಿತ ವಸ್ತುವು ನಮ್ಮ ಕಣ್ಣಿಗೆ ಕಟ್ಟಿದಂತಾಗಬೇಕು; ಅದರ ಭಾವಚಿತ್ರವನ್ನು ಮುಂದೆ ತಂದಿಟ್ಟಂತಾಗಬೇಕು; ಅಷ್ಟೇ ಅಲ್ಲ; ಚಿತ್ರಗಾರನಾಗಲಿ, ಭಾವಚಿತ್ರವನ್ನು ಹಿಡಿಯತಕ್ಕ ಯಂತ್ರವಾಗಲಿ ಅಸಾಧ್ಯವೆಂದು ಕೈಬಿಡುವ ಎಷ್ಟೋ ಸೂಕ್ಷ್ಮ ವಿಷಯಗಳನ್ನು ಕವಿಯು ತನ್ನ ವಾಕ್ಸಂಪತ್ತಿಯಿಂದ ಪಾಠಕರ ಕಿವಿಯ ಮೂಲಕ ಅವರ ಮನಸ್ಸಿನಲ್ಲಿ ಅಚ್ಚಳಿಯದಂತೆ ಚಿತ್ರಿಸಬೇಕು."[7]

---

[7] ಅದೇ. ಪು. ೩೨೬

ಕೃಷ್ಣಶಾಸ್ತ್ರಿಗಳು ತಮ್ಮ ಶೈಲಿಯಲ್ಲಿಯೇ ಈ ವರ್ಣನಚಾತುರ್ಯವನ್ನು ಮೆರೆದಿದ್ದಾರೆ. 'ಶ್ರೀಪತಿಯ ಕಥೆಗಳ'ಲ್ಲಿ ಅವರು ವ್ಯಕ್ತಿಗಳನ್ನು ನಮ್ಮೆದುರು ತಂದು ನಿಲ್ಲಿಸಿಬಿಡುತ್ತಾರೆ. ಸನ್ನಿವೇಶಗಳನ್ನು ಚಿತ್ತಾಕರ್ಷಕವಾಗಿ ಕಟ್ಟುತ್ತಾರೆ. ವಿಮರ್ಶೆಯಲ್ಲಿಯೂ ಅವರು ಕುಶಲಚಿತ್ರಗಾರನ ಕೆಲಸವನ್ನು ನಿರ್ವಹಿಸಬಲ್ಲರೆಂಬುದಕ್ಕೆ ಬೇಕಾದಷ್ಟು ಉದಾಹರಣೆಗಳು ಸಿಕ್ಕುತ್ತವೆ. ಬಂಕಿಮಚಂದ್ರರ 'ರಾಜಸಿಂಹ' ಕಾದಂಬರಿಯ ಪಾತ್ರಗಳನ್ನು ವಿವೇಚಿಸುತ್ತಾ ಒಂದುಕಡೆ ಶಾಸ್ತ್ರಿಗಳು ಬರೆದಿರುವುದು ಇದು :

"ಮಾಣಿಕಲಾಲನು ರೂಪನಗರದ ಅಂಗಡಿಬೀದಿಗೆ ಹೋಗಿ, ಹೊಟ್ಟೆಗೆ ವಂಚನೆ ಮಾಡಿಕೊಳ್ಳದೆ ಐದಾರು ಸೇರು ಮಿಠಾಯಿ ತಿಂದು ಸೇರೂವರೆ ಹಾಲುಕುಡಿದು, ತಾಂಬೂಲ ಮಾರುವ ಅಂಗಡಿಗೆ ಬರುತ್ತಾನೆ. ಅಂಗಡಿಯ ಯಜಮಾನಿಯು ಬಹಳ ರಸಿಕಳು ; ವರ್ಣದಲ್ಲಿ ಕೆಂಪು, ಜಿಂಕೆಯ ಕಣ್ಣುಗಳು ; ದೃಷ್ಟಿ ಚಂಚಲ ; ಸುಂದರವಾಗಿ ನಗುವಳು, ಅನಿಂದ್ಯವಾದ ದಂತ ಪಂಕ್ತಿ ; ಆಭರಣಭೂಷಿತಳು ; ವಯಸ್ಸು ಸುಮಾರು ಮುವ್ವತ್ತು. ಅವಳ ಕೆಲಸ ಬೀಡಾ ಮಾರುವುದಲ್ಲ ; ಅದನ್ನು ಅವಳ ದಾಸಿ ಮಾಡುತ್ತಿದ್ದಳು ; ಯಜಮಾನಿಯು ರತ್ನಗಂಬಳಿಯ ಮೇಲೆ ಕುಳಿತು ಮನೋಹರವಾಗಿ ನಗುತ್ತ ದುಡ್ಡು ತೆಗೆದುಕೊಳ್ಳುತ್ತಿದ್ದಳು ; ರಸಿಕರು ಸಿಕ್ಕಿದರೆ ಚಕ್ಕಂದವಾಡುವಳು."[8]

ಇದು ಯಾವುದೋ ಕಥೆ—ಕಾದಂಬರಿಯಿಂದ ತಪ್ಪಿಸಿಕೊಂಡು ಬಂದ ವರ್ಣನೆಯಂತೆ ಕಾಣುತ್ತದೆಯೆ ಹೊರತು ವಿಮರ್ಶೆಯ ಭಾಗವೆಂದು ಗೊತ್ತಾಗುವುದಿಲ್ಲ. ಈ ಬೀಡಾ ಅಂಗಡಿಯ ಒಡತಿಯ ಚಿತ್ರವನ್ನು ಕೃಷ್ಣಶಾಸ್ತ್ರಿಗಳ ಮಾತುಗಳು ಚಿತ್ರಿಸಿರುವ ಹಾಗೆ ಯಾವ ಚಿತ್ರಕಾರ ಬರೆದಾನು ? ಯಾವ ಕ್ಯಾಮರ ತೆಗೆದೀತು ?

'ಕೃಷ್ಣಕಾಂತನ ಉಯಿಲಿ'ನ ರೋಹಿಣಿಯನ್ನು ಅವರ ಶಬ್ದಗಳು ಚಿತ್ರಿಸಿದ ಬಗೆ ಇದು :

"ರೋಹಿಣಿಯು ಕುಂದೆಗಿಂತ ರೂಪವತಿ, ಯೌವನಸಂಪನ್ನೆ, ಪ್ರೌಢೆ, ಮೋಹಕಾರಿ, ಮಾಯಕಾರಿ, ಬುದ್ಧಿವಂತೆ, ವಿದ್ಯಾವಂತೆ, ಧೃಷ್ಟೆ, ಚತುರೆ,

---

[8] ಬಂಕಿಮಚಂದ್ರ, ಪು. ೨೫೫

ರಸಿಕೆ; ವಿಧವೆಯ ವೇಷಭೂಷಣಗಳಿಲ್ಲ; ದಿವ್ಯವಾಗಿ ಅಡಿಗೆ ಮಾಡುವಳು, ಹಾಡುವಳು, ಕಸೂತಿ ಕೆಲಸಮಾಡುವಳು, ಜಡೆಹಾಕುವಳು, ಹೂಕಟ್ಟುವಳು; ತುಂಬುಯೌವನ; ರೂಪ ಉಕ್ಕುತ್ತಿತ್ತು."[9]

ಇಲ್ಲಿನ ಪ್ರತಿಯೊಂದು ಮಾತೂ ರೋಹಿಣಿಯನ್ನು ವರ್ಣಿಸುವುದಷ್ಟೇ ಅಲ್ಲ, ಇಡೀ ಕಾದಂಬರಿಯಲ್ಲಿ ನೇಯ್ದುಕೊಂಡಿರುವ ಅವಳ ಪಾತ್ರವನ್ನು ಸ್ಪಷ್ಟಪಡಿಸುತ್ತವೆ. ಇದೇ ಸಂದರ್ಭದಲ್ಲಿ ಗೋವಿಂದಲಾಲನನ್ನು ಕುರಿತು ಶಾಸ್ತ್ರಿಗಳು ಹೇಳುವುದು ಹೀಗೆ:

"ಭ್ರಮರೆ ಎಷ್ಟು ಗುಣವಂತಳೋ ಅಷ್ಟು ರೂಪವಂತಳಲ್ಲ; ಹೆಸರಿಗೆ ತಕ್ಕಂತೆ ಕಪ್ಪು; ಆದರೆ ಹೆಚ್ಚೇನೂ ಕಪ್ಪಿರಲಾರದು; ರೋಹಿಣಿಯನ್ನು ನೋಡಿ, ಅವಳ ಕಣ್ಣು ತುಟಿ ಒಲಪು ವೈಯಾರಗಳ ಪರಿಚಯವಾಗುವವರೆಗೂ ಗೋವಿಂದಲಾಲನು ಹೆಂಡತಿಯ ಕಪ್ಪನ್ನು ಅಷ್ಟಾಗಿ ಮನಸ್ಸಿಗೆ ಹತ್ತಿಸಿಕೊಂಡ ಹಾಗೆ ಕಾಣುವುದಿಲ್ಲ; ಅವಳು ಬೆಳ್ಳಗಿದ್ದಿದ್ದರೆ ಅವನು ದಾರಿತಪ್ಪುತ್ತಿರಲಿಲ್ಲ ವೆಂಬ ಭರವಸೆಯೇನೂ ಇಲ್ಲ."[10]

ನಮ್ಮಲ್ಲಿ ಇಂಥ ಚಿತ್ತಾಕರ್ಷಕ ವಿಮರ್ಶೆ, ಇಷ್ಟು ವಿಶ್ಲೇಷಾತ್ಮಕವಾಗಿ ಇನ್ನೊಂದು ಕಡೆ ಸುಲಭವಾಗಿ ಸಿಕ್ಕುವುದಿಲ್ಲ. ಒಂದೊಂದು ಮಾತಿನಲ್ಲಿ, ಸೂಕ್ತಿರೂಪ ವಾಕ್ಯದಲ್ಲಿ ಶಾಸ್ತ್ರಿಗಳು ಒಂದು ಪೂರ್ಣ ಪ್ರಪಂಚವನ್ನೇ ತೋರಬಲ್ಲರು. ಭವಭೂತಿಯನ್ನು ವಿಮರ್ಶಿಸುವಾಗ, ಸೀತೆಯ ಪಾತ್ರದ ವಿಚಾರಮಾಡುತ್ತಾ ಹೇಳುತ್ತಾರೆ: "ಆದರೆ ಸೀತೆಯ ಪಾಲಿಗೆ ಬಂದದ್ದೇನು?– ಕಾಡು, ದೂರು, ದುಃಖ."[11] ಸೀತೆಯ ದೌರ್ಭಾಗ್ಯವನ್ನು, ರಾಮಾಯಣದ ತಿರುಳನ್ನು ಇದಕ್ಕಿಂತ ಸಂಕ್ಷಿಪ್ತವಾಗಿ ಪರಿಣಾಮಕಾರಿಯಾಗಿ ಹೇಳುವುದು ಸಾಧ್ಯವೇ ಇಲ್ಲ. ಕಾಡು, ದೂರು, ದುಃಖ—ಸೀತೆಯ ಪಾತ್ರದ ಮೂಲಕವಾಗಿ ಪ್ರಕಟವಾಗುವ ರಾಮಾಯಣದ ಮೂರು ಮಜಲುಗಳು. 'ಮೃಚ್ಛಕಟಿಕ'ದ ಕಥೆಯ ಸಾರಾಂಶ ಕೊಡುವಾಗ ಕೊನೆಯ ಮಾತು: "ವೇಶ್ಯೆಯಾಗಿದ್ದ

---

9 ಅದೇ, ಪು. ೭೬–೭೭

10 ಅದೇ, ಪು. ೭೫–೭೬

11 ಸಂಸ್ಕೃತನಾಟಕ, ಪು. ೨೨೬

ವಸಂತಸೇನೆ 'ವಧು'ವಾಗುವಳು."[12]

ಇದೇ ಬಗೆಯಲ್ಲಿ ಶಾಸ್ತ್ರಿಗಳು ಪಾತ್ರಗಳ ಅಂತರಂಗ ಬಹಿರಂಗಗಳೆರಡನ್ನೂ ತೆಗೆದಿಡುವ ರೀತಿ ಆಶ್ಚರ್ಯಕರವಾದುದು. ಅವರ ಹೋಲಿಕೆಗಳು ದೃಷ್ಟಾಂತಗಳು ನಿರಾಭರಣವಾದರೂ ಅಸಾಮಾನ್ಯವಾದುವು. 'ಕೃಷ್ಣಕಾಂತನ ಉಯಿಲಿ'ನ ಎರಡು ಪಾತ್ರಗಳ ಬಗೆಗೆ ಅವರು ಹೇಳುವುದು : "ಕುಂದೆ ಭೀರು, ಸಾಧು ; ರೋಹಿಣಿಯು ಧೃಷ್ಟೆ ; ಅವಳು ಹುಲಿ-ಹೆಣ್ಣು ಹುಲಿ ; ಗೋವಿಂದಲಾಲನು ಎತ್ತು."[13] ಕಾಳಿದಾಸನ ಪಾತ್ರಗಳನ್ನು ಅವರು ವರ್ಣಿಸಿರುವುದು : "ಇರಾವತಿ, ಕೋಪ ಮಾತ್ಸರ್ಯಗಳ ಮುದ್ದೆಯಾದ ಹುಳಿಗಾಯಿ ; ಧಾರಿಣೀ ಔಶೀನರೀ ದೇವಿಯರು ವಿಧಿಯಿಲ್ಲದೆ ಬಂದಾಗ ಗಂಡನೊಡನೆ ಹೇಗೋ ಹಾಗೆ ಸಮಾಧಾನ ಮಾಡಿಕೊಂಡಿದ್ದ ದೋರಹಣ್ಣುಗಳು ; ಶಕುಂತಲೆ ಪತಿಗೋಸ್ಕರ ಪೂರ್ಣ ಸ್ವಾರ್ಥ ತ್ಯಾಗಮಾಡಿದ ಮೃದು ಮಧುರವಾದ ಅಖಂಡ ಪುಣ್ಯಫಲ."[14] 'ವಿಷವೃಕ್ಷ'ದ ಹೀರೆಯನ್ನು ಕುರಿತು ಶಾಸ್ತ್ರಿಗಳ ವ್ಯಾಖ್ಯಾನ: "ಹೀರೆಯು ತರುಣ ವಯಸ್ಸಿನ ಹೆಂಗಸಾದರೂ (ವಯಸ್ಸು ೨೦) ವಿಧವೆಯಾದರೂ ಅವಳು ವಿಷವೃಕ್ಷದ ಬೆಳವಣಿಗೆಗೆ ಹದವಾದ ಕ್ಷೇತ್ರವಾಗಿದ್ದಳು."[15] ಇದು ವಾಸವದತ್ತೆಯ ವರ್ಣನೆ: "ರತ್ನಾವಳಿಯ ವಾಸವದತ್ತೆಯು ಮುಂಗೋಪದ ಮುದ್ದೆ."[16]

ಕೆಲವೊಮ್ಮೆ ಆಡುಮಾತುಗಳ ಬಳಕೆಯಿಂದ ನಿತ್ಯಸಂಗತಿಗಳಿಂದ ಶಾಸ್ತ್ರಿಗಳು ತಮ್ಮ ಶೈಲಿಗೆ ಒಂದು ಬಗೆಯ ಆತ್ಮೀಯತೆಯನ್ನು ತಂದುಕೊಡುತ್ತಾರೆ. 'ಸ್ವಪ್ನವಾಸವದತ್ತ'ದ ಪದ್ಮಾವತಿಯ ಗುಣಗಳನ್ನು ಹೇಳುತ್ತಾ ಅವರು ಬರೆದಿರುವುದು : "ಅವಳಲ್ಲಿ ಜೋರಿಲ್ಲ, ಜಬರುದಸ್ತಿಲ್ಲ, ಮುಂದಾಳುತನ ವಿಲ್ಲ."[17] 'ಮಾಳವಿಕಾಗ್ನಿಮಿತ್ರ'ದ ಆವರಣವನ್ನು ಕುರಿತು ಅವರು

---

[12] ಅದೇ, ಪು. ೧೧೫

[13] ಬಂಕಿಮಚಂದ್ರ, ಪು. ೮೨

[14] ಸಂಸ್ಕೃತನಾಟಕ, ಪು. ೧೫೪

[15] ಬಂಕಿಮಚಂದ್ರ, ಪು. ೫೮

[16] ಭಾಸಕವಿ, ಪು. ೬೪

[17] ಅದೇ, ಪು. ೪೮

ಹೇಳುವುದು: "ಕಥೆ ನಡೆಯುವುದು ರಾಜನ ಅಂತಃಪುರ; ಅಲ್ಲಿ ಒಂದು ಸ್ತ್ರೀಮಲೆಯಾಳ...."[18] ಭಾಸನನ್ನು ವಿಮರ್ಶಿಸುತ್ತಾ ಒಂದುಕಡೆ ಅವರು ಬರೆದಿರುವುದು: "ಶ್ರೀ ರಾಮನ ಯೌವರಾಜ್ಯಪಟ್ಟಾಭಿಷೇಕ ಮಹೋತ್ಸವದಲ್ಲಿ ಸಂಭ್ರಮದಿಂದ ಮೈಮರೆತು ದುಡುದುಡನೆ ಓಡಿಯಾಡುತ್ತಿರುವ ಪ್ರತೀಹಾರಿಯ ಈ ಚಿತ್ರವನ್ನು ನೋಡಿ."[19] —ಇಲ್ಲಿ ಜಬರುದಸ್ತು, ಸ್ತ್ರೀ ಮಲೆಯಾಳ, ದುಡುದುಡನೆ ಈ ಪ್ರಯೋಗಗಳು ಬರವಣಿಗೆಯಲ್ಲಿ ಎದ್ದು ಕಾಣಿಸಿಕೊಂಡು, ಹೊಸತಿರುವನ್ನೇ ಕೊಡುತ್ತವೆ.

ಶಾಸ್ತ್ರಿಗಳು ತಮ್ಮ ಹೋಲಿಕೆಗಳಲ್ಲಿ ಅನಿರೀಕ್ಷಿತವಾದ ಸ್ವಾರಸ್ಯವಾದ ಸಂಬಂಧವನ್ನು ಕುದುರಿಸುವುದರಲ್ಲಿ ಗಟ್ಟಿಗರು. ಒಂದು ಉದಾಹರಣೆ ಸಾಕು: "ಕೆಲವು ವೇಳೆ, ಪರೀಕ್ಷೆಗೆ ಹೋಗಿದ್ದ ಯುವಕರಿಗೆ ಇತ್ತಕಡೆ ಮದುವೆಯೋ ಪುತ್ರೋತ್ಸವವೋ ಆಗುವುದು, ಅತ್ತಕಡೆ ಪರೀಕ್ಷೆಯಲ್ಲಿ ತೇರ್ಗಡೆಯಾಯಿತೆಂಬ ವರ್ತಮಾನವೂ ಬರುವುದು. ಹಾಗೇ ವತ್ಸರಾಜನಿಗೂ, ಆರನೆಯ ಅಂಕದಲ್ಲಿ, ಅತ್ತಕಡೆ ಕೈತಪ್ಪಿಹೋದ ಹೊಸ ರಾಜ್ಯವೂ ದೊರಕುವುದು, ಇತ್ತಕಡೆ ಕಳೆದುಕೊಂಡ ಹೆಂಡತಿಯೂ ಕೈಸೇರುವಳು."[20]

ಎಷ್ಟೇ ಕಷ್ಟವಾದ, ಸಂಕೀರ್ಣವಾದ ವಿಷಯವನ್ನಾದರೂ ಕೃಷ್ಣಶಾಸ್ತ್ರಿಗಳು ಸರಳವಾಗಿ, ಸುಲಭವಾಗಿ ಹಿಡಿಮಾತಿನಲ್ಲಿ ವಿವರಿಸಬಲ್ಲರು. ತಮ್ಮ ವಿಚಾರಧಾರೆಯನ್ನು ಒಪ್ಪದವರ ಮನಸ್ಸನ್ನೂ ಅವರು ಆಕರ್ಷಿಸುತ್ತಾರೆ. ಅವರ ವಿವರಣೆ, ವಿಶ್ಲೇಷಣೆ, ವಾದ ಸರಣಿಗಳೂ ಎದುರಾಳಿಗಳನ್ನೂ ಸ್ತಬ್ಧಗೊಳಿಸುತ್ತವೆ. ಸಂದರ್ಭ ಬಂದರೆ ಕಟಕಿ, ವ್ಯಂಗ್ಯಗಳನ್ನೂ ಶಾಸ್ತ್ರಿಗಳು ಸಮರ್ಪಕವಾಗಿ ಬಳಸುತ್ತಾರೆ. ವಿಸ್ತಾರವಾದ ಲೋಕಾನುಭವ, ಆಳವಾದ ಪಾಂಡಿತ್ಯ, ಪ್ರಖರವಾದ ಪ್ರತಿಭೆ ಅವರಲ್ಲಿ ಮುಪ್ಪುರಿಗೊಂಡಿರುವುದರಿಂದ ಅವರ ಬರವಣಿಗೆಗೆ ಒಂದು ವ್ಯಾಪಕತೆಯಿದೆ. ಅದರಲ್ಲಿ ಬಿಗಿಯಿದೆ, ಬನಿಯಿದೆ. ತಪಸ್ಸಿನಿಂದ ಸಿದ್ಧಿಸಬಲ್ಲ ಕಾಂತಿಯಿದೆ.

ಕೃಷ್ಣಶಾಸ್ತ್ರಿಗಳ ಗದ್ಯ ಕಲೆಯೂ ಹೌದು; ಕೌಶಲವೂ ಹೌದು. ಸ್ಪಷ್ಟತೆ

---

18 ಸಂಸ್ಕೃತನಾಟಕ, ಪು. ೧೩೨

19 ಅದೇ, ಪು. ೮೩

20 ಭಾಸಕವಿ, ಪು. ೬೨

ಖಚಿತತೆ ಅವರ ಶೈಲಿಯ ಪ್ರಧಾನ ಲಕ್ಷಣಗಳು. ಅದರಲ್ಲಿ ಬೆಡಗಿಲ್ಲ ಬಿನ್ನಾಣವಿಲ್ಲ; ಹಾಗೆಂದು ಕುರೂಪ, ಅವಲಕ್ಷಣಗಳು ತಲೆ ಹಾಕಿಲ್ಲ. ಅಹಿಂಸೆಯನ್ನು ಕುರಿತ ಅವರ ವ್ಯಾಖ್ಯಾನ ಅವರ ಬರವಣಿಗೆಯ ಅತ್ಯುತ್ತಮ ಮಾದರಿಗೆ ಒಂದು ನಿದರ್ಶನ:

"ಸತ್ವಗುಣವೆಂದರೆ ಅಕರ್ಮವಲ್ಲ, ನಿರ್ವೀರ್ಯತೆಯೂ ಅಲ್ಲ. ಅಹಿಂಸೆಯೂ ಅಷ್ಟೇ....ಅಹಿಂಸೆಯೆಂಬುದು ಅಪರಂಜಿಯ ಹಾಗೆ; ಶುದ್ಧ ಅಪರಂಜಿ ನಾಣ್ಯವಾಗುವುದಿಲ್ಲ; ವ್ಯವಹಾರಕ್ಕೆ ಸಲ್ಲುವುದಿಲ್ಲ; ಅದಕ್ಕೆ ಸ್ವಲ್ಪವಾದರೂ ಪೆಡಸಾದ ಕೆಚ್ಚನೆಯ ತಾಮ್ರ ಬೆರೆಯಬೇಕು. ಹಾಗೆಯೇ ರಾಜನಲ್ಲಿ ಸ್ವಲ್ಪ ಕಾಠಿಣ್ಯಬೇಕು....ದುಷ್ಟ ನಿಗ್ರಹಕ್ಕೆ ಕ್ರೌರ್ಯವೂ ಬೇಕು, ಹಿಂಸೆಯೂ ಬೇಕು. ಆ ಹಿಂಸೆ ಹಿಂಸೆಯಲ್ಲ, ಧರ್ಮ. ರಾಮರಾಜ್ಯದಲ್ಲಿಯೂ ರಾಕ್ಷಸ ಸಂಹಾರವಾಗಿಯೇ ಆಯಿತು. ಸ್ವಾರ್ಥಸಾಧನೆಗೆ ದೇಶದ ಯುವಕರನ್ನು ಬಲಿ ಕೊಡುವುದು ಹಿಂಸೆಯೇ ಹೊರತು, ಶಿಷ್ಯಪರಿಪಾಲನಕ್ಕೆ ಹಿಂಸಾಕ್ರೌರ್ಯಗಳನ್ನು ಆಚರಿಸುವುದು ಪಾಪವಲ್ಲ. ಆದ್ದರಿಂದ, ಹಿಂಸಾಕಾರ್ಯಕ್ಕಿಂತಲೂ ಅದರ ಹಿಂದೆ ಇರುವ ಉದ್ದೇಶವೇ ಪ್ರಧಾನ....ಹಸುವಿನಿಂದ ಹಾಲು ಕರೆದುಕೊಳ್ಳಬೇಕಾದರೂ ಅಲ್ಪ ಸ್ವಲ್ಪ ಹಿಂಸೆ ಮಾಡಲೇಬೇಕಾಗುತ್ತದೆ....ಅಹಿಂಸೆಯೆಂದರೆ ಕ್ರೌರ್ಯವಿಲ್ಲದಿರುವುದು; ನಿಸ್ತೇಜತೆಯಲ್ಲ; ತಮೋಗುಣವಲ್ಲ; ಎಷ್ಟಾದರೂ ತಗ್ಗಿ ಬಗ್ಗಿ ನಡೆಯುವುದಲ್ಲ. ತಗ್ಗುತ್ತಾ ಹೋದರೆ ನೆಲದೊಳಗೆ ಐಕ್ಯವಾಗುವುದೇ ಗತಿ."[21]

* * *

ನಮ್ಮ ಗದ್ಯಶಿಲ್ಪಿಗಳಲ್ಲಿ ಒಬ್ಬರಾಗಿ ಕೃಷ್ಣಶಾಸ್ತ್ರಿಗಳು ಕನ್ನಡ ಗದ್ಯಕ್ಕೆ ಒಂದು ಹೊಸ ಮಾದರಿಯನ್ನೇ ನಿರ್ಮಿಸಿಕೊಟ್ಟರು; ಅದಕ್ಕೆ ಅಗತ್ಯವಾದ ನೆಲೆ—ಬೆಲೆಗಳನ್ನು ಒದಗಿಸಿದರು. ಗದ್ಯದ ಕಾರ್ಯವನ್ನು ವರ್ಣಿಸುತ್ತಾ ಎ.ಸಿ. ವಾರ್ಡ್, ಅದು ಮೂರು ಮುಖದ್ದೆಂದು ಹೇಳುತ್ತಾನೆ.[22] ಲೇಖಕನ ಉದ್ದೇಶಿತ ಅರ್ಥವನ್ನು ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸುವುದು; ಭಾಷೆಯನ್ನು

21 ವಚನಭಾರತ, ಪೀಠಿಕೆ, ಪು. ೫೮–೫೯

22 A. C. Ward, ಅದೇ, ಪು. ೨೨

ನಿರ್ದಿಷ್ಟವಾಗಿ ಬಳಸುವುದು; ಸತತ ಆನಂದವನ್ನು ನೀಡುವುದು—ಇವೇ ಗದ್ಯದ ಆ ಮೂರು ಮುಖಗಳು. ಕೃಷ್ಣಶಾಸ್ತ್ರಿಗಳ ಗದ್ಯ ಈ ಒಂದೊಂದಕ್ಕೂ ಅತ್ಯುತ್ತಮ ಮಾದರಿಯಾಗಿವೆ. ಕಷ್ಟವಿಲ್ಲದೆ, ಕೃತಕತೆಯಿಲ್ಲದೆ, ಪಾಂಡಿತ್ಯದ ಭಾರಹೇರದೆ, ಅವರಂತೆ ಗದ್ಯ ಬರೆಯಬಲ್ಲ ಲೇಖಕರು ಯಾವ ಭಾಷೆಯಲ್ಲಾದರೂ ವಿರಳವೇ.

ಇಂಗ್ಲಿಷ್ ಕಾದಂಬರಿಕಾರನೊಬ್ಬನ ಗದ್ಯವನ್ನು ಕುರಿತು ವಿಮರ್ಶಿಸುತ್ತಾ ಅಂಥೊನಿ ಟ್ರೊಲೊಪ್ ಒಂದು ಮಾತು ಹೇಳಿದ್ದಾನೆ:

The reader, without labour, knows what he means, and knows all that he means.[23]

ಕೃಷ್ಣಶಾಸ್ತ್ರಿಗಳು ನಿರ್ಮಿಸಿರುವ ಗದ್ಯಶಿಲ್ಪದ ಮಹತ್ವದ ಗುಟ್ಟಾದರೂ ಇಲ್ಲೇ ಅಡಗಿದೆ.

---

[23] Frederick Page (ed.), *An Autobiography*, ಪು. ೨೪೪

# 'ಕಿಂಕಿಣಿ'ಯನ್ನು ಕುರಿತು

## ೧

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಅವರ ಮಾಂತ್ರಿಕ ಲೇಖನಿ ಅಲಂಕರಿಸದ ಸಾಹಿತ್ಯ ಪ್ರಕಾರವಿಲ್ಲ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಹೆಚ್ಚು ಕಡಮೆ ಒಂದೇ ಬಗೆಯಾದ ಯಶಸ್ಸನ್ನು ಗಳಿಸಿದ ಲೇಖಕರು ಯಾವುದೇ ಭಾಷೆಯಲ್ಲಾದರೂ ಹೆಚ್ಚಾಗಿ ಸಿಕ್ಕುವುದಿಲ್ಲ. ಈ ಬಗೆಯ ವಿರಳರ ಪಂಙ್ಕ್ತಿಯಲ್ಲಿ ಕನ್ನಡದ ಕುವೆಂಪು ಒಬ್ಬರಿರುವುದು ಅಭಿಮಾನದ ಸಂಗತಿ. ಸಾಹಿತ್ಯದ ಬಗೆ ಬಗೆಯ ಪ್ರಕಾರಗಳಿರಲಿ, ಕಾವ್ಯವೊಂದನ್ನೇ ತೆಗೆದು ಕೊಂಡರೂ ಕೂಡ ಅದರ ವೈವಿಧ್ಯ ವಿಪುಲ; ರಾಶಿ, ವಿಸ್ತಾರ. ವಸ್ತು, ರೀತಿ, ಛಂದಸ್ಸು, ಪ್ರಯೋಗ, ಉದ್ದೇಶ—ಯಾವುದರ ನಿರ್ವಹಣೆಯಲ್ಲಾದರೂ ಕುವೆಂಪು ಕಾವ್ಯವನದಲ್ಲಿ ಕೂಗುವ ಕೋಗಿಲೆಗಳು ಹಲವು. ನಿಸರ್ಗ ಸಹಜಗತಿಯಿಂದ ಕಾಲ ಕಾಲಕ್ಕೆ ವರ್ಣವೈವಿಧ್ಯವನ್ನು ನೀಡಿರುವಂತೆ, ಪ್ರತಿಭಾವಂತನಾದ ಕವಿ ತನ್ನ ಸೃಷ್ಟಿಯಲ್ಲಿ ಏಕನಾದದ ಬೇಸರಿಕೆಗೆ ಆಸ್ಪದ ಕೊಡುವುದಿಲ್ಲ. ತಮ್ಮ ಕಾವ್ಯಸೃಷ್ಟಿಯಲ್ಲಿ ಕುವೆಂಪು 'ಭೂಮ'ದೊಡನೆ 'ಬಹುವಿಧ'ಗಳನ್ನೂ ಬಿಡಿಸಿದ್ದಾರೆ. 'ಬೊಮ್ಮನಹಳ್ಳಿಯ ಕಿಂದರಿಜೋಗಿ'ಯಿಂದ 'ರಾಮಾಯಣದರ್ಶನ'ದ ದಿವ್ಯಶಿಲ್ಪಿಯವರೆಗಿನ ದಾರಿ ದೀರ್ಘವಾದುದು. ನವಿಲು-ಅಗ್ನಿಹಂಸ, ಕೊಳಲು-ಪಾಂಚಜನ್ಯ, ಅನಿಕೇತನ-ಪ್ರೇಮಕಾಶ್ಮೀರ ಮುಂತಾದ ಅವರ ದ್ವಂದ್ವಗಳ ರಹಸ್ಯವಾದರೂ ಪ್ರಕೃತಿಯ ನಿಗೂಢತೆಯ ಸಹಜ ಭಾಗವೇ ಆಗಿದೆ. ಪೂರ್ಣದೃಷ್ಟಿಯು ಅವರ ಕಾವ್ಯದ ಆಸ್ವಾದನೆಯಲ್ಲಿ ಇದಕ್ಕೆ ಉತ್ತರ ಪಡೆಯುವುದು ಕಷ್ಟವಲ್ಲ.

ತಮ್ಮ ನಾನಾ ಬಗೆಯ ಕಾವ್ಯ ಪ್ರಯೋಗಗಳಲ್ಲಿ ಕುವೆಂಪು ಅವರು ವಚನಗಳನ್ನೂ ರಚಿಸಿದ್ದಾರೆ. 'ಕಿಂಕಿಣಿ' ಎಂಬ ಕೃತಿಯಲ್ಲಿ ಅರುವತ್ತು ವಚನಗಳು ಸಂಕಲಿತವಾಗಿವೆ. ೧೯೪೬ರಲ್ಲಿ ಪ್ರಕಟವಾದ ಈ ಕೃತಿ ಮತ್ತೆ ೧೯೬೪ರಲ್ಲಿ ಅಚ್ಚಾಗಿದೆ. ಶುದ್ಧ ಕಾವ್ಯದ ದೃಷ್ಟಿಯಿಂದ ಈ ವಚನಗಳು ಕುವೆಂಪು ಅವರ ಉಳಿದ ಯಾವ ಕೃತಿಗಳಿಗೂ ಎರಡನೆಯವಲ್ಲ. ಆದರೂ ಅವರ ಬೇರೆ

ಬೇರೆ ಕೃತಿಗಳಿಗೆ ಸಿಕ್ಕಿರುವ ವಿಮರ್ಶಕರ ಸ್ವಾಗತ, ಮನ್ನಣೆ 'ಕಿಂಕಿಣಿ'ಗೆ ದೊರೆಯದಿರುವುದು ಆಶ್ಚರ್ಯದ ಮಾತು. ಕುವೆಂಪು ಅವರ ಕಾವ್ಯವನ್ನು ವಿವರವಾಗಿ ಪರಿಶೀಲಿಸಿರುವ ಲೇಖಕರು ಕೂಡ 'ಕಿಂಕಿಣಿ'ಯ ಹೆಸರನ್ನು ಉದ್ಧರಿಸಿರುವುದು—ಕೇವಲ ಒಂದೊ ಎರಡೊ ಸಂದರ್ಭಗಳನ್ನುಳಿದು—ನನ್ನ ಗಮನಕ್ಕೆ ಬಂದಿಲ್ಲ. ಹೀಗೆ ಅನ್ಯಾಯವಾದ ಅನಾದರಕ್ಕೆ ಒಳಗಾದ ಈ ಕೃತಿಯ ಕಡೆಗೆ ಗಮನ ಸೆಳೆಯುವುದೇ ಈ ಚಿಕ್ಕ ಲೇಖನದ ಉದ್ದೇಶ.

೨

ಕನ್ನಡ ಸಾಹಿತ್ಯದ ವಿವಿಧತೆಗೆ ಸೊಗಸನ್ನೂ, ಕಾಂತಿಯನ್ನೂ ಜೋಡಿಸಿದ ಸಾಹಿತ್ಯ ಪ್ರಕಾರವೆಂದರೆ 'ವಚನ'ಗಳದು. ಬೇರೆ ಕಡೆ ಈ ಬಗೆಯ ಬರವಣಿಗೆಗೆ ಅಲ್ಲೊಂದು ಇಲ್ಲೊಂದು ಉದಾಹರಣೆಗಳನ್ನು ನೋಡಬಹುದಾದರೂ[1] ವಚನಗಳು ಕನ್ನಡ ಸಾಹಿತ್ಯದ ವೈಶಿಷ್ಟ್ಯವೆಂದೇ ಹೇಳುವುದು ತಪ್ಪಾಗಲಾರದು. ಗದ್ಯಪದ್ಯಗಳು ಸಂಲಗ್ನಗೊಂಡಿರುವ ವಚನಗಳು ಹನ್ನೆರಡನೆಯ ಶತಮಾನದಲ್ಲಿ ತಲೆಯೆತ್ತಿ, ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಒಂದು ಸಮೃದ್ಧ ಮರುವನವನ್ನು ಸೃಜಿಸಿ, ಮೊದಲಿನ ಹೊಳಪನ್ನು ಏಕ ಪ್ರಕಾರವಾಗಿ ಕಾಯ್ದಿಟ್ಟುಕೊಳ್ಳಲಾರದಿದ್ದರೂ, ಕಣ್ಮರೆಯಾಗದೆ ಹದಿನೈದು ಹದಿನಾರನೆ ಶತಮಾನಗಳಲ್ಲಿ ಮತ್ತೊಮ್ಮೆ ತಲೆಯೆತ್ತಿ ಮುಂದೆ ಬಹುಕಾಲ ಸುದ್ದಿಯಿಲ್ಲದೆ, ಇನ್ನೊಮ್ಮೆ ಇಂದು ಆಧುನಿಕ ಸಾಹಿತ್ಯದಲ್ಲಿ ತಮ್ಮ ಸ್ಥಾನ ಪಡೆದುಕೊಳ್ಳುವ ಹವಣಿಕೆಯಲ್ಲಿವೆ. ನಮ್ಮ ಗಮನಕ್ಕೆ ಬಂದಹಾಗೆ ಸುಮಾರು ಮೂವತ್ತು ಜನ ಆಧುನಿಕ ಲೇಖಕರು ವಚನಗಳನ್ನು ರಚಿಸಿದ್ದು ಅವರಲ್ಲಿ ಹದಿನೆಂಟು ಜನರು ತಮ್ಮ ವಚನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ.[2] ವಚನಗಳಲ್ಲಿ ಮಿಂಚಿನ ಹೊಳಪಿದೆ; ಗುಡುಗಿನ ಆರ್ಭಟವಿಲ್ಲ. ನದಿಯ

---

[1] ಉದಾಹರಣೆಗೆ ರವೀಂದ್ರನಾಥ ಠಾಕೂರ್, ವಾಲ್ಟ್ ವಿಟ್‌ಮನ್ ಮೊದಲಾದವರ ಬರವಣಿಗೆಗಳನ್ನು ನೆನಪಿಸಿಕೊಳ್ಳಬಹುದು.

[2] ಆಧುನಿಕ ಲೇಖಕರ ವಚನಗಳ ಆಯ್ದ ಸಂಗ್ರಹವೊಂದನ್ನು ಈ ಲೇಖಕ 'ವಚನ ವಿಲಾಸ' ಎಂಬ ಹೆಸರಿನಲ್ಲಿ ಸಿದ್ಧಗೊಳಿಸಿದ್ದು ಅದು ಇಷ್ಟರಲ್ಲಿಯೇ ಪ್ರಕಟವಾಗಲಿದೆ. ಅದರ ಪೀಠಿಕೆಯಲ್ಲಿ ಸಮಕಾಲೀನರ ವಚನ ಸಾಹಿತ್ಯದ ವಿಸ್ತೃತವಾದ ಪರಿಚಯ, ವಿಮರ್ಶೆ ದೊರೆಯುತ್ತವೆ.

ಕಲರವವಿದೆ; ಕಡಲಿನ ಘೋಷವಿಲ್ಲ. ಮಹದ್ಭಾವಗಳನ್ನು ವಚನಗಳಲ್ಲಿ ಅಭಿವ್ಯಕ್ತಗೊಳಿಸಿರುವ ಹಾಗೆ ಅಷ್ಟು ಸುಲಭವಾಗಿ, ಪರಿಣಾಮಕಾರಿಯಾಗಿ, ಆಶ್ಚರ್ಯಕರ ರೀತಿಯಲ್ಲಿ ಪ್ರಕಟಪಡಿಸಿರುವ ಇನ್ನೊಂದು ಸಾಹಿತ್ಯ ರೂಪವನ್ನು ನಾನು ಕಾಣೆ. ಭಾರತೀಯ ಆಂಗ್ಲ ಲೇಖಕರಲ್ಲಿ ಅಗ್ರಗಣ್ಯರಾದ ಶ್ರೀ ರಾಜಾರಾಯರು ಈಚೆಗೆ ಒಮ್ಮೆ ಮಾತನಾಡುತ್ತಾ ಫ್ರೆಂಚ್ ಭಾಷೆಯ ಅತಿಪ್ರಸಿದ್ಧವಾದ ಬಾಗುಬಳುಕಿನ ನಮ್ಯ ಲಕ್ಷಣವನ್ನು ತಾವು ಕನ್ನಡದ ವಚನಗಳ ಭಾಷೆಯಲ್ಲಿ ವಿನಾ ಬೇರೆಲ್ಲಿಯೂ ಕಂಡಿಲ್ಲವೆಂದು ಹೇಳಿದರು. ನೆಲದ ಮರೆಯ ನಿಧಾನದಂತೆ ವಚನ ವಾಙ್ಮಯದ ಭಾವ ಸಮೃದ್ಧ. ಮೇಲುನೋಟಕ್ಕೆ ಅವು ಸರಳ, ಸಾಮಾನ್ಯ; ಬೆದಕಿದಷ್ಟೂ ಸಫಲ, ಸಂಕೀರ್ಣ.

ಕುವೆಂಪು ಅವರ ವಚನಗಳು ಸಂಪ್ರದಾಯದ ವಚನಗಳ ಪಡಿಸೆಳಲಲ್ಲ. ಛಂದಸ್ಸಿನ ನಿಯಮಗಳು ಶಾಸ್ತ್ರಬದ್ಧ ಕವಿತೆಯ ದೃಷ್ಟಿಯಿಂದ ಸಡಲಿರುವುದೊಂದರ ವಿನಾ ಮಿಕ್ಕೆಲ್ಲ ರೀತಿಗಳಿಂದಲೂ ಅವು ಅವರ ರಸಸ್ಯಂದಿ ಭಾವಗೀತೆಗಳೆ.

೩

ಕುವೆಂಪು ಅವರು ಪ್ರಧಾನವಾಗಿ ನಿಸರ್ಗದ ಕವಿಗಳು. ನಿಸರ್ಗದ ರಮಣೀಯತೆಯನ್ನೂ ರೌದ್ರವನ್ನೂ ಕಂಡು ಅವರು ಭಾವಾವೇಶದಿಂದ ಬರಿದೆ ಕುಣಿದಾಡುವುದಿಲ್ಲ. ಹಾಹಾಕಾರವೆಬ್ಬಿಸುವುದಿಲ್ಲ. ಅದೆಲ್ಲವೂ ದಿವ್ಯಶಕ್ತಿಯ ಅನಂತಕೃಪೆಯೆಂಬುದನ್ನು ಅವರು ಬಲ್ಲರು. ಅವುಗಳ ರಹಸ್ಯವನ್ನು ಭೇದಿಸುವುದರಲ್ಲಿ ಅವರಿಗೆ ಆಸಕ್ತಿಯಿದೆ. ಲೋಕದಲ್ಲಿ ಅವರಿಗೆ ಜಡವೆಂಬುದಿಲ್ಲ. ಜಡವೆನ್ನುವುದೆಲ್ಲ ಚೇತನದ ನಟನೆಯ ಲೀಲೆ ಎನ್ನುವುದು ಅವರ ದರ್ಶನ. ಬಿಡಿ ಎನ್ನುವುದು ಅವರ ದೃಷ್ಟಿಯಲ್ಲಿ ಯಾವುದೂ ಇಲ್ಲ. ಪ್ರತಿಯೊಂದೂ ಸಮಷ್ಟಿಯ ಒಂದು ಭಾಗ ಎಂಬ ಪೂರ್ಣದೃಷ್ಟಿ ಅವರ ಕಾಣ್ಕೆ. ಫಲವಾಗಿ ಎಲ್ಲ ಲೀಲೆಗಳೂ ಒಂದು ನಿತ್ಯದಲ್ಲಿ ಲೀನವಾಗುವುದು ಅನಿವಾರ್ಯ. ಕವಿಯಾದರೂ ಸಾಫಲ್ಯ ಪಡೆಯಬೇಕಾದರೆ ತನ್ನ ವಸ್ತುವಿನಲ್ಲಿ ಬೆರೆತು ಹೋಗುತ್ತಾನೆ. ಅಂತೆಯೇ ಅವರು ಒಂದು ಕಡೆ ಹಾಡುತ್ತಾರೆ: "ಗಗನವನು

ನೋಡು ನೀ ನೀಲಿಗಟ್ಟುವವರೆಗೆ." ಗಗನವನ್ನು ನೋಡುವವನು ನೀಲಿಗಟ್ಟಿ ಲಯವಾಗದಿದ್ದರೆ ಅವನು ಗಗನದಲ್ಲಿ ಏನನ್ನು ಕಂಡಾನು ?

ಲೀಲಾಂಶವು ನಿತ್ಯಾಂಶದ ಭಾಗವೆಂಬ ಅದ್ವೈತಸ್ಥಿತಿ ಮೂಲತಃ ಅನುಭಾವ ಪ್ರಜ್ಞೆ. ಕವಿ ಅದನ್ನು ತನ್ನದನ್ನಾಗಿ ಮಾಡಿಕೊಳ್ಳುವ ಎಷ್ಟೋ ಸಂದರ್ಭಗಳಲ್ಲಿ ಕಾವ್ಯವನ್ನು ಕೈಬಿಟ್ಟು ಅನುಭಾವವನ್ನೇ ಬಲವಾಗಿ ಹಿಡಿದುಕೊಳ್ಳುವ ಅಪಾಯವುಂಟು. ಸೂರ್ಯೋದಯ, ಚಂದ್ರೋದಯಗಳೂ ದೇವರ ದಯೆಯೆಂದು ಪರಿಭಾವಿಸಿರುವ ಕುವೆಂಪು ಶಿವನಿಲ್ಲದ ಸೌಂದರ್ಯವನ್ನು ಶವಮುಖದ ಕಣ್ಣೆಂದು ತಿರಸ್ಕರಿಸುತ್ತಾರೆ. ಅಂಥ ನಿಷ್ಠೆ ಅವರದಾಗಿದ್ದರೂ ಅವರ ಸೃಷ್ಟಿ ನೀತಿಸೂತ್ರವಲ್ಲ; ಏಕೆಂದರೆ ಅವರು ರಸಯೋಗಿ. ಸತ್ಯವನ್ನು ಕುರಿತ ಜಿಜ್ಞಾಸೆ, ಅದರ ಸಾಕ್ಷಾತ್ಕಾರಗಳಲ್ಲಿಯೇ ಕುವೆಂಪು ದರ್ಶನದ ಕೊನೆಯಿಲ್ಲ. ಈ ಅನುಭೂತಿಯನ್ನು ಅಭಿವ್ಯಕ್ತಗೊಳಿಸುವುದರಲ್ಲಿಯೇ ಸೌಂದರ್ಯಲೇಪನಗೊಳ್ಳುತ್ತದೆ ಅವರ ಸೃಷ್ಟಿ.

ಕಿಂಕಿಣಿನಾದಗೈಯ್ಯುತ್ತಿರುವ ಇಲ್ಲಿನ ಅರುವತ್ತು ವಚನ ಕವನಗಳಲ್ಲಿ ಕವಿಯ ಪ್ರಸನ್ನತೆಯೂ ಅನುಭಾವಿಯ ಆರ್ತತೆಯೂ ಒಟ್ಟಾಗಿ ಬೆಸೆದುಕೊಂಡಿವೆ. ಫಲವಾಗಿ ಶಿವಮಯ ಸೌಂದರ್ಯ ಇಲ್ಲಿ ಮಡುಗಟ್ಟಿದೆ. ಈ ತೀರ್ಥದಲ್ಲಿ ಮಿಂದವನಿಗೆ ಭವದ ಭಯವಿಲ್ಲ. ಇವುಗಳಲ್ಲಿ ಕುವೆಂಪು ನಿಸರ್ಗದ ಸಾರಸರ್ವಸ್ವವನ್ನೂ ಸೆರೆಹಿಡಿದಿದ್ದಾರೆ; ಅದರ ವಿವಿಧ ಸ್ತರಗಳನ್ನು ನಯನ ಮನೋಹರವಾಗಿ ಗುರುತಿಸಿದ್ದಾರೆ. ಈ ಗೀತಗಳಲ್ಲಿ ಪ್ರಕೃತಿಯ ವರ್ಣವೈಭವದೊಂದಿಗೆ ಆತ್ಮಪಕ್ಷಿ ಬಾನೆಡೆಗೇರುವ ಭಗವದನುಸಂಧಾನವೂ ಸೇರಿದೆ. ಈ ಅನುಸಂಧಾನಕ್ಕೆ ಎರಡು ಮೆಟ್ಟಲುಗಳಿವೆ: ಒಂದು ನಿರೀಕ್ಷೆ, ಇನ್ನೊಂದು ಸಮರ್ಪಣೆ. ಸಮಸ್ತ ಪ್ರಕೃತಿಯೂ ಒಂದು ಬಗೆಯ ದಿವ್ಯ ಮಿಥ್ಯೆ. ಲೋಕೈಕ ಶಕ್ತಿಯ ಇರುವಿಕೆಗೊಂದು ಸಾಕ್ಷಿ. ಆದುದರಿಂದ ಭಗವದನುಸಂಧಾನ ಇದನ್ನು ಬಿಟ್ಟಿಲ್ಲ; ಇರಲಾರದು.

ಪ್ರಕೃತಿಯ ಪ್ರತಿಯೊಂದು ಆಗುಹೋಗುಗಳೂ ಭಗವಂತನ ಅಪಾರ ಕರುಣೆಯ ಕಿರಣಗಳು. ಬೈಗುಬೆಳಗುಗಳ ಸೋಜಿಗವಾಗಲಿ, ಸಂಜೆಯ ದಿಬ್ಬಣದ ಸೊಗಸಾಗಲಿ, ಮಂಜಿನ ಅವತಾರವಾಗಲಿ—ಒಂದೊಂದೂ ಇದಕ್ಕೆ ಸಾಕ್ಷಿ. ನಿಸರ್ಗದ ಆಟಗಳೆಲ್ಲ ಭಗವಂತನಿಗೆ ಭೂಮಿಯಮೇಲೆ

ಇರುವ ಪ್ರೇಮದ ಫಲ. ಆಷಾಢದ ಸೂರ್ಯೋದಯ ಇಂಥದ್ದೊಂದು ದಿವ್ಯ ನಿವೇದನೆ. ಮೂಡಣದ ದೆಸೆವೆಣ್ಣು ಹೊಳೆವ ಚಿನ್ನದ ಗಿಂಡಿಯನ್ನು ಕೈಯಲ್ಲಿ ಆಂತು ಬಾನ ಕರೆಯಲ್ಲಿ ನಿಂತು ನಲಿಯುತ್ತಿದ್ದಾಳೆ; ಮೆಲ್ಲನೆ ಎಚ್ಚರವಾಗು ತ್ತಿರುವ ತಿರೆವೆಣ್ಣಿನ ಹಸುರುಡೆಯ ಮೇಲೆ ಹೊನ್ನೀರಿನ ಓಕುಳಿಯನ್ನು ಚಿಮುಕಿಸುತ್ತಿದ್ದಾಳೆ. ತಣ್ಣನೆ ತೀಡುವ ತಂಗಾಳಿಯಲ್ಲಿ ಅತ್ತ ಇತ್ತ ಒಲೆಯು ತ್ತಿರುವ ನೆಲದ ಹಸರು ಇಬ್ಬನಿಯಿಂದ ಕೋದ ಜರತಾರಿಯಂತೆ ಮಿರುಗು ತ್ತಿದೆ. ಕೋಗಿಲೆಯ ಇನಿಗೊರಲಿಂದ ಕಾಮನಬಿಲ್ಲುಗಳು ಹೊರಹೊಮ್ಮು ತ್ತಿವೆ. ಕಿವಿ ಕಣ್ಣಾಗುತ್ತಿದೆ; ದನಿ ಬಣ್ಣವಾಗುತ್ತಿದೆ. ಸಾಕೆ ಈ ರೂಪಾಂತರ? ಆಷಾಢದ ಸೊಗಸು ಇಷ್ಟಕ್ಕೇ ಮುಗಿಯುವುದಿಲ್ಲ. ನೀರೊಡಲ ಮೋಡಗಳು ಕನಸಿನಲ್ಲಿ ತೇಲುತ್ತಿವೆ; ಹಾಡುವ ಹಕ್ಕಿಗಳ ಪರಿಷತ್ತು ನೆರೆದಿದೆ; ಜೋಳದ ಹೊಲಗಳು ಉದಯವನಿತೆಯನ್ನು ಕೈಬೀಸಿ ಕರೆಯುತ್ತಿವೆ. ಇದೆಲ್ಲ ಏನು? ಇದನ್ನು ಕವಿ ಹೇಗೆ ಪರಿಭಾವಿಸುತ್ತಾನೆ?

> ಸ್ವರ್ಗ ತಾನೀ ಪುಣ್ಯ ಸುಂದರ ಆಷಾಢ ಸೂರ್ಯೋದಯವನ್ನು ಪ್ರಾತಃ ಸೂರ್ಯಬಿಂಬದ ಹೊಂಬಟ್ಟಲಲಿ ತುಂಬಿ ಭೂಮಿಗೆ ನಿವೇದಿಸಿದೆ. ಅದಕ್ಕೆ ಇದರಲ್ಲಿರುವ ಪ್ರೇಮದ ಸಾಕ್ಷಿಯಿದು. ಅದರನುರಾಗದ ಇದರುಪಭೋಗದ ಪ್ರತಿನಿಧಿಯಿದು.
>
> ಇದೋ, ನೀನು ಆಷಾಢ ಸೂರ್ಯೋದಯವನು ಚಿನ್ನದ ತಟ್ಟೆಯಲ್ಲಿಟ್ಟು ನನಗೆ ದಾನಮಾಡಿರುವಂತೆ, ನಾನು ನನ್ನನು ನನ್ನ ಪ್ರೇಮದಲ್ಲಿಟ್ಟು ನಿನಗೆ ನಿವೇದಿಸಿಕೊಳ್ಳುವೆ.
>
> ನನ್ನದು ಇದೊಂದೆ ಬಿನ್ನಹ: ನನ್ನನೂ ಒಂದು ಆಷಾಢ ಸೂರ್ಯೋದಯವನ್ನಾಗಿ ಮಾಡಿ ಇನ್ನಾವುದಾದರೊಂದು ಲೋಕದ ಇಂತಹ ರಮಣೀಯ ಪ್ರಾತಃಕಾಲದ ಇಂತಹ ಅತುಲ ಐಶ್ವರ್ಯಕ್ಕೆ ನಿವೇದಿಸುವೆಯಾ? (೨)

ಸಂಕಲನದ ಎರಡನೆಯ ವಚನವಾದ ಈ 'ಆಷಾಢ ಸೂರ್ಯೋದಯ' ಒಂದು ದೃಷ್ಟಿಯಲ್ಲಿ ಇಡೀ ಸಂಕಲನಕ್ಕೆ ಕೀಲಿಕೈನಂತಿದೆ. ಲೋಕದ ಮೇಲೆ ಭಗವಂತನ ಕೃಪೆ ನಿಸರ್ಗರೂಪದಲ್ಲಿ ಮೈದೋರಿದೆ. ಅದಕ್ಕೆ ಪ್ರತಿಯಾಗಿ ಲೋಕ ಕೃತಜ್ಞತೆ ತೋರಬೇಕು. ಈ ಕೃಪೆಯ ಒಂದು ಅಂಶವಾಗುವುದ ರಲ್ಲಿಯೇ ಬದುಕಿನ ಸಕಲ ಸಿದ್ಧಿಗಳೂ ಅಡಗಿವೆ. ಅಂಥ ಸಿದ್ಧಿಗಾಗಿ ಜೀವ

ಹಾತೊರೆಯುತ್ತಿದೆ. ಈ ಭಾವಗಳು ಸಂಕಲನದುದ್ದಕ್ಕೂ ಪುನರಾವರ್ತನ ಗೊಳ್ಳುತ್ತವೆ.

ಈ ವಚನಗಳಲ್ಲಿ ಬರುವ ಪ್ರಕೃತಿ ಚಿತ್ರಗಳು ಅತ್ಯಂತ ಮನೋಹರವಾದವು. ಸಹಜವಾದ ಸ್ವೋಪಜ್ಞವಾದ ಈ ಚಿತ್ರಗಳಲ್ಲಿ ನಮಗೆ ಬೇರೆಲ್ಲಿಯೂ ಒದಗದ ದರ್ಶನಾನುಭವ ದೊರೆಯುತ್ತದೆ. ನಯನಮನೋಜ್ಞವಾದ ಚಿತ್ರಮಾಲೆಗಳು ಕುಶಲ ಮಾಂತ್ರಿಕ ಕುಂಚದಿಂದ ಜೀವಂತಗೊಂಡಿವೆ. ಉಣ್ಣೆಯಂದದ ಬೆಣ್ಣೆಮುಗಿಲು ಮುತ್ತಿದ ಗಿರಿಯ ನೆತ್ತಿ ನೊರೆನೊರೆಯೆದ್ದ ನೀರಿನಲಿ ಮೀಯಲೆಂದು ಮುಳುಗಿರುವ ಮದ್ದಾನೆಯ ಮೈತುದಿಯಂತೆ ಕವಿಗೆ ಶರತ್ಕಾಲದ ಪ್ರಾತಃಕಾಲವೊಂದು ಕಾಣಿಸುತ್ತದೆ (೫೮). ಬಾನಿನಿಂದ ಬುವಿಗಿಳಿದ ಬೆಳುದಿಂಗಳು "ಹಸುರು ಮೊಟ್ಟೆಯ ಮೇಲೆ ಕಾವು ಕೂರುವ ಚಿನ್ನದ ಹಕ್ಕಿ" (೯). "ಹರಿದು ಹರಿದು ಸೋತು ನಿಂತಹೊಳೆ; ತೆರೆಗಳಿಲ್ಲದ ನಿದ್ದೆಗೈಯುವ ಕೆರೆ" (೧೯)ಗಳನ್ನು ಕವಿ ಒಂದು ಬೈಗಿನಲ್ಲಿ ಕಾಣುತ್ತಾನೆ. ಹುಣ್ಣಿಮೆಯ ತಿಂಗಳನ್ನು ಎದುರುಗೊಳ್ಳಲು, ಮೊರೆಯುತ್ತ ಹರಿಯುವ ತೊರೆಯ ಬಳಿಯ ಕರಿಯ ಬಂಡೆಯಮೇಲೆ ಕುಳಿತ ಕವಿಗೆ ಬೈಗಿನ ಕೆಂಪೂ, ಬನಮಾಲೆಯೂ ಸೊಬಗಿನ ಮೆರವಣಿಗೆಯಾಗಿ, ಸಂಜೆಯ ದಿಬ್ಬಣವಾಗಿ ತೋರುತ್ತವೆ (೪). ಬೇಸಗೆಯ ನಡುಹಗಲಿನ ಚಿತ್ರದಲ್ಲಿ ಬರುವ ವರ್ಣನೆಯ ತುಣುಕು ಇದು: "ನಾಡೆಲ್ಲ ಮೂರ್ಛೆಗೊಂಡಿದೆ....ಅಲೆಯುವ ಬಿಕಾರಿ ಗಾಳಿಯ ಪದಹತಿಗೆ ನೆಲದಮೇಲೆ ದಟ್ಟಯಿಸಿರುವ ತರಗೆಲೆಗಳು ಮರ್ಮರ ನಾದಗೆಯ್ಯುತ್ತಿವೆ, ನಿದ್ದೆಯಲ್ಲಿರುವ ಸದ್ದಿಲಿ ಬನವೆ ಕನಸಿನಲ್ಲಿ ಕನವರಿಸುವಂತೆ" (೫). ಅರಣ್ಯಮಂದಿರ ಪರ್ವತಶ್ರೇಣಿಗಳು ಹಗಲು ನಿದ್ದೆಗೈಯುತ್ತಿರುವ ಪಕ್ಷಿ ಸಮ್ಮೇಲ ಜೋಂಪಿಸಿ ಕನವರಿಸುವ ವೈಶಾಖ ಮಧ್ಯಾಹ್ನದ ಕೈವಲ್ಯ ಸುಷುಪ್ತಿಯನ್ನು ನೋಡುವವರು ಇಬ್ಬರೆ: ರವಿ– ಕವಿ (೫). ಇದೊಂದು ಸಂಧ್ಯಾವರ್ಣನೆ:

> ಸಂಧ್ಯೆಯ ಬಣ್ಣದ ಜೋಗುಳದಿಂದ ಭೂದೇವಿಯ ಬಳಲಿದ ಕಣ್ಣೆವೆಗಳು ಒಯ್ಯನೆ ಮುಗುಳಿದುವು. ನಕ್ಷತ್ರಗಳು ಕಣ್ದೆರೆದು ಎಚ್ಚತ್ತುವು. ಸಂಧ್ಯೆಯ ಇಂದ್ರಜಾಲದಿಂದ ಮೂಡಿದ ಯಾಮಿನಿಯ ಮಾಯೆ ಮಹಿಯನ್ನು ಮುಸುಗಿತು. (೬)

ಭಗವಂತ ಸರ್ವಸಹಗಾಮಿ. ಅಮಿತ ವೇಷಧಾರಿ. ಹಗಲಿನಂತೆ ಕತ್ತಲು; ಕರಿದರಂತೆ ಬಿಳಿದು; ದೊಡ್ಡದರಂತೆ ಚಿಕ್ಕದು. ಸುಗ್ಗಿಯ ವೇಷದಂತೆ ಮಾಗಿಯ ವೇಷವೂ ಅವನಿಗೆ ಒಪ್ಪುತ್ತದೆ. ಮಲೆನಾಡಿನ ಒಂದು ಮಾಗಿಯ ಮುಂಜಾನೆ ಹೀಗೆ ಕಾಣಿಸುತ್ತದೆ :

> ಇಬ್ಬನಿ ತಬ್ಬಿದ ಮರದೆಲೆಗಳಿಂದ ಹನಿತೊಟ್ಟಿಕ್ಕುತ್ತಿದೆ. ವಸಂತ ವಿಯೋಗದ ವಿರಹಯಾತನೆಯಿಂದ ಶ್ವೇತವಸನ ಧಾರಿಣಿಯಾಗಿ ಅವಕುಂಠಿತೆಯಾದ ವನರಮಣಿ ಕಂಬನಿಗರೆದು ನೀರವವಾಗಿ ರೋದಿಸುವಂತಿದೆ. (೭)

ಕವಿಯ ಪೂರ್ಣ ದೃಷ್ಟಿಗೆ ಮುಗಿಲಿನ ಮನೆಯಿಂದ ಸತತವಾಗಿ ಜಿನುಗುವ ಸೋನೆಯ ಚೆಳ್ಳಿರಿ ಮಾತ್ರ ಕಾಣಿಸುವುದಿಲ್ಲ. ಅರುಣ ಸಾರಥಿ ಕುದುರೆಗಳನ್ನು ಚೋಳೈಸಿ ಚಪ್ಪರಿಸಿ ಕೋಪದಿಂದ ಕೆಂಪೇರುತ್ತಿರುವುದನ್ನು ಮಾತ್ರ ಅವನು ನೋಡುವುದಿಲ್ಲ. "ಕ್ಷುದ್ರ ಕ್ಷುದ್ರತಮವಾದ ಶುನಕವೂ ನಿನ್ನ ದೃಷ್ಟಿಗೆ ಬಾಹಿರವಲ್ಲ!" ಎಂದು ಅವನು ಬೆರಗಾಗುತ್ತಾನೆ. ಆದುದರಿಂದಲೇ "ಒಲೆಯ ಬಳಿಯಲ್ಲಿ ಸಣ್ಣ ನಾಯಿಯೊಂದು ಕುಳಿತು ಎಲ್ಲವನ್ನೂ ತಿಳಿದುಕೊಳ್ಳುವಂತೆ ನಟಿಸು"ವುದಾಗಲಿ, ಅಗ್ನಿದೇವನ ಮುಂದೆ "ಕೊರೆಯುವ ಕುಳಿಗಾಳಿಯಲ್ಲಿ ಸೆಡೆತು ನಡುಗು"ತ್ತಿರುವ ಹಳ್ಳಿಗಳ ಪುಟ್ಟ ಸಂಸಾರಗಳಾಗಲಿ ಅವನ ಕಣ್ಣು ತಪ್ಪಿಸಲಾರವು(೭). ಆಕಾಶದ ಅನಂತತೆಯನ್ನೂ, ಸಮುದ್ರದ ಅಪಾರತೆಯನ್ನೂ, ಪರ್ವತ ಶಿಖರಗಳ ಧೀರ ಪ್ರಶಾಂತತೆಯನ್ನೂ, ಗ್ರಹಗಳ ಚಿರ ಜ್ಯೋತಿಯನ್ನೂ, ವಸಂತ ವನರಾಶಿಯ ಐಶ್ವರ್ಯವನ್ನೂ ನೋಡಿ ಬೆದರದಂತೆ, ಬೆರಗಾಗದಂತೆ, ನಾಚದಂತೆ, ಕರುಬದಂತೆ ಪುಟ್ಟ ಹೂವೊಂದಕ್ಕೆ ಕವಿ ಧೈರ್ಯಕೊಡುತ್ತಾನೆ. ಏಕೆಂದರೆ:

> ಯುಗ ಯುಗಾಂತರಗಳೂ ಅಳಿದು ಪೂರಯಿಸಲರಿಯದಿಹ ಅನಂತ ಕಾಲಮಾತೆ ಅವುಗಳೆಲ್ಲವನು ಹೆತ್ತು ಹೊರೆವಂತೆಯೆ ನಿನ್ನನೂ ಹೆತ್ತು ಹೊರೆಯುತಿಹಳು.
>
> ನೀನೂ ಅನಂತರ ಕಾಲಮಾತೆಯ ಮಹಾಗರ್ಭದಿಂದೊಗೆತಂದ ಕೋಮಲ ಶಿಶು ಎಂಬುದನು ಮರೆಯದಿರು. (೪೧)

ಲೋಕದ ಚರಾಚರಗಳೆಲ್ಲ ಪರಸ್ಪರೋಪಜೀವಿಗಳಾಗಿರುವಾಗ ಯಾವ ಭಯಕ್ಕೆ ಏನು ಕಾರಣ? ಒಂದು ಹೆಚ್ಚು ಇನ್ನೊಂದು ಕಡಮೆ ಹೇಗೆ?

೮

ಭಗವಂತನಿರುವನೆಂಬುದಕ್ಕೆ, ಅವನನ್ನು ನಂಬುವುದಕ್ಕೆ ಈ ಲೋಕದ ಅಸ್ತಿತ್ವಕ್ಕಿಂತ ದೊಡ್ಡ ಸಾಕ್ಷಿ ಯಾವುದೂ ಬೇಕಿಲ್ಲ. ಈ ಚರಾಚರಗಳು, ಸೂರ್ಯೋದಯ ಸೂರ್ಯಾಸ್ತಗಳು, ಗ್ರಹತಾರಗೆಗಳು, ಮಳೆ ಬೆಳೆಗಳು, ನೂರಾರು ನಿಯತಿಗಳು—ಇವುಗಳಿಗಿಂತ ಬೇರೆ ಆಧಾರವನ್ನು ಹುಡುಕುವ ಅಗತ್ಯವಿಲ್ಲ. ಆದ್ದರಿಂದಲೇ ಕವಿ ಕೇಳುತ್ತಾನೆ :

ಕಲ್ಲು ರೊಟ್ಟಿಯಾದರೆ ಮಾತ್ರ ಅದು ಪವಾಡವೇನು? ಕಲ್ಲು ಕಲ್ಲಾಗಿರುವುದೇ ಮಹತ್ತರ ಪವಾಡವಲ್ಲವೇನು?

ನಿನ್ನ ಕಾಲಡಿಯಲ್ಲಿ ನೋಡಿದರೆ ಅಲ್ಲಿ ಬೆಳೆದು ನಳನಳಿಸುವೆಳವುಲ್ಲು ಬಹುಕೋಟಿ ಯೋಜನಗಳಾಚೆಯಿಹ ನೀಹಾರಿಕೆಗೂ ಕಡಮೆಯ ಪವಾಡವಲ್ಲ! (೫೫)

ಕಂಭದಿಂದ ಒಡೆದೇಳುವ ನರಸಿಂಹನದು ಮಾತ್ರ ಪವಾಡವಲ್ಲ. ಭಗವದನುಗ್ರಹದ ಕೈಬೆರಳ ಕುಣಿಕೆಯ ರಚನೆಯೇ ಮಹದದ್ಭುತವಾದದ್ದು. "ಒಂದು ಇರುವೆಯ ಮುಂದೆ ಲಕ್ಷ ತಾರ್ಕಿಕರ ವಾದ ಹೊಲ್ಲ!"

ಪ್ರಿಯತಮನ ಬರುವಿಕೆಗಾಗಿ ಪ್ರಿಯೆ ಕಾದು ಕುಳಿತಿರುವುದು ಅನುಭಾವ ಕಾವ್ಯಗಳ ಪರಿಭಾಷೆಯಲ್ಲಿ ಚಿತ್ರಗೊಳ್ಳುವ ಒಂದು ಸಾಮಾನ್ಯ ಸಂದರ್ಭ. ಪವಾಡಪುರುಷನ ಆಗಮನಕ್ಕಾಗಿ ಎಲ್ಲ ಆತ್ಮಗಳೂ ನಿರೀಕ್ಷಿಸುತ್ತವೆ. ಈ ಪ್ರೇಮಮಿಲನದಲ್ಲಿ ಭಕ್ತ ದೇವರನ್ನು ಕೂಡುವುದು; ಲೀಲಾಂಶ ನಿತ್ಯಾಂಶವನ್ನು ಸೇರುವುದು; ಜಂಗಮ ಸ್ಥಾವರವಾಗುವುದು ಅನುಭಾವ ವಿಧಾನಗಳಲ್ಲಿ ತುಂಬ ಪ್ರಸಿದ್ಧವಾದ ನಡೆವಳಿಕೆ. ಈ ಸಂಬಂಧ ಆಧಾರ ಆಧೇಯ ಸ್ವರೂಪದ್ದು; ಪರಸ್ಪರ ಅವಲಂಬನಾತ್ಮಕವಾದದ್ದು. ಭಗವಂತನು ಗಾಯಕನಾದರೆ, ಭಕ್ತ ಗಾನ. ಈ ಗಾನಕ್ಕೆ ಕೊನೆಯಿಲ್ಲ. ಭಗವಂತನು ತಾಯಿಯಾದರೆ, ಭಕ್ತ ಮಗು. ಅವರ ವಾತ್ಸಲ್ಯಕ್ಕೆ ಕಡೆಯಿಲ್ಲ. ಭಗವಂತ ಪ್ರಿಯನಾದರೆ, ಭಕ್ತ ಪ್ರೇಯಸಿ. ಅವರ ಮಧುರ ಪ್ರೇಮಕ್ಕೆ ಅಳತೆಯಿಲ್ಲ.

ಭಗವಂತನು ಪ್ರೇಮಮಯ. ಅವನು ಎಲ್ಲ ಭಾವಗಳೂ ಹೌದು. ಎಲ್ಲ ರಾಗಗಳೂ ಹೌದು. ಅವನು ಅರೂಪಿಯೂ ಹೌದು; ಸರೂಪಿಯೂ ಹೌದು. ಎಲ್ಲ ಆತ್ಮಗಳ ಆದರ್ಶ ಅವನು; ಎಲ್ಲ ಕಾರ್ಯಗಳ ಆದರ್ಶ ಅವನು. ಅವನ

ಅರಮನೆಗೆ ನೂರಾರು ಮಾರ್ಗಗಳು ; ನೂರಾರು ಹೆಬ್ಬಾಗಿಲುಗಳು. ಅವನ್ನು ತೆಗೆಯುವ ಪ್ರಯತ್ನ, ತನ್ಮೂಲಕವಾಗಿ ಆತ್ಮಾನ್ವೇಷಣೆಯ ಪ್ರಯತ್ನ ಸತತವಾಗಿ ನಡೆಯುತ್ತಿದೆ. ಆದರೇನು ?

ದಾರಿಯು ಪರಿಚಯುವಿಲ್ಲ; ಸೇರುವ ಗುರಿಯು ಪರಿಚಯುವಿಲ್ಲ. ನಿನ್ನ ಪರಿಚಯುವೊಂದೆ ನನಗೆಲ್ಲದರ ಪರಿಚಯ.

ಕಡಿದಾದ ಬೆಟ್ಟಗಳಿರೆ ಕೈಹಿಡಿದು ಮೇಲೇರಿಸು. ಆಳವಾದ ಕಂದರಗಳಿರೆ ಮೆಲ್ಲಗೆ ಕೆಳಗಿಳಿಸು. ಮುಳ್ಳು ಕೆಸರುಗಳಿರೆ ಮೇಲೆತ್ತಿ ದಾಟಿಸು. ಮರುಭೂಮಿಗಳಿರೆ ಹಾಡಿ ಹುರಿದುಂಬಿಸು. (೧೧)

ಎಂದು ಸಂತತವಾಗಿ ಕೇಳಿಕೊಳ್ಳುತ್ತಿರಬೇಕಾಗುತ್ತದೆ. ಬೇಡವೆನ್ನುವವರು ಹಲವರು ; ನುಗ್ಗು ಎನ್ನುವವರು ಕೆಲವರು. ಇಂಥದರಲ್ಲಿ ಸಿಡಿಲು ಮಿಂಚುಗಳ, ಯಾರೂ ತುಳಿಯದ ಹಾದಿಯಲ್ಲಿ ತೌರೂರಿನ ಪ್ರಯಾಣ ಕೈಗೊಳ್ಳಬೇಕು. ಎದೆಗೆ ದೊರೆಯನ್ನು ಆಹ್ವಾನಿಸಬೇಕು :

ಬಾ ನನ್ನ ದೊರೆಯೆ ಬಾ ನನ್ನೆದೆಗೆ,
ನೀನಿರದಿರೆ ಸೊಬಗು ಸುಡುಗಾಡಲ್ತೆ ?
ನೀನು ಬರೆ ಸುಡುಗಾಡು ಸೊಬಗುವೀಡಲ್ತೆ ? (೧೬)

ಆದರೆ ಆ ದೊರೆ ಶಿಲಾಮೂರ್ತಿ. ಜನ್ಮ ಜನ್ಮಾಂತರಗಳಿಂದ, ಕಲ್ಪ ಕಲ್ಪಾಂತರಗಳಿಂದ ಜೀವನದಾರತಿಯನ್ನೆತ್ತಿ ಕೇಳಿಕೊಂಡರೂ ಅವನು ಕಣ್ಣು ತೆರೆಯುವುದಿಲ್ಲ. “ನನಗಿಂದು ನೀನೆ ಬೇಕು” ಎಂಬುದು ಕೊನೆಯಾಗದ ಪಲ್ಲವಿ. ಆದರೂ ಅವನು ಒಲಿಯುತ್ತಾನೆಂಬ ನಂಬುಗೆ ಮಾಸದು. ಎಂದು ಬರುತ್ತಾನೆ ಅವನು ? ಅದಕ್ಕಾಗಿ ನಿತ್ಯ ನಿರೀಕ್ಷೆ.

ಹೂಗಳನು ಕೊಯ್ದು ತಂದಿರುವೆ ; ಮಾಲೆಗಳನು ನೆಯ್ದು ನಿಂದಿರುವೆ. ಗುಡಿಯ ಗುಡಿಸಿರುವೆ ; ತೊಳೆದು ರಂಗವಲ್ಲಿಯ ಬರೆದು ಸಿಂಗಾರಮಾಡಿರುವೆ. ಗಂಧ ಗುಗ್ಗಳ ಹೊತ್ತಿಸಿರುವೆ. ಕೀರ್ತನೆಗಳನು ಹಾಡುತಿರುವೆ. ನೀ ಬರುವೆ ಎಂಬುದನು ಜನರಿಗೊರೆದೆ....ನೀನೆಂದಿಗೈತರುವೆ ? (೨೨)

ಅವನಿಲ್ಲದ ಎದೆಮಣೆ ಬರಿದಾಗಿದೆ. ಶೂನ್ಯತೆಯ ಭಾರದಲ್ಲಿ ಬಾಳು ಬಿರಿಯುತ್ತಿದೆ. ಎಲ್ಲ ಕಡೆಯೂ ನಗ್ನ ನಿರಾಶೆ. ತಳಿಗೊಳದಿಂದ ಮೇಲೆ ನೆಗೆದು

ಹುಡಿಯಲ್ಲಿ ಹೊರಳಾಡುವ ಮರಿಮೀನಿನಂತೆ ಆತ್ಮ ತುಡಿಯುತ್ತಿದೆ. ಅವನನ್ನು ನೆನೆಯಲು ಬಗೆ ಹಿಗ್ಗಿ ಹಾರುತ್ತದೆ. ಎದೆ ತುಂಬಿ ತುಳುಕುತ್ತದೆ. ಅವನ ಆಗಮನದ ಅನಂತ ನಿರೀಕ್ಷೆಯೆ ತಪಸ್ಸಾಗಿದೆ. "ಕನಸಿನೊಳಗಾದರೂ ನನ್ನೆದೆಗೆ ಬಾ ನೀನು!" ಎನ್ನುವುದು ಕಳಕಳಿಯ ಬೇಡಿಕೆ. ನೂರು ಕೋಟಿ ಗಳಿಂದ, ನೂರು ಕೋಟಲೆಗಳಿಂದ ನಾನು ನಿನ್ನೆಡೆಗೆ ಬರಲಾರೆ. ಬೆಟ್ಟ ವನ್ನೇರುವುದು, ಹೊಳೆಯನ್ನೀಜುವುದು, ಮರುಭೂಮಿಯನ್ನು ಹಾರುವುದು ನನ್ನಿಂದಾಗದೆಂಬುದು ಭಕ್ತನ ಆರ್ತತೆ, ಅಸಹಾಯಕತೆ. ಆದುದರಿಂದಲೇ ಅವನು ಅನವರತ ಆಹ್ವಾನವನ್ನು ಹಿಡಿದು ನಿಂತಿದ್ದಾನೆ.

೫

ತಾಯಿಗೆ ಮಗುವಿನ ಅಳು ಕೇಳಿಸುತ್ತದೆ; ಪ್ರಿಯನಿಗೆ ಪ್ರೇಯಸಿಯ ಕಾತರ ಅರಿವಾಗುತ್ತದೆ; ಭಗವಂತ ಭಕ್ತನತ್ತ ದೃಷ್ಟಿ ಹಾಯಿಸುತ್ತಾನೆ. ಎಲ್ಲ ಮೊರೆಗಳೂ ಮುಟ್ಟುತ್ತವೆ; ಬೇಡಿಕೆಗಳು ಈಡೇರುತ್ತವೆ; ಪ್ರಾರ್ಥನೆ ಸಫಲವಾಗುತ್ತದೆ. ದಿವ್ಯದರ್ಶನ ದೊರೆಯುತ್ತದೆ. ಆತ್ಮಪಕ್ಷಿ ಬಾನಿಗೇರು ತ್ತದೆ. ಮಣ್ಣಿನಲ್ಲಿ ಬಿದ್ದು ಹೊರಳಿ ಬದುಕುವುದಕ್ಕಿಂತ ಬಾನಿನಲ್ಲಿ ತೇಲಿ ಹಾರಿ ಸಾಯುವುದೇ ಶ್ರೇಯಸ್ಕರ ಎಂಬ ದೃಢ ನಿರ್ಧಾರಕ್ಕೆ ಬೆಲೆ ಬಂದಿದೆ. ಸಮರವೇ ಜೀವನದ ತಿರುಳು; ಹೋರಾಟವೇ ಜೀವನದ ಚಿಹ್ನೆ ಎಂಬ ನಂಬುಗೆಗೆ ಅನುವಾಗಿ ಅವನ ಸಾಕ್ಷಾತ್ಕಾರಕ್ಕಾಗಿ ನಡೆಸಿದ ಹೋರಾಟ ವಿಫಲವಾಗಿಲ್ಲ.

ಭಗವಂತನಿಗೆ ಭಕ್ತನ ತೊದಲು ಮಾತಿನಲ್ಲಿ ಬಹುಪ್ರೀತಿ. ಆಹ್ವಾನವನ್ನು ಅವನು ಅಂಗೀಕರಿಸಿದ್ದಾನೆ. ಅವನ ಸಾನಿಧ್ಯಭಾವದಲ್ಲಿ ಜೀವರಸ ತುಂಬಿರು ವುದೆಂಬುದನ್ನು ಭಕ್ತ ತಿಳಿದುಕೊಳ್ಳುತ್ತಾನೆ. ಹಳೆಯ ಬಯಕೆಗಳೆಲ್ಲ ಮಾಯವಾಗಿ ಸರ್ವಸಮರ್ಪಣಭಾವ ಭಕ್ತನಲ್ಲಿ ತಾನೇತಾನಾಗಿ ಎದ್ದು ನಿಲ್ಲುತ್ತದೆ. ತನ್ನತನವನ್ನು ಅಳಿಸಿಬಿಡೆಂಬುದೊಂದೇ ಉಳಿದಿರುವ ಅವನ ಕೋರಿಕೆ.

ನೀನೆನ್ನನಾಲಂಗಿಸಿ ಚುಂಬಿಸಲು ನಿನ್ನ ಚೆಂದುಟಿಯ ಸುಖ ಕೋಮಲ ಮೃದುಮಧುರ ಸ್ಪರ್ಶನಕೆ ನನ್ನ ಅಹಂಕಾರ ಕರಗಿ ಲಯವಾಗುತ್ತದೆ. ನಿನ್ನಾ

ತ್ಮದಲಿ ತಲ್ಲೀನವಾಗಿ—ಬಾಂದಳದ ಮುಗಿಲಮನೆಯಿಂದೈತಂದು ತಿರೆವೆಣ್ಣಿನ
ಸಿರಿಗೆನ್ನೆಗೆ ಮುತ್ತುಕೊಡುವ ಆಲಿಕಲ್ಲಿನಂತೆ! (೩೬)

"ಬಂದು ನನ್ನನು ಮುಟ್ಟು, ಮುಟ್ಟು, ಮುಟ್ಟು"—ಎಂದು ಭಕ್ತನು ಆರ್ತತೆಯಿಂದ ಪ್ರಲಾಪಿಸುತ್ತಾನೆ.

"ನನ್ನನಾಲಂಗಿಸು; ಚುಂಬಿಸು; ನನ್ನನಿಲ್ಲಗೈ"—ಎಂಬುದೇ ಆತನ ಪ್ರಾರ್ಥನೆ. "ನಿನ್ನ ನಲ್ಮೆಯಾತುಂತುರು ನನ್ನ ಕೆನ್ನೆ ತುಟಿಗಳನು ತೋಯಿಸಲಿ"—ಎಂಬುದೇ ಅವನ ಬೇಡಿಕೆ. ಏಕೆಂದರೆ "ಜಗದ ಮರುಭೂಮಿಯಲಿ ಮುತ್ತೊಂದೆ ಮರುವನ." ಈ ಪ್ರಾರ್ಥನೆ, ಬೇಡಿಕೆಗಳು ಈಡೇರಿದಾಗ ಭಗವಂತ—ಭಕ್ತರಿಗೆ ಭೇದವೇ ಉಳಿಯುವುದಿಲ್ಲ. "ತೂರಿಹೋದುವು ನನ್ನ ಚಿಂತೆಗಳೆಲ್ಲ; ಮಾಯವಾಯಿತು ನನ್ನ ನಿರಾಶೆ!" ಎಂಬುದು ಆಗ ಭಕ್ತನ ಸಮಾಧಾನ. "ನಿನ್ನವನು ನಾನು; ನನ್ನವನು ನೀನು. ನಿನ್ನಲ್ಲಿ ನಾನು; ನನ್ನಲ್ಲಿ ನೀನು. ನೀನೆ ನಾನು; ನಾನೇ ನೀನು" ಎಂದು ಅವನು ಘೋಷಿಸುತ್ತಾನೆ. ಮುಂದೆ ಮಾತಿಲ್ಲವಾಗುತ್ತದೆ. ಮೌನವೆ ವಾಙ್ಮಯವಾಗುತ್ತದೆ. ಅಂದು ಕನಸಾಗಲೊಲ್ಲದು ಇಂದು ನನಸಾಗಿದೆ.

ನನ್ನ ಜೀವದ ಜೀವ!
ನಾನಿಲ್ಲ, ನೀನಿಲ್ಲ
ನೀನೆ ಇರುವುದೆಲ್ಲ, ಓ ನನ್ನನಲ್ಲ! (೫೯)

ಎಂದು ಉಗ್ಗಡಿಸುವುದು ದಿವ್ಯ ಸಾಕ್ಷಾತ್ಕಾರದ ಕೊಟ್ಟಕೊನೆಯ ಹಂತ. ಈ ಹಂತದಲ್ಲಿ ಬೆಳಕು ಬೆಳಕನ್ನು ಕೂಡುತ್ತದೆ; ಕಡಲು ಕಡಲನ್ನು ಸೇರುತ್ತದೆ. ಇದ್ದಲಿನ ಚೂರಿನಿಂದ ವಜ್ರವಾಗುತ್ತದೆ. ಬಣಗು ಕಟ್ಟಿಗೆಯಲ್ಲಿ ಬೆಂಕಿ ಹೊತ್ತಿಕೊಳ್ಳುತ್ತದೆ. ಕೆರೆಯ ಕೆಸರಿನಲ್ಲಿ ಪದ್ಮದುದ್ಭವವಾಗುತ್ತದೆ. ಇದೆಲ್ಲವೂ ನಡೆಯುವುದು ಭಗವಂತನಡಿಯ ವಿದ್ಯುತ್ ಸ್ಪರ್ಶದಿಂದ; ಅವನ ಚಿದಗ್ನಿಯಾಲಿಂಗನದಿಂದ; ಅವನ ಪದಚುಂಬನ ಪವಾಡದಿಂದ.

೬

ಆತ್ಮ ಪರಮಾತ್ಮನನ್ನು ನಿರೀಕ್ಷಿಸಿ, ಅವನನ್ನು ಸಾಕ್ಷಾತ್ಕರಿಸಿಕೊಂಡು, ತನ್ನ ಸಾರಸರ್ವಸ್ವಗಳನ್ನು ಅವನಲ್ಲಿ ಲೀನವಾಗಿಸಿ ತಾನೆಂಬುದು ಇಲ್ಲವಾಗುವ

ಅದ್ಭುತ ಪವಾಡದ ಹೆಜ್ಜೆಗಳನ್ನು ಗುರುತಿಸುವ ಈ ವಚನ ಕವನಗಳಿಗೆ 'ಕಿಂಕಿಣಿ' ಎಂಬ ಹೆಸರೇ ಅತ್ಯಂತ ರಮಣೀಯವಾಗಿದೆ, ಧ್ವನಿಪೂರ್ಣವಾಗಿದೆ, ಅನ್ವರ್ಥವಾಗಿದೆ. ಆಧುನಿಕ ಕನ್ನಡ ಕಾವ್ಯದಲ್ಲಿ ಭಕ್ತ-ಭಗವಂತರ ಪ್ರೇಮ ಸಂಬಂಧವಾಗಲಿ, ಮಧುರ ಭಕ್ತಿಯಾಗಲಿ, ವಾತ್ಸಲ್ಯ ವಿರಹಗಳಾಗಲಿ ಇನ್ನೊಂದುಕಡೆ ಈ ತೀವ್ರತೆಯಲ್ಲಿ ಈ ಗಾಂಭೀರ್ಯದಲ್ಲಿ ರೂಪುದೋರಿಲ್ಲ. ಹರಳುಗೊಂಡಿಲ್ಲ. ಈ ಭಾವ ಶ್ರೀಮಂತಿಕೆಯನ್ನು ಪ್ರಕಟಗೊಳಿಸಿಲ್ಲ. ಸುತ್ತಲ ನೀರವತೆಯಲ್ಲಿ ಮಾತ್ರ ತೇಲಿಕೊಂಡು ಬರುತ್ತದೆ, ಗೋಕಂಠ ಕಿಂಕಿಣಿಯ ನಿಕ್ವಣನ ಪಂಕ್ತಿ. ಎಲ್ಲ ಉಪಾಧಿಗಳನ್ನುಳಿದಾಗಲೆ ಕೇಳಿಬರುತ್ತದೆ, ಆತ್ಮ ಸಂಧ್ಯಾಧೇನು ಕಿಂಕಿಣಿ.

ಪೂರ್ಣತೆಯನ್ನರಸಿ ನಡೆದಿರುವ ಅಪೂರ್ಣ ಬದುಕಿನ ಸಾಹಸ ಯಾತ್ರೆಯ ಧ್ಯಾನಧೇನು 'ಕಿಂಕಿಣಿ'ಯ ಪ್ರತಿಯೊಂದು ವಚನವೂ –

ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರ.

# ಭಾಷೆಗಳ ಪ್ರಪಂಚ

೧

ಭಾಷೆ ಮನುಷ್ಯನಿಗೆ ಲಭ್ಯವಾಗಿರುವ ಒಂದು ದಿವ್ಯ ವರ. ಅದರಿಂದಾಗಿ ಅವನು ತನ್ನ ಸಮಾಜವನ್ನು ಕಟ್ಟಿಕೊಂಡಿದ್ದಾನೆ; ನಾಗರಿಕತೆಯನ್ನು ನಿರ್ಮಿಸಿಕೊಂಡಿದ್ದಾನೆ. ಅದು ಅವನನ್ನು ಉಳಿದ ಪ್ರಾಣಿವರ್ಗಗಳಿಂದ ಬೇರೆಯವನನ್ನಾಗಿಸಿದೆ. ಸಾಮಾನ್ಯವಾಗಿ ಪ್ರತಿಯೊಬ್ಬರೂ ಚಿಕ್ಕವಯಸ್ಸಿನಲ್ಲೇ ಮಾತನಾಡಲು ಕಲಿತುಕೊಳ್ಳುವುದರಿಂದ, ಭಾಷೆ, ಉಸಿರಾಡುವಷ್ಟೇ ಸಹಜವಾದುದು ಎಂಬ ಭಾವನೆ ಬಹುಜನರಲ್ಲಿ. ಈ ಕಾರಣದಿಂದ ಭಾಷೆಯನ್ನು ಕುರಿತು ವಿಚಾರಮಾಡಬೇಕಾದುದಿಲ್ಲವೆಂಬ ಅಭಿಪ್ರಾಯ ಅನೇಕರಲ್ಲಿದೆ. ಎಲ್ಲಿಯವರೆಗೆ ನಾವು ಮಾತನಾಡುತ್ತಿರುವೆವೋ, ಎಲ್ಲಿಯವರೆಗೆ ನಾವು ಆಡುವ ಮಾತಿನಿಂದ ನಮ್ಮ ಉದ್ದೇಶ ಈಡೇರುತ್ತದೆಯೋ ಅಲ್ಲಿಯವರೆಗೆ ಈ ಭಾಷೆಯ ವಿಷಯ ನಮಗೇಕೆ?

ಆದರೆ ಈ ಭಾಷೆಗಳಿಗೂ ತಮ್ಮದೇ ಆದ ಒಂದು ಇತಿಹಾಸವಿದೆ. ಅವುಗಳಲ್ಲಿ ಅಪಾರವಾದ ವೈವಿಧ್ಯವಿದೆ. ಅವು ಲೋಕವ್ಯಾಪಕವಾಗಿವೆ. ಭಾಷೆಗಳದೇ ಒಂದು ಪ್ರಪಂಚ. ಆ ಪ್ರಪಂಚ, ಮನುಷ್ಯಪ್ರಪಂಚದಷ್ಟೇ ವಿಸ್ತಾರ, ವರ್ಣಮಯ. ಮಾನವ ಬದುಕಿನ ರಹಸ್ಯಗಳಿಗೆಲ್ಲ ಉತ್ತರವನ್ನು ಕಂಡಿಲ್ಲ. ಭಾಷೆಗಳ ಬಗೆಗೂ ತಿಳಿಯುವುದು ಎಷ್ಟೋ ಇದೆ. ಅವುಗಳಿಗೆ ಸಂಬಂಧಿಸಿದ ವಿಷಯಗಳೆಷ್ಟೋ ಇನ್ನೂ ಸಮಸ್ಯೆಗಳೇ! ಮಾತ್ರವಲ್ಲ, ಭಾಷೆಗಳ ಬಗೆಗೆ ತೀರ ಸಾಮಾನ್ಯವಾದ ವಿಚಾರಗಳು ಕೂಡ ನಮಗೆಷ್ಟು ತಿಳಿದಿದೆ?

ಭೂಮಿಯ ನಾನಾ ಭಾಗಗಳಲ್ಲಿ ಮನುಷ್ಯ ವಾಸಮಾಡಿಕೊಂಡಿದ್ದಾನೆ. ಅವನು ಒಂದಲ್ಲ ಒಂದು ಭಾಷೆಯನ್ನು ಆಡುತ್ತಲೇ ಇದ್ದಾನೆ. ಹೀಗೆ ಭೂಮಿಯ ಬೇರೆ ಬೇರೆ ಭಾಗಗಳಲ್ಲಿ ಹರಡಿಕೊಂಡಿರುವ ಭಾಷೆಗಳೆಷ್ಟು? ಯಾವ ದೇಶದ ಜನ ಯಾವ ಭಾಷೆಯನ್ನಾಡುತ್ತಾರೆ? ಈ ಪ್ರಶ್ನೆಗಳಿಗೆ ಉತ್ತರ ಕೊಡುವುದು ಸುಲಭವಲ್ಲ. ವಿದ್ಯಾವಂತರಾದವರನ್ನೇ ಭಾಷೆಗಳ ಭೂಗೋಳದ ಬಗೆಗೆ ಕೇಳಿ ನೋಡಿ. ಸ್ವಿಟ್ಜರ್‌ಲೆಂಡಿನಲ್ಲಿ ಅಧಿಕೃತ ಭಾಷೆ

ಯಾವುದು? ಕಾಂಗೋ ಜನ ಯಾವ ಭಾಷೆಯನ್ನು ಆಡುತ್ತಾರೆ? ಬ್ರೆಜಿಲ್‌ನಲ್ಲಿ ಬಳಕೆಯಲ್ಲಿರುವ ಭಾಷೆ ಯಾವುದು? ಬಂಟು ಭಾಷೆಯನ್ನು ಎಲ್ಲಿ ಆಡುತ್ತಾರೆ? ಫ್ರೆಂಚ್ ಭಾಷೆಯನ್ನು ಯಾವ ಯಾವ ದೇಶಗಳಲ್ಲಿ ಬಳಸುತ್ತಾರೆ? ಈ ಬಗೆಯ ಪ್ರಶ್ನೆಗಳಿಗೆ ಉತ್ತರ ನೀಡಲಾರರು–ಹಲವುಜನ. ಬೇಡ. ನಮ್ಮ ದೇಶದ ಭಾಷೆಗಳ ಬಗೆಗೇ ನಾವು ಎಲ್ಲವನ್ನೂ ತಿಳಿದುಕೊಂಡಿಲ್ಲ. ನಮ್ಮ ರಾಜ್ಯಾಂಗದಲ್ಲಿ ಪುರಸ್ಕೃತವಾಗಿರುವ ಭಾಷೆಗಳು ಹದಿನೈದು. ಗ್ರಿಯರ್ಸನ್ ಎಂಬ ಪಂಡಿತರು ನಡೆಸಿದ ಭಾಷಿಕ ಸಮೀಕ್ಷೆಯಲ್ಲಿ ಸ್ಥಾನ ಪಡೆದಿರುವ ಭಾಷೆಗಳು ಒಂದುನೂರ ಎಪ್ಪತ್ತೊಂಬತ್ತು; ಉಪಭಾಷೆಗಳು ಐದುನೂರ ನಲವತ್ತನಾಲ್ಕು. ಭಾರತದಲ್ಲಿರುವ ಎಲ್ಲ ಭಾಷೆಗಳೂ ತಮ್ಮ ಸಮೀಕ್ಷೆಯಲ್ಲಿ ಸೇರಿವೆಯೆಂಬ ಭ್ರಾಂತಿಯೇನೂ ಗ್ರಿಯರ್ಸನ್ ಮಹಾಶಯರಿಗಿರಲಿಲ್ಲ. ನಮ್ಮ ದೇಶದ ಜನ ಒಂದು ಸಾವಿರದಷ್ಟು ಬೇರೆ ಬೇರೆ ಮಾತೃಭಾಷೆಗಳನ್ನಾಡುತ್ತಾರೆಂದು ಇತ್ತೀಚಿನ ಒಂದು ವರದಿ!

ನಾವು ಆಡುವ ಕನ್ನಡ ಪಂಚದ್ರಾವಿಡಭಾಷೆಗಳಲ್ಲಿ ಒಂದು ಎಂಬುದು ಜನ ಪ್ರತೀತಿ. ಉಳಿದ ನಾಲ್ಕು ಯಾವುವು? ತಮಿಳು, ತೆಲುಗು, ಮಲೆಯಾಳಂ—ಇಲ್ಲಿಯವರೆಗೆ ಸರಿ. ನಾಲ್ಕನೆಯದು ಹಲವರ ಪ್ರಕಾರ ಮರಾಠಿ; ಮತ್ತೆ ಕೆಲವರ ಪ್ರಕಾರ ತುಳು. ಮರಾಠೀ ಭಾಷೆ ಆರ್ಯನ್ ವರ್ಗಕ್ಕೆ ಸೇರಿದ್ದು ಎಂಬುದು ನಿರ್ವಿವಾದ. ಆದರೆ ದ್ರಾವಿಡ ವರ್ಗಕ್ಕೆ ಏಕೆ ಸೇರಿತು? ಕನ್ನಡ, ತಮಿಳು, ತೆಲುಗು, ಮಲೆಯಾಳಂ—ನಾಲ್ಕೂ ಸಮೃದ್ಧವಾದ ಸಾಹಿತ್ಯವನ್ನು ಹೊಂದಿರುವ ಭಾಷೆಗಳು. ಇವುಗಳ ಜೊತೆಗೆ 'ಪಾಡ್ದನ'ವೆಂಬ ಜನಪದ ಸಾಹಿತ್ಯವನ್ನಲ್ಲದೆ ಬೇರೆ ಸಾಹಿತ್ಯವನ್ನು ಹೊಂದಿರದ ತುಳುವನ್ನು ಹೇಗೆ ಸೇರಿಸುವುದು? ಆದ್ದರಿಂದ ಸಾಹಿತ್ಯಿಕ ಭಾಷೆ ಮರಾಠೀ ಪಂಚದ್ರಾವಿಡಗಳಲ್ಲಿ ಒಂದಾಯಿತು. ದ್ರಾವಿಡ ಭಾಷೆಗಳು ವಿಂಧ್ಯಪರ್ವತಗಳ ದಕ್ಷಿಣಕ್ಕೆ ತಾನೆ ಇರಬೇಕಾದದ್ದು? ಸುಮಾರು ಒಂದುನೂರು ವರ್ಷಗಳ ಕೆಳಗೆ ಕಾಲ್ಡ್‌ವೆಲ್ ಎಂಬ ಪಂಡಿತರು ಪ್ರಕಟಿಸಿದ 'ದ್ರಾವಿಡ' ಅಥವಾ ದಕ್ಷಿಣ ಭಾರತದ ಭಾಷೆಗಳ ತೌಲನಿಕ ವ್ಯಾಕರಣದಲ್ಲಿ ತುಳುವನ್ನೂ ಸೇರಿಸಿದ್ದು, ಪಂಚದ್ರಾವಿಡ ಭಾಷೆಗಳ ಜೊತೆಗೆ ಕೊಡಗು, ತೋದ, ಕೋತ, ಗೋಂಡ್, ಖೊಂಡ್ ಹಾಗೂ ರಾಜಮಹಲ್ ಎಂಬ ಆರು ಭಾಷೆಗಳನ್ನು ಕೂಡಿಸಿ

ವಿವೇಚಿಸಿದರು. ದ್ರಾವಿಡಭಾಷೆಗಳ ಸಂಖ್ಯೆ ಐದಲ್ಲದೆ, ಹನ್ನೊಂದಕ್ಕೆ ನಿಲ್ಲದೆ, ಇಪ್ಪತ್ತು ಇಪ್ಪತ್ತೆರಡರ ಹತ್ತಿರ ಬಂದು ನಿಂತಿದೆ ಈಗ. ಸುಮಾರು ಹದಿನೈದು-ಹದಿನಾರು ಭಾಷೆಗಳ ವರ್ಣನೆ-ವಿವರಣೆ ಈಗ ನಮಗೆ ದೊರೆಯುತ್ತಿದೆ. ಈ ಸಂಖ್ಯೆ ಇಷ್ಟಕ್ಕೇ ನಿಲ್ಲುವುದೆಂಬ ಭರವಸೆಯೂ ಇಲ್ಲ. ಜೊತೆಗೆ ದ್ರಾವಿಡ ಭಾಷೆಗಳ ಗುಂಪು ದಕ್ಷಿಣ ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. ಮಧ್ಯಭಾರತ ದಲ್ಲಿ ನಿಲ್ಲದೆ ಉತ್ತರದಲ್ಲಿ ಬಲೂಚಿಸ್ಥಾನದವರೆಗೂ ವ್ಯಾಪಿಸಿದೆ. ಅಲ್ಲಿನ ಬ್ರಹುಇ ದ್ರಾವಿಡ ವರ್ಗದ ಭಾಷೆಯೆಂಬುದು ಈಗ ಚರ್ಚೆಯ ವಿಷಯ ವಾಗಿ ಉಳಿದಿಲ್ಲ.

ನಮ್ಮ ಭಾಷೆಗಳ ಭೂಗೋಳವೇ ಹೀಗಿದ್ದರೆ ಲೋಕದ ಎಲ್ಲ ಭಾಷೆಗಳ ವಿಚಾರ ಇನ್ನು ಹೇಗಿದ್ದೀತು ? ಜಗತ್ತಿನ ಭಾಷೆಗಳು ಎಷ್ಟು ಎಂದು ನಾವು ಖಚಿತವಾಗಿ ಹೇಳುವಂತಿಲ್ಲ. ಏಕೆಂದರೆ, ಭಾಷೆ ಯಾವುದು ? ಉಪಭಾಷೆ ಯಾವುದು ಎಂಬುದನ್ನು ಸುಲಭವಾಗಿ ನಿರ್ಧಾರ ಮಾಡಲು ಸಾಧ್ಯವಾಗುವು ದಿಲ್ಲ. ಒಂದು ಭಾಷೆಯ ಕ್ಷೇತ್ರ ಎಲ್ಲಿ ಮುಗಿಯುತ್ತದೆ ? ಮತ್ತೊಂದು ಭಾಷೆಯ ಕ್ಷೇತ್ರ ಎಲ್ಲಿಂದ ಆರಂಭವಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಒಂದು ಲೆಕ್ಕಾಚಾರದಂತೆ ಜಗತ್ತಿನಲ್ಲಿ ೨,೭೯೬ ಮುಖ್ಯ ಭಾಷೆಗಳಿವೆ. ಅಮೆರಿಕೆಯ ಇಂಡಿಯಾನಾ ವಿಶ್ವವಿದ್ಯಾನಿಲಯದ 'ಜಗತ್ತಿನ ಭಾಷೆಗಳ ಸಂಗ್ರಹ'ದಲ್ಲಿ ಮೂರು ಸಾವಿರಕ್ಕೂ ಮಿಕ್ಕಿದ ಭಾಷೆಗಳನ್ನು ಕುರಿತ ಮಾಹಿತಿ, ಅಭ್ಯಾಸ ಸಾಮಗ್ರಿ ಸಂಗ್ರಹಿಸಲ್ಪಟ್ಟಿವೆ.

ಈ ಮೂರು ಸಾವಿರ ಭಾಷೆಗಳಲ್ಲಿ ಸುಮಾರು ಸಾವಿರದ ಇನ್ನೂರು ಭಾಷೆಗಳನ್ನು ಅಮೆರಿಕನ್-ಇಂಡಿಯನ್ ಮೂಲನಿವಾಸಿಗಳೇ ಆಡುತ್ತಾರೆ. ಆಫ್ರಿಕಾದ ನೀಗ್ರೋ ಬುಡಕಟ್ಟಿನ ಜನರು ಐನೂರಕ್ಕೂ ಹೆಚ್ಚಿನ ಭಾಷೆ ಗಳನ್ನು ಆಡುತ್ತಾರೆ. ಆಸ್ಟ್ರೇಲಿಯಾ, ಟಾಸ್ಮೇನಿಯಾ, ನ್ಯೂಗಿನಿ ಹಾಗೂ ಪೆಸಿಫಿಕ್ ದ್ವೀಪಗಳಲ್ಲಿ ವಾಸಮಾಡುವ ಆದಿವಾಸಿಗಳ ಭಾಷೆಗಳು ಐನೂರು. ಉಳಿದ ನೂರಾರು ಭಾಷೆಗಳು ಏಷಿಯಾ ಬುಡಕಟ್ಟಿನವರಿಗೆ ಸೇರಿದವು. ಈ ಭಾಷೆಗಳನ್ನು ಆಡುವ ಜನರ ಸಂಖ್ಯೆ ಒಂದೇ ಸಮನಾಗಿಲ್ಲ. ೬೨೦ ಮಿಲಿಯನ್ ಜನ ಆಡುವ ಚೀನೀ ಭಾಷೆಯೊಂದು ಕಡೆ ಇದ್ದರೆ ಕೇವಲ ಕೆಲವು ನೂರು ಜನ, ಕೆಲವು ಸಂದರ್ಭಗಳಲ್ಲಿ ಕೈಬೆರಳಲ್ಲೆಣಿಸುವಷ್ಟು ಜನ ಮಾತ್ರ ಆಡುವ

ಭಾಷೆಗಳು ಎಷ್ಟೋ ಇವೆ. ಐವತ್ತು ಮಿಲಿಯನ್ನಿಗಿಂತಲೂ ಹೆಚ್ಚು ಜನ ಆಡುವ ಭಾಷೆಗಳು ಕೇವಲ ಹದಿಮೂರು. ಚೀನೀ (೬೨೦), ಇಂಗ್ಲಿಷ್ (೩೦೦), ಹಿಂದೂಸ್ತಾನಿ (೨೦೦), ರಷಿಯನ್ (೧೬೦), ಸ್ಪ್ಯಾನಿಷ್ (೧೪೦), ಜರ್ಮನ್ (೧೦೦), ಜಪಾನೀ (೯೦), ಅರಾಬಿಕ್ (೯೦), ಮಲಾಯ್ (೮೦), ಫ್ರೆಂಚ್ (೭೫), ಬಂಗಾಳೀ (೭೦), ಪೋರ್ಚುಗೀಸ್ (೭೦), ಇಟಾಲಿಯನ್ (೬೦)—ಇದು ಸಾಧಾರಣ ಲೆಕ್ಕ.

ನಾವು ಭಾಷೆಯೆಂದು ಹೇಳಿದಾಗ ಎಷ್ಟೋ ಸಲ ಅದು ಅನಿವಾರ್ಯವಾಗಿ ಉಪಭಾಷೆಗಳ ಸಮುದಾಯವಾಗಿರುತ್ತದೆ. ಹಿಂದೂಸ್ಥಾನಿ ಎಂದು ನಾವು ಲೆಕ್ಕಹಾಕಿದಾಗ ಅವಧಿ, ಭೋಜಪುರಿ, ಬ್ರಜಭಾಷಾ ಇವುಗಳನ್ನೆಲ್ಲ ಅದರಲ್ಲಿ ಸೇರಿಸಿರುತ್ತೇವೆ. ಕೆಲವು ಸಲ ಉರ್ದು ಕೂಡ ಅದರೊಂದಿಗೆ ಸೇರಿಕೊಂಡಿರುತ್ತದೆ. ಚೀನೀ ಎಂದು ನಾವು ನಿರ್ದೇಶಿಸುವ ಚೀಣಾ ದೇಶದ ರಾಷ್ಟ್ರಭಾಷೆ ಸಾಮಾನ್ಯವಾಗಿ ಉತ್ತರ ಮ್ಯಾಂಡೇರಿಯನ್ ಉಪಭಾಷೆ. ಚೀಣಾದ ಮೂರನೇ ಎರಡು ಭಾಗ ಜನ ಈ ಉಪಭಾಷೆಯನ್ನಾಡುತ್ತಾರೆ. ಉಳಿದವರು ಕ್ಯಾಂಟೊನೀಸ್‌ನಂಥ ಉಪಭಾಷೆಗಳನ್ನಾಡುತ್ತಾರೆ. ಚೀನೀ ಭಾಷೆ ಚೀಣಾ ಮತ್ತು ಮಂಚೂರಿಯಾಗಳಿಗೆ ಸೀಮಿತವಾಗಿದ್ದರೆ ಹಿಂದೂಸ್ಥಾನಿ, ಬಂಗಾಳಿಗಳು ಭಾರತ ಪಾಕಿಸ್ಥಾನಗಳ ಹೊರಗೆ ಬಳಕೆಯಲ್ಲಿಲ್ಲ. ಜಪಾನೀ ಭಾಷೆ ಕೊರಿಯಾದಲ್ಲಿಯೂ ಸ್ವಲ್ಪಮಟ್ಟಿಗೆ ಉಪಯೋಗದಲ್ಲಿದೆ. ಮಲಯ್ ಮಲೇಷಿಯಾ ಹಾಗೂ ಇಂಡೋನೇಷಿಯಗಳೆರಡರಲ್ಲಿಯೂ ಇದೆ. ಫಿಲಿಪೈನ್ಸ್‌ನಲ್ಲಿಯೂ ಅದರ ಚಲಾವಣೆಯಿದೆ. ಅರಾಬಿಕ್, ಈಜಿಪ್ಟ್, ಸೌದಿ ಅರೇಬಿಯ, ಸಿರಿಯಾ, ಇರಾಕ್ ಮುಂತಾದ ಮುಸ್ಲಿಂ ರಾಷ್ಟ್ರಗಳನ್ನೆಲ್ಲ ವ್ಯಾಪಿಸಿದೆ. ಆದರೆ ಅದು ಆಡುಮಾತಿನಲ್ಲಿಯೂ, ಬರವಣಿಗೆಯಲ್ಲಿಯೂ ಎರಡು ಬೇರೆ ಭಾಷೆಗಳೇ ಎನ್ನುವ ಮಟ್ಟಿಗೆ ಬೇರೆ ಆಗಿದೆ.

ಇಂಗ್ಲಿಷ್, ಆಡುವವರ ಸಂಖ್ಯೆಯಲ್ಲಿ ಚೀನೀ ಭಾಷೆಗೆ ಎರಡನೆಯದಾದರೂ ಲೋಕವ್ಯಾಪ್ತಿಯಲ್ಲಿ ಅದೇ ಮೊದಲನೆಯದು. ಅಮೆರಿಕಾ, ಕೆನಡಾ, ಆಸ್ಟ್ರೇಲಿಯಾ, ನ್ಯೂಜಿಲ್ಯಾಂಡ್, ಬ್ರಿಟನ್‌ಗಳಲ್ಲಿ ಅದು ಆದ್ಯಭಾಷೆ. ಹಿಂದೆ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿದ್ದ ರಾಷ್ಟ್ರಗಳಲ್ಲೆಲ್ಲ ಇಂದಿಗೂ ಅದು ಮುಖ್ಯ ಭಾಷೆಯಾಗಿ ಉಳಿದಿದೆ. ಅಂತರರಾಷ್ಟ್ರೀಯ ಭಾಷೆಯ ಸ್ಥಾನಮಾನವನ್ನು

ಗಳಿಸಿರುವ ಭಾಷೆ ಅದೊಂದೇ ಎಂದರೆ ಉತ್ಪ್ರೇಕ್ಷೆಯಾಗಲಾರದು. ರಷ್ಯಾ ದೇಶದಲ್ಲಿ ಬಹುಸಂಖ್ಯಾತರ ಭಾಷೆ ರಷ್ಯನ್. ಅದರ ಜೊತೆಗೆ ಇನ್ನೂ ೧೪೫ ಭಾಷೆಗಳು ಅಲ್ಲಿ ಬಳಕೆಯಲ್ಲಿವೆ. ಫ್ರೆಂಚ್, ಜರ್ಮನ್, ಸ್ಪ್ಯಾನಿಷ್ ಹಲವಾರು ಕಾರಣಗಳಿಂದಾಗಿ ಲೋಕದಾದ್ಯಂತ ಮುಖ್ಯ ಭಾಷೆಗಳಾಗಿವೆ. ವಿದ್ಯಾ ಕ್ಷೇತ್ರದಲ್ಲಂತೂ ಫ್ರೆಂಚ್, ಜರ್ಮನ್ ಗಣನೀಯ ಸ್ಥಾನ ಪಡೆದಿವೆ. ಸ್ಪ್ಯಾನಿಷ್ ಸ್ಪೆಯಿನ್‌ನಲ್ಲಿ ಮಾತ್ರ ನಿಲ್ಲದೆ ಮೆಕ್ಸಿಕೊ, ಕ್ಯೂಬ, ಪೋರ್ಟರಿಕೊ, ಮತ್ತು ದಕ್ಷಿಣ ಅಮೆರಿಕಾದ ಹಲವು ದೇಶಗಳಲ್ಲಿ ಹರಡಿಕೊಂಡಿದೆ. ಬ್ರೆಜಿಲ್‌ನ ಮುಖ್ಯಭಾಷೆ ಪೋರ್ಚುಗೀಸ್. ಯೂರೋಪಿನ ಭಾಷೆಗಳು ಮುಖ್ಯವಾಗಿ ರಾಜಕೀಯ ಕಾರಣಗಳಿಂದಾಗಿ ಏಷ್ಯಾ, ಆಫ್ರಿಕಾ, ಅಮೆರಿಕಾಗಳಲ್ಲಿ ಪ್ರಸರಿಸಿವೆ. ಹತ್ತು ಲಕ್ಷಕ್ಕೂ ಹೆಚ್ಚು ಜನ ಆಡುವ ಭಾಷೆಗಳು ಬಹುಮಾಡಿ ಇನ್ನೂರಕ್ಕೂ ಹೆಚ್ಚಿರಲಾರವು. ಇವುಗಳಲ್ಲಿ ಹಲವು ತುಂಬ ಅಪರೂಪದವು. ಅವುಗಳಲ್ಲಿ ಪ್ರಸಿದ್ಧವಾದಂತಹವು ನೂರೂ ಇರಲಾರವೇನೋ ಎನ್ನಿಸುತ್ತದೆ.

ಹೀಗೆ ಲೋಕದ ತುಂಬ ಭಾಷೆಗಳು ಹರಡಿಕೊಂಡಿವೆ. ಎಲ್ಲ ಭಾಷೆಗಳ ಬಗೆಗೂ ಅರಿತವರು ಯಾರೂ ಇಲ್ಲ. ಆದರೂ ಭಾಷೆಗಳ ಹಂಚಿಕೆ, ಈ ಹಂಚಿಕೆಗೆ ಕಾರಣ; ಆಡುವವರ ಸಂಖ್ಯೆ, ಆಡುವ ದೇಶಗಳು—ಇವೆಲ್ಲ ಅಗತ್ಯವಾಗಿ ಗಮನಿಸಬೇಕಾದ ವಿಷಯಗಳು. ಭಾಷೆಯನ್ನು ನಾವು ಸಾಮಾಜಿಕ ಕ್ರಿಯೆಯೆಂದು ಪರಿಗಣಿಸಿದಾಗ, ಅವುಗಳ ಹಂಚಿಕೆ ಅತ್ಯಂತ ಮಹತ್ವಪೂರ್ಣವಾದ ಸಾಮಾಜಿಕ ಸ್ವರೂಪವನ್ನು ವ್ಯಕ್ತಪಡಿಸುತ್ತದೆ. ಭಾಷೆಯ ಹಂಚಿಕೆಯನ್ನು ಕುರಿತು ವಿಚಾರಮಾಡುವ ಶಾಸ್ತ್ರಭಾಗವನ್ನು 'ಭಾಷೆಗಳ ಭೂಗೋಳ'ವೆಂದು ಗುರುತಿಸಬಹುದು. ಕೆಲವರು ಇದನ್ನು 'ಭೂ-ಭಾಷಾಶಾಸ್ತ್ರ'ವೆಂದೂ ಕರೆಯುತ್ತಾರೆ.

೨

ಲೋಕದ ತುಂಬ ಹಲವು ಭಾಷೆಗಳು ಹರಡಿಕೊಂಡಿವೆ. ಮಾನವನ ಇತಿಹಾಸದ ಆರಂಭ ಕಾಲದಲ್ಲಿ ಇಷ್ಟೊಂದು ಭಾಷೆಗಳು ಖಂಡಿತವಾಗಿ ಇದ್ದಿರ ಲಾರವು. ಭಾಷೆ ಬೆಳೆಯುತ್ತಾ ಬೆಳೆಯುತ್ತಾ ಕವಲೊಡೆಯುವುದು ಸಹಜ.

ಆದಿಯಲ್ಲಿ ಒಂದೇ ಭಾಷೆ ಇತ್ತೋ ಇಲ್ಲವೋ; ಇರಲಿ ಇಲ್ಲದಿರಲಿ, ಮಿತ ಸಂಖ್ಯೆಯ ಭಾಷೆಗಳು ಇದ್ದಿರಬೇಕು. ಅವು ಕಾಲದ ಹಾಗೂ ದೇಶದ ಹರವಿಗೆ ಸಿಕ್ಕಿ ಚಿಕ್ಕಚಿಕ್ಕ ವ್ಯತ್ಯಾಸಗಳಿಂದ ಆರಂಭವಾಗಿ ಉಪಭಾಷೆಗಳಾಗಿ ಬೆಳೆದು ಬಳಿಕ ಬೇರೆ ಬೇರೆಯ ಭಾಷೆಗಳಾಗಿ ನಿಂತಿವೆ. ಭಾಷೆಯನ್ನು ಬಳಸುವವರ ನಡುವೆ ಅನ್ಯೋನ್ಯ ಸಂಪರ್ಕ ಕಡಿಮೆಯಾಗುವುದರಿಂದ ಇದು ಇಂದಿಗೂ ಸಾಧ್ಯವಾಗಿರುವ ಸ್ಥಿತಿ. ಜೀವಂತವಾದ ಭಾಷೆ ಇದರಿಂದ ತಪ್ಪಿಸಿಕೊಳ್ಳುವುದು ಕಷ್ಟ.

ಪ್ರತಿಯೊಂದು ಭಾಷೆಯನ್ನೂ ವಿವರವಾಗಿ ಅಭ್ಯಾಸಮಾಡುವುದು ಎಷ್ಟು ಅಗತ್ಯವೋ, ಭಾಷೆಗಳ ಪರಸ್ಪರ ಸಂಬಂಧವನ್ನು ಅಭ್ಯಾಸಮಾಡುವುದೂ ಅಷ್ಟೇ ಅಗತ್ಯ. ಒಂದು ಭಾಷೆಯ ಅಭ್ಯಾಸದಲ್ಲಿ ಬಗೆಹರಿಸಲಾರದ ಹಲವು ಸಮಸ್ಯೆಗಳು, ಆ ಭಾಷೆಗೆ ಸಂಬಂಧಿಸಿದ ಮತ್ತೊಂದು ಭಾಷೆಯ ಅಭ್ಯಾಸ ದಿಂದ ಪರಿಹಾರವಾಗಬಹುದು. ಭಾಷೆಗಳ ಅಭ್ಯಾಸದಲ್ಲಿ, ಅವನ್ನು ಅವುಗಳ ಪರಸ್ಪರ ಸಂಬಂಧದ ದೃಷ್ಟಿಯಿಂದ ವರ್ಗೀಕರಿಸಿಕೊಳ್ಳುವುದು ಅಗತ್ಯ. ಬಹುವಾಗಿ ಹರಡಿರುವ ಎಂಥದನ್ನೇ ಆಗಲಿ ಕ್ರಮವಾಗಿ ಜೋಡಿಸಿಕೊಳ್ಳುವ ಬಯಕೆ, ದೃಷ್ಟಿ ತೀರ ಸಾಮಾನ್ಯವಾದುದು. ವಿಜ್ಞಾನದಲ್ಲಂತೂ ಇದು ಅತ್ಯಗತ್ಯ. ಭಾಷೆಗಳ ವರ್ಗೀಕರಣ ಭಾಷಾಶಾಸ್ತ್ರದಲ್ಲಿ ಮುಖ್ಯವಾದ ವಿಚಾರ. ಪ್ರಕೃತಿ ಸಹಜವಾಗಿರುವಂತೆ, ಉಳಿದ ಎಷ್ಟೋ ವಿಷಯಗಳ ಹಾಗೆ ಭಾಷೆ ಗಳನ್ನು ನಿರ್ದಿಷ್ಟವಾದ ರೇಖೆಯನ್ನೆಳೆದು ವರ್ಗೀಕರಿಸುವುದು ಸಾಧ್ಯವಿಲ್ಲ. ಭಾಷೆಗಳ ಹಾಸುಹೊಕ್ಕು ಬಹಳ ನವುರಾದುದು; ಜಟಿಲವಾದುದು. ಆದರೆ ಯಾವುದಾದರೊಂದು ಮಾನದಿಂದ ಈ ಭಾಷೆಗಳನ್ನು ವರ್ಗೀಕರಿಸಿ ನಮ್ಮ ಅಭ್ಯಾಸಕ್ಕೆ ಅಳವಡಿಸಿಕೊಳ್ಳುವುದರಲ್ಲಿ ತುಂಬ ಪ್ರಯೋಜನವುಂಟು. ಪರಸ್ಪರ ಹೋಲಿಕೆಯಿಂದ ಅವುಗಳ ಸ್ವರೂಪ ಹೆಚ್ಚು ವಿಶದವಾಗುತ್ತದೆ. ನಮಗೆ ಭಯ ಮೂಡಿಸುವ ಅವುಗಳ ಸಂಖ್ಯೆ ಕೈಯೆಣಿಕೆಗೆ ಸಾಧ್ಯವಾಗುವಷ್ಟು ಗುಂಪುಗಳಾದಾಗ ಎಷ್ಟೋ ಧೈರ್ಯ ಬರುತ್ತದೆ; ಕೆಲಸ ಹಗುರವಾಗುತ್ತದೆ.

ಭಾಷೆಗಳನ್ನು ವರ್ಗೀಕರಿಸುವಾಗ ನಾವು ಗಮನಿಸಬೇಕಾದದ್ದು ಏನು? ನಾವು ಇಟ್ಟುಕೊಳ್ಳಬೇಕಾದ ಮಾನ ಯಾವುದು? ಭಾಷೆಯೆ? ಭಾಷೆ ಯನ್ನು ಆಡುವ ಜನವೆ? ಅಥವಾ ಈ ಜನ ಜೀವಿಸುವ ನೆಲವೆ?

ಭಾಷೆಗಳನ್ನು ಭೌಗೋಲಿಕ ಹಂಚಿಕೆಗೆ ಅನುಗುಣವಾಗಿ ವರ್ಗೀಕರಿಸಿದರೆ ನಾವು ಏನನ್ನೂ ಕಂಡುಕೊಂಡಂತೆ ಆಗುವುದಿಲ್ಲ. ಆಫ್ರಿಕಾದ ಭಾಷೆಗಳು, ಏಷಿಯಾದ ಭಾಷೆಗಳು, ಯೂರೋಪಿನ ಭಾಷೆಗಳು ಎಂದರಾಗಲೀ, ರಷ್ಯಾದ ಭಾಷೆಗಳು, ಭಾರತೀಯ ಭಾಷೆಗಳು, ಲ್ಯಾಟಿನ್ ಅಮೆರಿಕಾದ ಭಾಷೆಗಳು ಎಂದರಾಗಲೀ ಏನನ್ನೂ ಹೇಳಿದಂತೆ ಆಗಲಿಲ್ಲ. ನಮ್ಮ ದೇಶದ ಭಾಷೆಗಳನ್ನೇ ಉದಾಹರಣೆಗೆ ತೆಗೆದುಕೊಂಡರೆ ಈಗ ಬಳಕೆಯಲ್ಲಿರುವ ಹಿಂದೀ, ಬಂಗಾಳೀ, ಗುಜರಾತಿ ಮೊದಲಾದ ಭಾಷೆಗಳು ಒಂದು ಗುಂಪಿನವು ; ಕನ್ನಡ, ತಮಿಳು, ತೆಲುಗು ಮುಂತಾದ ಭಾಷೆಗಳೇ ಒಂದು ಗುಂಪು ; ಸಾಂತಾಲಿ, ಮುಂಡಾರಿ, ಖಡಿಯ ಮೊದಲಾದವುಗಳದೇ ಒಂದು ಗುಂಪು ; ಹಿಮಾಲಯದ ತಪ್ಪಲಿನುದ್ದಕ್ಕೂ ಅಸ್ಸಾಮಿನ ಗಡಿಪ್ರದೇಶಗಳಲ್ಲಿ ಬಳಕೆಯಲ್ಲಿರುವ ಭಾಷೆಗಳೇ ಮತ್ತೊಂದು ಗುಂಪು. ಈ ಗುಂಪಿಗೆ ಸೇರದ ಭಾಷೆಗಳೂ ಒಂದೆರಡಿವೆ. ಈ ಗುಂಪುಗಳೆಲ್ಲವನ್ನೂ ಕೂಡಿಸಿ ಭೌಗೋಲಿಕವಾಗಿ ಭಾರತೀಯ ಭಾಷೆಗಳು ಎಂಬ ಒಂದು ಗುಂಪನ್ನು ನಿರ್ಮಿಸಿಕೊಂಡರೆ, ನಾವು ಯಾವ ಉದ್ದೇಶಕ್ಕಾಗಿ ಭಾಷೆಗಳನ್ನು ವರ್ಗೀಕರಿಸಬೇಕೆಂದು ನಿರ್ಧರಿಸಿದೆವೋ ಆ ಉದ್ದೇಶ ಈಡೇರುವುದಿಲ್ಲ. ಅಗತ್ಯಕ್ಕೆ ಅನುಗುಣವಾದ ವರ್ಗೀಕರಣಕ್ಕೆ ಬದಲಾಗಿ, ವರ್ಗೀಕರಣಕ್ಕಾಗಿ ವರ್ಗೀಕರಣವೊಂದು ತಲೆಯೆತ್ತುತ್ತದೆ. ಈ ಬಗೆಯ ಭೌಗೋಲಿಕ ವರ್ಗೀಕರಣದಿಂದ ಉಪಯೋಗಗಳೇನೇ ಇರಲಿ, ಭಾಷೆಗಳ ಪರಸ್ಪರ ಸಂಬಂಧ, ಅವುಗಳ ಅಭ್ಯಾಸ—ಈ ದೃಷ್ಟಿಯಿಂದ ಅದರ ಉಪಯೋಗವೇನೂ ಇಲ್ಲ.

ಭಾಷೆಯನ್ನು ಬಳಸುವ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡು ವರ್ಗೀಕರಿಸುವ ವಿಧಾನವಾದರೂ ಹೀಗೆಯೇ ನಿಷ್ಫಲವಾದುದು. ಈ ಜನಾಂಗಿಕ ವರ್ಗೀಕರಣ ಒಂದು ಕಾಲದಲ್ಲಿ ತುಂಬ ಪ್ರಚಾರದಲ್ಲಿತ್ತು. ಒಂದು ಜನಾಂಗಕ್ಕೆ ಅದರದೇ ಆದ ವಿಶಿಷ್ಟವಾದ ಭಾಷೆಯೊಂದಿರುತ್ತದೆ ಎಂಬ ತಪ್ಪು ಕಲ್ಪನೆ ಈ ವರ್ಗೀಕರಣಕ್ಕೆ ಕಾರಣವಾಯಿತು. ಇದರ ಫಲವಾಗಿ ಆರ್ಯನ್ ವರ್ಗದ ಭಾಷೆಗಳು, ಸಿಥಿಯನ್ ವರ್ಗದ ಭಾಷೆಗಳು, ಸೆಮಿಟಿಕ್ ವರ್ಗದ ಭಾಷೆಗಳು ಮುಂತಾಗಿ ಪ್ರಚಾರಕ್ಕೆ ಬಂದ ವರ್ಗೀಕರಣದ ಹಿಂದೆ ಜನಾಂಗ ಮುಖ್ಯವಾಗಿ ನಿಂತಿತ್ತು. ಈ ವರ್ಗೀಕರಣದ ವ್ಯಾಪ್ತಿಯಲ್ಲಿ ಲೋಕದ ಎಷ್ಟೋ

ಭಾಷೆಗಳು ಬಾರದೆ ಹೋದದ್ದು ಮಾತ್ರವಲ್ಲ, ಜನಾಂಗಿಕ ವರ್ಗೀಕರಣವನ್ನು ಸೂಚಿಸಿ. ಘೋಷಿಸಿದವರು ಭಾಷೆಯೊಂದು ಸಾಮಾಜಿಕ ಕ್ರಿಯೆ ಎಂಬ ಸಾಮಾನ್ಯ ಸತ್ಯವನ್ನು ಮರೆತು, ಚರ್ಮದ ಬಣ್ಣ, ಮೂಗಿನ ಗಾತ್ರ ಕೂದಲಿನ ಆಕಾರ—ಇವುಗಳಂತೆ ಭಾಷೆಯೂ ಆನುವಂಶಿಕವಾದುದೆಂದು ಭ್ರಮಿಸಿದರು.

ಅಮೆರಿಕೆಯಲ್ಲಿ ಕಪ್ಪು ಜನರೂ ಬಿಳಿಯ ಜನರೂ ಇಂಗ್ಲಿಷನ್ನೇ ಆಡುತ್ತಾರೆ; ಆಫ್ರಿಕಾದ ಕಪ್ಪು ಜನರ ಭಾಷೆ ಒಂದೇ ಅಲ್ಲ; ಯೂರೋಪಿನವನೊಬ್ಬನ ಭಾಷೆಯನ್ನು ಕೇಳದೆ ನಾವು ಅವನು ಇಟಲಿಯವನೋ, ಫ್ರಾನ್ಸಿನವನೋ ಅಥವಾ ಬೇರೆ ದೇಶದವನೋ ಎಂದು ಹೇಳಲು ಬರುವುದಿಲ್ಲ; ನಮ್ಮಲ್ಲಿಯೇ ಸಂಸ್ಕೃತ ಮತ್ತು ಅದಕ್ಕೆ ಸಂಬಂಧಿಸಿದ ಭಾಷೆಗಳನ್ನು ಉಪಯೋಗಿಸುವವರು ಆರ್ಯರು ಮಾತ್ರವೇನು? ಯಾರು ಆರ್ಯರು? ಯಾರು ದ್ರಾವಿಡರು ಎಂಬುದು ಮಾನವಶಾಸ್ತ್ರದ ವಿಷಯವಲ್ಲದೆ ಈಗ ವಾಸ್ತವ ಸತ್ಯವಾಗಿ ಉಳಿದಿಲ್ಲ. ಮೈಸೂರಿನ ಮಗು ಚೀಣಾದೇಶದಲ್ಲಿ ಕಲಿಯುವುದು ಚೀನಿಯನ್ನಲ್ಲದೆ ಕನ್ನಡವನ್ನಲ್ಲ. ಚೀನಿಯನ್ನು ಕಲಿತರೂ ಅದರ ಕಣ್ಣು ಮೂಗು ಬದಲಾಗುವುದೇ ಇಲ್ಲ! ಭಾಷೆ ಕಲಿತು ಬರವಂಥದು; ಕಲೆತು ಬರುವಂಥದು: ಕುಲದಿಂದ ಕೂಡಿ ಬರುವುದಲ್ಲ. ಈ ಸಾಮಾನ್ಯವಾದ ವಿಚಾರಗಳು, ಭಾಷೆಯ ವರ್ಗೀಕರಣದಲ್ಲಿ ಜನಾಂಗದ ಪ್ರಶ್ನೆ, ಭೌಗೋಲಿಕ ವಿಚಾರದಂತೆಯೇ ನಮ್ಮ ನೇರವಾದ ಉಪಯೋಗಕ್ಕೆ ನೆರವಾಗುವುದಿಲ್ಲವೆಂಬುದನ್ನು ಸೂಚಿಸುತ್ತವೆ.

ಆದುದರಿಂದ ಭಾಷೆಗಳ ವರ್ಗೀಕರಣದಲ್ಲಿ ನಾವು ಆದ್ಯಗಮನ ಕೊಡಬೇಕಾದದ್ದು ಭಾಷೆಗಳಿಗೆ, ಅವುಗಳನ್ನು ಆಡುವವರಿಗಲ್ಲ; ಅವನ್ನು ಆಡುವ ಜನರಿರುವ ಪ್ರದೇಶಕ್ಕಲ್ಲ. ಭಾಷೆಗಳನ್ನು ಪರಿಶೀಲನೆಗೆ ತೆಗೆದುಕೊಂಡಾಗ ನಮಗೆ ಮೊದಲು ಕಾಣುವುದು ಅವುಗಳ ರಚನೆ: ಭಾಷೆಗಳು ಬಳಸುವ ಧ್ವನಿ, ಆಕೃತಿ, ಪದ; ಅವುಗಳಲ್ಲಿ ಕಂಡುಬರುವ ವ್ಯಾಕರಣ ವ್ಯವಸ್ಥೆ; ವಾಕ್ಯರಚನೆಯ ಕ್ರಮ. ಎರಡನೆಯದಾಗಿ ನಾವು ಗಮನಿಸಬೇಕಾದದ್ದು ಅವುಗಳ ಇತಿಹಾಸ. ಹೀಗೆ ಭಾಷೆಗಳನ್ನೇ ಆಧರಿಸಿ ಅವುಗಳನ್ನು ವರ್ಗೀಕರಿಸುವುದರಲ್ಲಿ ಎರಡು ವಿಧಗಳಿವೆ: ಒಂದು ರಚನೆಯ ದೃಷ್ಟಿ, ಇನ್ನೊಂದು

ಚಾರಿತ್ರಿಕ ದೃಷ್ಟಿ. ವಾಕ್ಯವೇ ಭಾಷೆಯ ಮಾನದಂಡ. ವಾಕ್ಯದಲ್ಲಿರುವ ಪದಗಳಲ್ಲಿ ಒಂದೊಂದಕ್ಕೆ ಇರುವ ಸಂಬಂಧ ವ್ಯಕ್ತವಾಗುವ ರೀತಿ—ಸಾಧನ ಏನು ಎಂಬುದರ ಮೇಲೆ ರಚನೆಯ ದೃಷ್ಟಿ ಅವಲಂಬಿಸಿರುತ್ತದೆ. ಚಾರಿತ್ರಿಕ ದೃಷ್ಟಿಯ ವರ್ಗೀಕರಣದಲ್ಲಿಯೂ ರಚನೆಯ ಅಂಶಗಳು ತುಂಬ ನೆರವಾಗುತ್ತವೆ. ಈಗ ಭಾಷಾಶಾಸ್ತ್ರಕ್ಷೇತ್ರದಲ್ಲಿ ಹೆಚ್ಚು ಬಳಕೆಯಲ್ಲಿರುವುದು ಚಾರಿತ್ರಿಕ ದೃಷ್ಟಿಯ ವರ್ಗೀಕರಣ. ಇದನ್ನು ಸಾಧಿಸುವುದರಲ್ಲಿಯೇ ತೌಲನಿಕ ಭಾಷಾಶಾಸ್ತ್ರ ತಲೆಯೆತ್ತಿ ಈಗ ಬಹು ಪ್ರಮುಖವಾದ ಭಾಗವಾಗಿ ಬೆಳೆದಿದೆ.

ಭಾಷೆಯಲ್ಲಿನ ಆಕೃತಿಗಳನ್ನೂ ಅವುಗಳ ಸಂಬಂಧವನ್ನೂ ಲಕ್ಷಿಸಿ ಭಾಷೆಗಳನ್ನು ಹಲವು ವರ್ಗಗಳನ್ನಾಗಿ ಮಾಡಲಾಗಿದೆ. ಅವುಗಳಲ್ಲಿ ಮುಖ್ಯವಾದುವು: ಸ್ಥಾವರ, ಅಂತರ್ಗಮುಕ, ಸಂಶ್ಲೇಷಕ, ಪ್ರಾತ್ಯಯಿಕ, ಹಾಗೂ ವಿಶ್ಲೇಷಕ. ಸ್ಥಾವರ ವರ್ಗದ ಭಾಷೆಗಳಲ್ಲಿ ಚೀನೀ ಬಹು ಮುಖ್ಯವಾದದ್ದು. ಇವುಗಳಲ್ಲಿ ಬದ್ಧ ಆಕೃತಿಗಳಿಲ್ಲ. ವ್ಯಾಕರಣ ಪ್ರಕ್ರಿಯೆಗಳ ಗೊಂದಲವಿಲ್ಲ. ಪದಗಳು ಇದ್ದಂತೆಯೇ ನಿಂತು ಸಂದರ್ಭಕ್ಕೆ ತಕ್ಕಂತೆ ಅರ್ಥವನ್ನು ಕೊಡುತ್ತವೆ. ಎಸ್ಕಿಮೋ, ಗ್ರೀನ್‌ಲ್ಯಾಂಡಿಷ್ ಮುಂತಾದ ಭಾಷೆಗಳು ಅಂತರ್ಗಮುಕ ವರ್ಗಕ್ಕೆ ಉದಾಹರಣೆಗಳು. ಇಲ್ಲಿ ಪದ-ವಾಕ್ಯಗಳಿಗೆ ಭೇದವೇ ಕಾಣಿಸದು. ಹಲವು ಪದಗಳು ಬೆರೆತು, ವಾಕ್ಯವನ್ನೋ, ಹೇಳಿಕೆಯನ್ನೋ ವ್ಯಕ್ತಪಡಿಸುತ್ತವೆ. ಸಂಶ್ಲೇಷಕ ಭಾಷೆಗಳಿಗೆ ಟರ್ಕಿಷ್ ಅತ್ಯುತ್ತಮ ಉದಾಹರಣೆ. ಈ ಭಾಷೆಗಳಲ್ಲಿ ಒಂದೊಂದು ವ್ಯಾಕರಣ ಪ್ರಕ್ರಿಯೆಯನ್ನು ಸೂಚಿಸಲು ಒಂದೊಂದು ಅಂಶವಿರುತ್ತದೆ. ಇವು ಬಹುವಾಗಿ ಪ್ರತ್ಯಯಗಳು. ಸುಲಭವಾಗಿ ಗುರುತಿಸಬಹುದಾದಂಥ ಈ ಪ್ರತ್ಯಯಗಳು ಒಂದರ ಹಿಂದೊಂದು ಕೊಂಡಿಗೊಳ್ಳುತ್ತವೆ. ಇಂಡೋ-ಯೂರೋಪಿಯನ್ ವರ್ಗದ ಭಾಷೆಗಳನ್ನೊಳಗೊಂಡ ಪ್ರಾತ್ಯಯಿಕ ವರ್ಗದ ಭಾಷೆಗಳಲ್ಲಿ ವ್ಯಾಕರಣದ ಸಂಬಂಧಗಳೆಲ್ಲವೂ ಬಹು ಸಂದರ್ಭಗಳಲ್ಲಿ ಗುರುತಿಸಲಾಗದ ಪ್ರತ್ಯಯ ರೂಪಗಳಲ್ಲಿ ಪ್ರಕಟವಾಗುತ್ತವೆ. ಫ್ರೆಂಚ್, ಇಂಗ್ಲಿಷ್ ಮೊದಲಾದ ಆಧುನಿಕ ಭಾಷೆಗಳು ವಿಶ್ಲೇಷಕ ವರ್ಗಕ್ಕೆ ಸೇರಿದವು. ಇವುಗಳಲ್ಲಿ ವಾಕ್ಯಕ್ಕೆ ಆದ್ಯಗಮನ; ಪದಗಳ ಸ್ಥಾನ ಗೌಣ. ಪ್ರತ್ಯಯ ರೂಪಗಳು ಸವೆದು ಇಲ್ಲವೆ ಮಾಯವಾಗಿ ವಿವರಣಾತ್ಮಕವಾದ ವ್ಯಾಕರಣ ವಿಧಾನ ತಲೆಯೆತ್ತುತ್ತದೆ.

ಪದಗಳು, ಆಕೃತಿಗಳನ್ನು ಗಮನದಲ್ಲಿಟ್ಟುಕೊಂಡು ಬಹುಕಾಲ ಜನಪ್ರಿಯ ವಾಗಿದ್ದ ಈ ವರ್ಗೀಕರಣವೂ ನಮಗೆ ಸಮಾಧಾನ ಕೊಡುವುದಿಲ್ಲ. ಒಂದೇ ಭಾಷೆಯಲ್ಲಿ ಹಲವು ಲಕ್ಷಣಗಳು ಕಾಣಿಸುತ್ತವೆ; ಒಂದು ಲಕ್ಷಣಕ್ಕೆ ಬೇರೆ ಬೇರೆ ಭಾಷೆಗಳನ್ನು ನಾವು ಉದಾಹರಿಸಬಹುದು. ಇಂಗ್ಲಿಷ್ ಭಾಷೆ ಕೆಲ ಕೆಲ ಸಂದರ್ಭಗಳಲ್ಲಿ ಪ್ರಾತ್ಯಯಿಕವೂ ಆಗಬಹುದು, ಅಂತರ್ಗಮಕವೂ ಆಗ ಬಹುದು, ವಿಶ್ಲೇಷಕವೂ ಆಗಬಹುದು. ಕನ್ನಡ ಸಂಶ್ಲೇಷಕ ಭಾಷೆ. ಮನೆ, ಮನೆಯಿಂದ, ಮನೆಗಳು, ಮನೆಗಳಿಂದ—ಎಂಬ ರೂಪಗಳನ್ನು ಅದೇ ಅರ್ಥದ ಟರ್ಕಿಷ್ ಭಾಷೆಯ ಆ ರೂಪಗಳೊಡನೆ ಹೋಲಿಸಿ ನೋಡ ಬಹುದು : ev, ev-den, ev-ler, ev-ler-den. ಆದರೆ ಅದೆಕೊಳ್ ಎನ್ನುವುದು ಅಗೋ ಎಂಬ ರೂಪ ತಾಳಿದಾಗ, ತೆಗೆದುಕೊಳ್ ಎಂಬುದು ತಗೊ ಎಂದು ಮಾರ್ಪಟ್ಟಾಗ ಇಲ್ಲಿ ಅಂಗರ್ಗಮಕ ಲಕ್ಷಣಕ್ಕೆ ಉದಾಹರಣೆ ದೊರೆಯುತ್ತದೆ. ಉಂಡು ಎನ್ನುವುದನ್ನು ಊಟಮಾಡಿ ಎನ್ನುವಾಗ ಕನ್ನಡ ವಿಶ್ಲೇಷಕ ಲಕ್ಷಣಗಳ ಕಡೆ ಹೊರಳುತ್ತದೆ.

ರಚನೆಯ ದೃಷ್ಟಿಯಿಂದ ಮಾಡಿಕೊಂಡ ವರ್ಗೀಕರಣಗಳಲ್ಲಿ ಈ ಕುಂದು ಗಳು ಕಂಡಿದ್ದರಿಂದ ಭಾಷೆಗಳ ವಿಕಾಸಕ್ಕೆ ಅನುಸಾರವಾಗಿ ಅವುಗಳನ್ನು ಗುರುತಿಸಿ ಗುಂಪು ಮಾಡುವುದು ಈ ವಿಧಾನದಲ್ಲಿ ಸಾಧ್ಯವಾಗದುದರಿಂದ ಚಾರಿತ್ರಿಕ ವಿಧಾನ ಬಹುಬೇಗ ಜನಪ್ರಿಯವಾಯಿತು. ಭಾಷೆಗಳನ್ನು ಅವು ಗಳ ಹುಟ್ಟು ಬೆಳವಣಿಗೆಗೆ ಅನುಗುಣವಾಗಿ ವಿಭಾಗಿಸಿ, ಅವುಗಳೊಳಗಿನ ಸಂಬಂಧವನ್ನು ಗುರುತಿಸಿ, ಭಾಷಾಪರಿವಾರಗಳನ್ನು ಕ್ರಮಗೊಳಿಸುವುದು ಸಾಧ್ಯವಾಯಿತು. ಭಾಷಾಪರಿವಾರದ ಕಲ್ಪನೆ, ಸ್ಥಾಪನೆ ಆಧುನಿಕ ಕಾಲದ ಒಂದು ಮಹತ್ವಪೂರ್ಣವಾದ ಸಾಧನೆಯಾಗಿದೆ. ಈ ಅದ್ಭುತವಾದ ಸಾಧನೆಗೆ ಮುಖ್ಯವಾದ ಕಾರಣ—ಭಾಷೆಗಳ ವರ್ಗೀಕರಣ ವಿಧಾನದಲ್ಲಿ ಅಳವಡಿಸಿದ ಚಾರಿತ್ರಿಕ ದೃಷ್ಟಿ; ಗಮನಿಸಿದ ಅವುಗಳ ವಂಶಸಂಬಂಧ.

೩

ಭಾಷೆಗಳ ಪರಿವಾರ—ಭಾಷೆಗಳೊಳಗಿನ ಪರಸ್ಪರ ವಂಶಸಂಬಂಧವನ್ನು, ಐತಿಹಾಸಿಕ ಬೆಳವಣಿಗೆಯನ್ನು ಗುರುತಿಸಿದುದರ ಫಲ. ಜಗತ್ತಿನಲ್ಲೆಲ್ಲ ಚೆದರಿರುವ ಭಾಷೆಗಳನ್ನು ಅವುಗಳ ಸಂಬಂಧವನ್ನನುಸರಿಸಿ ಕೇವಲ ಕೆಲವು ಪರಿವಾರಗಳನ್ನಾಗಿ ವರ್ಗೀಕರಿಸಲಾಗಿದೆ. ಇದರಿಂದ ಭಾಷೆಗಳೊಳಗಿನ ಜ್ಞಾತಿತ್ವವನ್ನು ಸ್ಥಾಪಿಸಿದಂತಾಗಿದೆ. ಆಧುನಿಕ ವಿಚಾರಧಾರೆಯಲ್ಲಿ ಇದೊಂದು ಮಹತ್ವಪೂರ್ಣವಾದ ಹೆಜ್ಜೆ. ಮಾನವನ ಜೀವನ-ಪರಿಸರಗಳ ವಿಕಾಸಕ್ಕೆ ಸಂಬಂಧಿಸಿದಂತೆ ಗಮನಾರ್ಹವಾದ ಸಂಶೋಧನೆಯ ಫಲ. ಈ ಕ್ಷೇತ್ರದ ಕೆಲಸದ ಬಹುಪಾಲು ನಡೆದದ್ದು, ಭಾಷೆಗಳ ಪರಿವಾರದ ಕಲ್ಪನೆಗೆ ಪೂರ್ಣ ಸ್ವರೂಪ ದೊರೆತದ್ದು ಕಳೆದ ಶತಮಾನದಲ್ಲಿ. ಆದರೆ ವಾಸ್ತವವಾಗಿ ಈ ವಿಚಾರ ತಲೆಯೆತ್ತಿದ್ದು ಹದಿನೆಂಟನೆಯ ಶತಮಾನದಲ್ಲಿ. ಸರ್ ವಿಲಿಯಂ ಜೋನ್ಸನೇ ಇದರ ಮೂಲಪುರುಷನೆಂದೂ ಹೇಳಬಹುದು. ಇವನಿಗಿಂತ ಹಿಂದೆ ಈ ದಿಕ್ಕಿನಲ್ಲಿ ಯೋಚನೆ ಮಾಡಿದವರು, ಕೆಲಸಕ್ಕೆ ಕೈಹಾಕಿದವರು ಇರಲಿಲ್ಲವೆಂದಲ್ಲ. ಆ ಬಗೆಯ ಪ್ರಯತ್ನಗಳಿಗೆ ಖಚಿತವಾದ ಒಂದು ರೂಪ ದೊರೆತಿರಲಿಲ್ಲ; ಚೆದರಿ ಹೋಗಿದ್ದ ವಿಚಾರಧಾರೆಗೆ ಒಂದು ಸ್ವರೂಪ ಲಭಿಸಿರಲಿಲ್ಲ. ೧೭೮೬ ರಲ್ಲಿ ಕಲ್ಕತ್ತೆಯ ರಾಯಲ್ ಏಷಿಯಾಟಿಕ್ ಸೊಸೈಟಿಯ ಆರಂಭ ಭಾಷಣದಲ್ಲಿ ಜೋನ್ಸ್ ಭಾಷೆಗಳ ಜ್ಞಾತಿತ್ವವನ್ನು ಪ್ರಸ್ತಾಪಿಸಿದ. ಆ ಭಾಷಣವನ್ನು ಉದ್ಧರಿಸದ ಭಾಷಾಶಾಸ್ತ್ರದ ಗ್ರಂಥವೇ ಇಲ್ಲವೆನ್ನಬಹುದಾದಷ್ಟು ಮಟ್ಟಿಗೆ ಅದು ಪ್ರಖ್ಯಾತವಾಗಿದೆ. ಕೇವಲ ಆಕಸ್ಮಿಕವಾಗಿ ಸಂಭವಿಸಿದೆ ಎಂದು ಹೇಳಲಾಗದ ಮಟ್ಟಿಗೆ ಸಂಸ್ಕೃತ, ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳು ಸಂಬಂಧವನ್ನು ಹೊಂದಿವೆ. ಬಹುಶಃ ಈಗ ಉಳಿದಿಲ್ಲದ ಒಂದು ಮೂಲದಿಂದ ಇವು ಮೂರೂ ಬೆಳೆದು ಬಂದಿವೆ. ಇದೇ ಕಾರಣಗಳಿಂದ ಗಾಥಿಕ್ ಮತ್ತು ಕೆಲ್ಟಿಕ್‌ಗಳು ಕೂಡ ಸಂಸ್ಕೃತಕ್ಕೆ ಸಂಬಂಧಿಸಿದವಾಗಿವೆ. ಅಲ್ಲದೆ ಪ್ರಾಚೀನ ಪರ್ಷಿಯನ್ ಭಾಷೆಯನ್ನು ಕೂಡ ಇದೇ ಗುಂಪಿಗೆ ಸೇರಿಸಬಹುದು—ಎಂಬುದಾಗಿ ಜೋನ್ಸ್ ಉದ್ಘೋಷಿಸಿದ. ಈಗ ನಾವು ಯಾವುದನ್ನು ಇಂಡೋ-ಯೂರೋಪಿಯನ್ ಪರಿವಾರವೆಂದು ಕರೆಯು

ತ್ತೇವೆಯೊ, ಆ ಪರಿವಾರದ ಹೊಳವು ಜೋನ್ಸನ ಭಾಷಣದಲ್ಲಿದೆ. ತೌಲನಿಕ ಭಾಷಾಶಾಸ್ತ್ರದಲ್ಲಿ ಜೋನ್ಸ್ ಹೊಸ ಕ್ಷಿತಿಜವೊಂದನ್ನು ತೆರೆದ.

ಭಾಷೆಗಳ ಪರಿವಾರದ ನಿರ್ಣಯಕ್ಕೆ ನಾವು ಮುಖ್ಯವಾಗಿ ಗಮನಿಸ ಬೇಕಾಗುವುದು ಪರಿಶೀಲನೆಯಲ್ಲಿರುವ ಭಾಷೆಗಳಲ್ಲಿ ಕಂಡುಬರುವ ಸಾದೃಶ್ಯ. ಈ ಸಾದೃಶ್ಯ ಮೂರು ಬಗೆಯಾಗಿರಬಹುದು: ಮೊದಲನೆಯದು—ಆಕಸ್ಮಿಕ; ಎರಡನೆಯದು—ಸ್ವೀಕರಣದ ಫಲ; ಮೂರನೆಯದು—ಪರಸ್ಪರ ಸಂಬಂಧದಿಂದ ಸಾಧ್ಯವಾದದ್ದು. ಎರಡು ಅಥವಾ ಹೆಚ್ಚಿನ ಭಾಷೆಗಳು ಒಂದು ಮೂಲದಿಂದ ಬೇರೆ ಬೇರೆ ವಿಕಾಸಗಳ ಫಲವಾಗಿ ಬಂದಿದ್ದರೆ ಅವನ್ನು ನಾವು ಪರಸ್ಪರ ಸಂಬಂಧವನ್ನುಳ್ಳ ಭಾಷೆಗಳು ಎನ್ನುತ್ತೇವೆ. ಆಕಸ್ಮಿಕ ಕಾರಣಗಳಿಂದ ಹಾಗೂ ಸ್ವೀಕರಣದ ಫಲದಿಂದ ಕಂಡುಬರುವ ಸಾದೃಶ್ಯ ದಿಂದ ಭಾಷೆಗಳ ಪರಿವಾರದ ನಿರ್ಣಯಕ್ಕೆ ನೆರವು ದೊರೆಯುವುದಿಲ್ಲ. ಇಂಗ್ಲಿಷಿನಲ್ಲಿ 'ಗಾಡಿ (gaudy)' ಎಂಬ ಪದವಿದೆ. ಸ್ವಲ್ಪ ಹೆಚ್ಚುಕಡಿಮೆ ಈ ಅರ್ಥವನ್ನೇ ಉಳ್ಳ 'ಗಾಡಿ' ಕನ್ನಡದಲ್ಲಿಯೂ ಇದೆ—ಕಾಂತಿಯುತವಾದದು, ಚೆಲುವಾದದ್ದು ಎಂಬ ಅರ್ಥದಲ್ಲಿ. ಪದಗಳ ರೂಪ ಒಂದೇ; ಅರ್ಥ ಒಂದೇ. ಇದು ಕೇವಲ ಆಕಸ್ಮಿಕ. ಇವು ಪರಸ್ಪರ ಸಂಬಂಧಪಟ್ಟವಲ್ಲ. ಹೀಗೆಯೇ ಇಂಗ್ಲಿಷಿನ 'ಒನ್' ಕನ್ನಡದ 'ಒಂದು'—ಆಕಸ್ಮಿಕ ಸಾದೃಶ್ಯವುಳ್ಳವು. ಯಾವುದೇ ಭಾಷೆಯಲ್ಲಾದರೂ ನಿಯಮಿತ ಸಂಖ್ಯೆಯ ಧ್ವನಿಗಳು ಉಪ ಯೋಗದಲ್ಲಿರುತ್ತವೆ. ಲೋಕದ ಬಹು ಭಾಷೆಗಳಲ್ಲಿ ಹೆಚ್ಚು ಧ್ವನಿಗಳು ಒಂದೇ ಬಗೆಯವಾಗಿರುತ್ತವೆ. ಅವನ್ನು ಬಗೆ ಬಗೆಯಾಗಿ ಜೋಡಿಸಿಕೊಳ್ಳು ವಾಗ ಹೀಗೆ ಆಕಸ್ಮಿಕ ಸಾದೃಶ್ಯಗಳುಂಟಾಗುವುದು ಅನಿವಾರ್ಯವಾಗುತ್ತದೆ. ಮತ್ತೆ, ಭಾಷೆ ದ್ವೀಪಜೀವಿಯಾಗಿ ಬದುಕಲಾರದು. ಒಂದು ಭಾಷೆ ಇನ್ನೊಂದು ಭಾಷೆಯಿಂದ ಧಾರಳವಾಗಿ ತೆಗೆದುಕೊಳ್ಳುತ್ತದೆ; ಮತ್ತೊಂದು ಭಾಷೆಗೆ ಕೊಡುತ್ತದೆ. ಈ ಕೊಡು-ಕೊಳ್ಳುವಿಕೆಗಳು ಜೀವಂತ ಭಾಷೆಯ ಒಂದು ಲಕ್ಷಣ. ಹೀಗೆ ಒಂದು ಭಾಷೆಯಿಂದ ಇನ್ನೊಂದು ಭಾಷೆ ಎತ್ತಿ ಕೊಂಡಾಗ ಈ ಸ್ವೀಕರಣದ ಫಲವಾಗಿ ಸಾದೃಶ್ಯಗಳುಂಟಾಗುತ್ತವೆ. ಸಂಸ್ಕೃತದ ಇಂಗ್ಲಿಷಿನ ಎಷ್ಟೋ ಪದಗಳು ನಮ್ಮ ಮಾತಿನಲ್ಲಿ ಬಂದಿವೆ. ಇವುಗಳ ಆಧಾರದಿಂದಲೂ ಭಾಷೆಗಳ ಸಂಬಂಧ ನಿರ್ಧಾರವಾಗದು.

ಈ ಗುಣ ಅಂಟಿಕೊಂಡದ್ದು, ಬೆಳೆದು ಬಂದದ್ದಲ್ಲ.

ಭಾಷೆಗಳ ಸಂಬಂಧ ಸ್ಥಾಪನೆಗೆ ಸಾಧ್ಯವಾಗುವ ಸಾದೃಶ್ಯವನ್ನು ನಾವು ಹೆಚ್ಚಿನ ಗಮನವಹಿಸಿ ನೋಡಬೇಕಾಗುತ್ತದೆ. ಇದಕ್ಕೆ ಸಮಗ್ರವಾದ ಭಾಷಾಸಾಮಗ್ರಿಯನ್ನು ಪರಿಶೀಲನೆಗೆ ಒಳಪಡಿಸಬೇಕು. ಈ ಸಾಮಗ್ರಿಯಲ್ಲಿ ತುಂಬ ಮುಖ್ಯವಾದದ್ದು ಪದಗಳು ಹಾಗೂ ವ್ಯಾಕರಣ. ಇವೇ ಭಾಷಾ ಪರಿವಾರದ ನಿರ್ಣಯಕ್ಕಿರುವ ಸಾಧನಗಳು. ಮೊಟ್ಟಮೊದಲು ನಮ್ಮ ಗಮನಕ್ಕೆ ಬರುವುದು ಶಬ್ದಕೋಶ. ಎರಡು ಅಥವಾ ಹೆಚ್ಚಿನ ಭಾಷೆಗಳಲ್ಲಿ ಹಲವು ಸಮಾನ ಶಬ್ದಗಳಿದ್ದಾಗ—ಆಕಸ್ಮಿಕ ಹಾಗೂ ಸ್ವೀಕರಣದ ಕಾರಣಗಳನ್ನು ಕಳೆದಿರುವುದರಿಂದ—ಅವು ಒಂದು ಮೂಲದಿಂದ ಬಂದವೆಂಬ ಸಂದೇಹ ಅನಿವಾರ್ಯ. ಎಷ್ಟೋ ಸಲ ಪದಗಳು ಗುರುತಿಸಲಾರದಷ್ಟು ಬದಲಾವಣೆ ಹೊಂದುವುದರಿಂದ, ವಿಶಿಷ್ಟವಾದ ಕೆಲವು ಪದಗಳನ್ನು ಮಾತ್ರ ನೋಡಬೇಕಾಗುತ್ತದೆ. ಯಾವುದೇ ಭಾಷೆಯ ಪದಗಳನ್ನಾದರೂ ನಾವು ಸ್ಥೂಲವಾಗಿ ಎರಡು ಗುಂಪು ಮಾಡಬಹುದು. ಮೊದಲ ಗುಂಪು ಸಾಂಸ್ಕೃತಿಕವಾದದ್ದು ; ಎರಡನೆಯದು ದೈನಂದಿನ ಉಪಯೋಗದ್ದು. ಮೊದಲನೆಯದು—ದೇವರು, ಧರ್ಮ, ಕಲೆ, ಸಾಹಿತ್ಯ, ತತ್ತ್ವ, ಶಾಸ್ತ್ರ, ವಿಜ್ಞಾನ ಮೊದಲಾದವುಗಳಿಗೆ ಸಂಬಂಧಿಸಿದ್ದು, ಐಚ್ಛಿಕವಾಗುವಂಥದು. ಎರಡನೆಯದು—ಭಾಷೆಯ ಬೆನ್ನುಮೂಳೆಯಂಥದು, ದಿನಚರಿಯ ವ್ಯವಹಾರಕ್ಕೆ ಅಗತ್ಯವಾದದ್ದು, ಭಾಷೆಯ ಬಳಕೆಗೆ ಅನಿವಾರ್ಯವಾದದ್ದು. ದೇಹದ ಅಂಗಗಳು, ಬಂಧುವಾಚಕಗಳು, ಬಳಕೆಯ ವಸ್ತುಗಳು, ಧಾತುಗಳು, ಪ್ರಾಣಿಗಳು, ಸರ್ವನಾಮಗಳು, ಸಂಖ್ಯಾವಾಚಕಗಳು ಈ ಬಗೆಯ ಸಾಮಾನ್ಯ ಪದಗಳು ಈ ಗುಂಪಿಗೆ ಸೇರುತ್ತವೆ. ಮೊದಲ ಗುಂಪಿನ ಪದಗಳು ಒಂದು ಭಾಷೆಗೆ ಬರುತ್ತವೆ, ಹೋಗುತ್ತವೆ. ಎರಡನೆಯ ಗುಂಪಿನವು ಹೀಗೆ ಬದಲಾಗಲಾರವು. ಆದುದರಿಂದ ಎರಡನೆ ಗುಂಪಿನ ಪದಗಳ ಸಾದೃಶ್ಯ ಬಹು ಮುಖ್ಯ. ಅದೇ ಪರಿವಾರಸಂಬಂಧವನ್ನು ಸೂಚಿಸುತ್ತದೆ. ಉದಾಹರಣೆಗೆ: ಕನ್ನಡ, ತಮಿಳು, ಮಲೆಯಾಳಂ : **ಕಣ್** ; ತೆಲುಗು : **ಕನು, ಕನ್ನು** ; ಪರ್ಜಿ : ಕೊಲಾಮಿ, ನಾಯಕಿ : **ಕನ್** ; ತುಳು : **ಕಣ್ಣು** ; ಗೋಂದಿ : **ಕನ್, ಕರ್** ; ಕೊಂಡ : **ಕಣ್** ; ಕುಇ : **ಕನು** ; ಕುರುಖ್ : **ಖನ್** ; ಮಾಲ್ತೊ : **ಖು**

**ಅನು**; ಬ್ರಹುಇ: **ಖನ್**—ದ್ರಾವಿಡ ಭಾಷೆಗಳ ಉದಾಹರಣೆ; ಸಂಸ್ಕೃತ: ಮಾತೃ; ಅವೆಸ್ತ: matar; ಗ್ರೀಕ್: mater; ಲ್ಯಾಟಿನ್: mater; ಆರ್ಮೇನಿಯನ್: mair; ಆಲ್ಬೇನಿಯನ್: motre; ಪ್ರಾಚೀನ ಐರಿಷ್: mathir; ಪ್ರಾಚೀನ ಉಚ್ಚ ಜರ್ಮನ್: muoter; ಆಂಗ್ಲೊ-ಸ್ಯಾಕ್ಸನ್: modor; ಇಂಗ್ಲಿಷ್: mother—ಇಂಡೋ-ಯೂರೋಪಿಯನ್ ಭಾಷೆಗಳ ಉದಾಹರಣೆ.

ಎರಡು ಅಥವಾ ಹೆಚ್ಚಿನ ಭಾಷೆಗಳು ಒಂದೇ ವರ್ಗಕ್ಕೆ ಸೇರಿದ್ದರೂ, ಪರಿಶೀಲನೆಯಲ್ಲಿರುವ ಪದಗಳು ಒಂದೇ ಮೂಲದಿಂದ ಬಂದಿದ್ದರೂ, ಅವುಗಳಲ್ಲಿನ ಉಚ್ಚಾರ ಭೇದ, ಬೆಳವಣಿಗೆ ಭೇದಗಳಿಂದ ರೂಪಗಳು ಭಿನ್ನವಾಗಿರಬಹುದು. ಇಂಥ ಸಂದರ್ಭಗಳಲ್ಲಿ ಆಯಾ ಭಾಷೆಗೆ ಸಂಬಂಧಿಸಿದ ಧ್ವನಿನಿಯಮಗಳನ್ನು ಅನುಸರಿಸಬೇಕು. ಬೆಳವಣಿಗೆಯ ಗತಿಯನ್ನು ಗಮನಿಸಬೇಕು. ಕನ್ನಡದ ಕಿಱು ತಮಿಳಿನ ಚಿಱು ಆಗಬಹುದು. ಸಂಸ್ಕೃತದ ಪಂಚಕ್ಕೂ ಇಂಗ್ಲಿಷಿನ five ಗೂ ಲ್ಯಾಟಿನ್ನಿನ quinque ಗೂ ಸಂಬಂಧವಿದೆಯೆಂದರೆ ಆಶ್ಚರ್ಯವಲ್ಲವೆ? ಇಂದಿನ ಧ್ವನಿವ್ಯವಸ್ಥೆಯನ್ನು ನೋಡಿ ನಾವು ಎಲ್ಲವನ್ನು ನಿರ್ಧರಿಸುವ ಹಾಗಿಲ್ಲ. ಫ್ರೆಂಚ್ ಮತ್ತು ಇಟಾಲಿಯನ್ ತೀರ ಸನಿಹದ ಭಾಷೆಗಳು. ಆದರೆ ಅವುಗಳ ಧ್ವನಿವ್ಯವಸ್ಥೆಯಲ್ಲಿ ಬಹಳ ಭೇದವಿದೆ. ತದ್ವಿರುದ್ಧವಾಗಿ ಪರಸ್ಪರ ಸಂಬಂಧವೇ ಇಲ್ಲದ ಇಟಾಲಿಯನ್ ಮತ್ತು ಜಪಾನೀ ಭಾಷೆಗಳ ಧ್ವನಿವ್ಯವಸ್ಥೆಯಲ್ಲಿ ಗಮನಾರ್ಹ ಸಾದೃಶ್ಯವಿದೆಯೆಂದು ಬಲ್ಲವರು ಹೇಳುತ್ತಾರೆ.

ಶಬ್ದಕೋಶಕ್ಕಿಂತಲೂ ಮುಖ್ಯವಾದದ್ದು ವ್ಯಾಕರಣ ಪ್ರಕ್ರಿಯೆ. ಒಂದು ಭಾಷೆಯಲ್ಲಿ ಶಬ್ದಗಳು ಎಷ್ಟೇ ಸ್ಥಿರವಾಗಿ ಉಳಿದುಕೊಳ್ಳುತ್ತವೆಂದರೂ ಬದಲಾಗಿ ಹೋಗಿಬಿಡಬಹುದು. ಆದರೆ ವ್ಯಾಕರಣದ ಅಂಶಗಳು ಹಾಗಲ್ಲ. ನಮ್ಮ ಹಿಂದಿನ ಚಂಪೂ ಕಾವ್ಯಗಳಲ್ಲಿ ಉಭಯ ಭಾಷಾ ವಿಶಾರದರು ಸಂಸ್ಕೃತ ಸಮಾಸಗಳನ್ನೇ ಹೆಣೆದಿದ್ದರೂ ಕನ್ನಡ ಪ್ರತ್ಯಯಗಳನ್ನು ಬಿಡುವುದಾಗಲಿಲ್ಲ. ಇಂದಿನ ನಮ್ಮ 'ಸುಸಂಸ್ಕೃತ'ರ ಬಾಯಲ್ಲಿ "ಟುಮಾರೋ ನೈಟ್ ರೈಲ್ವೆ ಸ್ಟೇಷನ್ನಿನಲ್ಲಿ ಮೀಟ್ ಮಾಡೋಣ" ಎಂಬಂಥ ವಾಕ್ಯಗಳನ್ನು ನಾವು ದಿನವೂ ಕೇಳುತ್ತಿಲ್ಲವೆ? ಒಂದು ಭಾಷೆ ಇನ್ನೊಂದು ಭಾಷೆಯ ಮೇಲೆ ತುಂಬ

ಗಾಢವಾಗಿ ಬೀರುವ ವ್ಯಾಕರಣಾತ್ಮಕ ಪ್ರಭಾವದಿಂದ ಉಂಟಾಗುವ ಫಲವೆಂದರೆ ಅಷ್ಟು ಮುಖ್ಯವಲ್ಲದ ವ್ಯಾಕರಣ ವ್ಯವಸ್ಥೆ ಸ್ವಲ್ಪಮಟ್ಟಿಗೆ ಸಡಿಲಗೊಳ್ಳಬಹುದು ಎಂದು ಟಕ್ಕರ್ ಎಂಬ ಪಂಡಿತರ ಅಭಿಪ್ರಾಯ. ಒಂದರ ವ್ಯಾಕರಣ ಪ್ರಕ್ರಿಯೆಯ ಪ್ರಾಬಲ್ಯದಿಂದ ಇನ್ನೊಂದರ ಪ್ರಕ್ರಿಯೆ ಸಡಿಲವಾಗಬಹುದು. ಕೆಲವು ಪ್ರತ್ಯಯಗಳು ಬಿದ್ದುಹೋಗಬಹುದು. ಆದರೆ ಒಂದರ ವ್ಯಾಕರಣಾಂಶ ಇನ್ನೊಂದರೊಳಕ್ಕೆ ನುಗ್ಗುವುದಿಲ್ಲ. ಇದರಿಂದ ಭಾಷಾ ಸಂಬಂಧ ನಿರ್ಣಯಕ್ಕೆ ದೊಡ್ಡ ಸಹಾಯವಾಗುತ್ತದೆ.

ಕೆಲವು ವಿರಳ ಸಂದರ್ಭಗಳಲ್ಲಿ ವ್ಯಾಕರಣಾಂಶಗಳೂ ಬದಲಾಗಿ ನಮ್ಮ ನಿರ್ಣಯಕ್ಕೆ ತೊಡಕು ಉಂಟಾಗಬಹುದು. ಇಂಥ ಸಂದರ್ಭಗಳಲ್ಲಿ ಬರಿ ಭಾಷೆಗಳನ್ನೇ ಆಧರಿಸದೆ, ಇತಿಹಾಸ, ಸಮಾಜಶಾಸ್ತ್ರ, ಪ್ರಾಕ್ತನಶಾಸ್ತ್ರ, ಮಾನವಶಾಸ್ತ್ರ, ಮುಂತಾದ ಇತರ ಶಾಸ್ತ್ರಗಳ ಆಧಾರವನ್ನು ಪಡೆಯಬೇಕಾಗುತ್ತದೆ; ಸಾಕ್ಷ್ಯವನ್ನು ಸಂಗ್ರಹಿಸಬೇಕಾಗುತ್ತದೆ. ಭಾಷೆ ಮೂಲತಃ ಒಂದು ಸಾಮಾಜಿಕ ಕ್ರಿಯೆ. ಆದುದರಿಂದ ಅದರ ಹಿನ್ನೆಲೆಯಲ್ಲಿ ಒಂದು ಸಮಾಜ, ಸಂಸ್ಕೃತಿ, ಇತಿಹಾಸ ನಿಂತಿರುವುದನ್ನು ನಾವು ಅಲಕ್ಷಿಸುವ ಹಾಗಿಲ್ಲ.

ಒಟ್ಟಿನಲ್ಲಿ ಭಾಷಾಸಾಮಗ್ರಿಯನ್ನು ತೆಗೆದುಕೊಂಡು ಹೋಲಿಸಿ ನೋಡುವಾಗ ಭಾಷೆಗಳೊಳಗಿನ ಸಂಬಂಧ ಸುವ್ಯಕ್ತವಾಗಿ ಪ್ರಕಟವಾಗುತ್ತದೆ. ಕನ್ನಡವನ್ನು ತಮಿಳು, ಮಲೆಯಾಳಂ, ತೆಲುಗು ಭಾಷೆಗಳಿಗೆ ಹೋಲಿಸಿದಾಗ ನಮಗೆ ಆಶ್ಚರ್ಯವೆನಿಸುವಷ್ಟು ಮಟ್ಟಿನ ಸಾಮ್ಯ ತೋರುತ್ತದೆ. ಆದರೆ ಬಂಗಾಳಿ, ಹಿಂದಿ, ಮರಾಠಿ ಭಾಷೆಗಳಿಗೆ ಹೋಲಿಸಿದಾಗ ಈ ಸಾಮ್ಯ ಕಾಣಿಸುವುದಿಲ್ಲ. ಬದಲಿಗೆ ಆ ಭಾಷೆಗಳೊಳಗೇ ಸಾಮ್ಯತೆಯಿರುವುದು ಗೊತ್ತಾಗುತ್ತದೆ. ಇದರಿಂದ ಕನ್ನಡ, ತಮಿಳು ಮುಂತಾದವುಗಳೇ ಒಂದು ಗುಂಪೆಂದೂ, ಹಿಂದೀ, ಬಂಗಾಳಿ ಮೊದಲಾದವುಗಳದೇ ಇನ್ನೊಂದು ಗುಂಪೆಂದೂ ತಿಳಿಯುತ್ತದೆ. ಈ ಎರಡು ಗುಂಪುಗಳಲ್ಲಿಯೂ ಎಷ್ಟೋ ಸಮಾನವಾದ ಅಂಶಗಳು ತೋರಿದರೂ ಅವನ್ನು ಒಂದೇ ಗುಂಪಾಗಿ ಸಾಧಿಸುವುದು ಅಸಾಧ್ಯ. ಫಲವಾಗಿ ನಮ್ಮೆದುರು ಎರಡು ಭಾಷಾ ಪರಿವಾರಗಳು ನಿಲ್ಲುತ್ತವೆ: ದ್ರಾವಿಡ ಪರಿವಾರ, ಆರ್ಯ ಪರಿವಾರ.

ಈಗ ನಾವು ವಿವರಿಸಿದ ವಿಧಾನ ತೀರ ಸರಳಗೊಳಿಸಿದ ವಿವರಣೆ. ಆದರೆ ಇದರಿಂದ ಹೇಗೆ ಭಾಷೆಗಳ ಪರಿವಾರವನ್ನು ನಿರ್ಣಯಿಸುವುದು ಸಾಧ್ಯವಾಗುತ್ತದೆಂಬ ಅಂಶ ಗೊತ್ತಾಗುತ್ತದೆ. ಈ ಕಾರ್ಯದಲ್ಲಿ ಶಾಸನ, ಸಾಹಿತ್ಯ ಮೊದಲಾದ ದಾಖಲೆಗಳನ್ನುಳ್ಳ ಭಾಷೆಗಳ ವಿಚಾರದಲ್ಲಿ ನಿರ್ಧಾರ ಸುಲಭವಾಗುತ್ತದೆ. ಏಕೆಂದರೆ, ಅವುಗಳ ಪೂರ್ವಸ್ಥಿತಿಯನ್ನು ಗೊತ್ತು ಮಾಡಲು ನಮಗೆ ಆಧಾರವಿದೆ. ಆದ್ದರಿಂದ ಇಂದಿನ ಸ್ಥಿತಿಯಲ್ಲಿಯೇ ನಿರ್ಧರಿಸಲು ಸಾಧ್ಯವಾಗದ ಅಂಶಗಳಿಗೆ ಅವುಗಳ ಚರಿತ್ರೆಯಿಂದ ಪರಿಹಾರ ದೊರೆಯುತ್ತದೆ. ಆದರೆ ಲೋಕದಲ್ಲಿ ಆಡುಮಾತುಗಳಾಗಿಯೇ ಉಳಿದ ಭಾಷೆಗಳು ಬಹಳವಿವೆ. ಇಂಥವುಗಳನ್ನು ತೆಗೆದುಕೊಂಡು ಅವುಗಳ ವರ್ಗೀಕರಣ ಮಾಡುವುದರಲ್ಲಿ ತುಂಬ ತೊಡಕಿದೆ. ಸಾವಿರ ವರ್ಷಗಳ ಹಿಂದೆ ಕನ್ನಡ ಭಾಷೆ ಹೇಗಿತ್ತೆಂದು ಹೇಳಲು ನಮಗೆ ಆಧಾರಗಳಿವೆ. ಇನ್ನೂರು ವರ್ಷಗಳ ಹಿಂದೆ ತುಳು ಹೇಗಿತ್ತೆಂದು ಹೇಳಲು ಆಗುವುದಿಲ್ಲ. ಆದ್ದರಿಂದ ಈ ತೌಲನಿಕ ವಿಜ್ಞಾನದಲ್ಲಿ ಕನ್ನಡದ ಸಮಸ್ಯೆಗಳಿಗೆ ಸಿಕ್ಕುವಷ್ಟು ಸುಲಭದ ಉತ್ತರ ತುಳುವಿಗೆ ದೊರೆಯಲಾರದು.

ಈ ಅಭ್ಯಾಸದ ಫಲವಾಗಿ ಇಂದು, ಇಂಡೋ-ಯೂರೋಪಿಯನ್, ಸೆಮಿಟಿಕ್, ಉರಾಲಿಕ್, ಆಲ್ಟಾಯಿಕ್, ದ್ರಾವಿಡ, ಸಿನೋ-ಟಿಬೆಟನ್, ಆಸ್ಟ್ರಿಕ್ ಮೊದಲಾದ ಹತ್ತು ಹದಿನೈದು ಭಾಷಾಪರಿವಾರಗಳು ಸುಸ್ಥಾಪಿತವಾಗಿವೆ. ಈ ಪರಿವಾರಗಳಲ್ಲಿಯೇ ಮತ್ತೆ ಉಪಪರಿವಾರಗಳೂ ಇವೆ. ಇವುಗಳೂ ಭಾಷೆಗಳಂತೆಯೇ—ಬೇರೆ ಬೇರೆ ಲಕ್ಷಣಗಳನ್ನು ಹೊಂದಿವೆ. ಕೆಲವು ದೊಡ್ಡವು; ಕೆಲವು ಚಿಕ್ಕವು; ಕೆಲವು ಮುಖ್ಯ; ಕೆಲವು ಗೌಣ. ಈ ಪರಿವಾರಗಳಲ್ಲಿಯೇ ಮತ್ತೆ ಆಂತರಿಕ ಸಂಬಂಧವನ್ನು ಸ್ಥಾಪಿಸುವ ಕೆಲಸ ನಡೆಯುತ್ತಿದೆ. ಪರಿವಾರಗಳಾಗಿ ವಿಂಗಡಣೆಗೆ ಒಳಗಾಗದ ಭಾಷೆಗಳ ಅಭ್ಯಾಸವೂ ಆ ದಿಕ್ಕಿನಲ್ಲಿ ನಡೆದಿದೆ. ಈಗ ಸ್ಥಾಪಿಸಲ್ಪಟ್ಟ ಪರಿವಾರಗಳಲ್ಲಿ ಇಂಡೋ-ಯೂರೋಪಿಯನ್ ಎಲ್ಲ ಕಾರಣಗಳಿಂದಲೂ ಪ್ರಮುಖವಾದುದಾಗಿದೆ. ಲೋಕದ ಅರ್ಧಭಾಗಕ್ಕೂ ಹೆಚ್ಚು ಜನ ಈ ಪರಿವಾರಕ್ಕೆ ಸೇರಿದ ಭಾಷೆಗಳನ್ನು ಆಡುತ್ತಾರೆ. ಈ ಪರಿವಾರಕ್ಕೆ ಸೇರಿದ ಭಾಷೆಗಳಷ್ಟು ಸಮೃದ್ಧವಾದ ಭಾಷೆಗಳು ಮತ್ತೊಂದು ಪರಿವಾರದಲ್ಲಿಲ್ಲ. ಲೋಕದ ವಾಣಿಜ್ಯ,

ವ್ಯವಹಾರ, ರಾಜಕೀಯಗಳಲ್ಲೆಲ್ಲ ಆ ಭಾಷೆಗಳಿಗೇ ಅಗ್ರಸ್ಥಾನ, ಮಾತ್ರವಲ್ಲ, ತೌಲನಿಕ ಭಾಷಾಶಾಸ್ತ್ರವೆಂದರೆ ತೌಲನಿಕ ಇಂಡೋ-ಯೂರೋಪಿಯನ್ ಎಂದೇ ಇಲ್ಲಿಯವರೆಗೂ ನಡೆದುಕೊಂಡು ಬಂದಿದೆ.

# ತೀ. ನಂ. ಶ್ರೀ.

## ೧

ನವದೆಹಲಿಯಲ್ಲಿ ಭಾಷಾಶಾಸ್ತ್ರ ಸಂಬಂಧದ ಸಮಿತಿಯ ಸಭೆಯೊಂದರಲ್ಲಿ ಭಾಗವಹಿಸಿ, ರಾಂಚಿಯಲ್ಲಿರುವ ತಮ್ಮ ಮಗಳ ಮನೆಯಲ್ಲಿ ಕೆಲದಿನಗಳನ್ನು ಕಳೆದು, ಕಲ್ಕತ್ತೆಯಲ್ಲಿ ವ್ಯಾಸಂಗ ಮಾಡುತ್ತಿರುವ ಮಗನನ್ನು ನೋಡಿಕೊಂಡು ಬರುವ ಸಲುವಾಗಿ, ಆಗಸ್ಟ್ ಮೂರನೆಯ ವಾರದಲ್ಲಿ ತಮ್ಮ ಶ್ರೀಮತಿಯವರೊಡನೆ ಮೈಸೂರಿನಿಂದ ಹೊರಟ ಆಚಾರ್ಯ ತೀ. ನಂ. ಶ್ರೀಕಂಠಯ್ಯನವರು ದಿನಾಂಕ ೭-೯-೧೯೬೬ನೇ ಬುಧವಾರ ಬೆಳಗ್ಗೆ ಕಲ್ಕತ್ತೆಯಲ್ಲಿ ಹೃದಯಸ್ತಂಭನದಿಂದ ನಿಧನರಾದ ವಾರ್ತೆ ಕನ್ನಡಿಗರನ್ನು ದಿಗ್ಭ್ರಾಂತಗೊಳಿಸಿತು. ಶ್ರೀಕಂಠಯ್ಯನವರ ಮರಣದಿಂದ ಖಚಿತತೆ ಹಾಗೂ ರಸಿಕತೆಯಿಂದ ಕೂಡಿದ ಕನ್ನಡ ಪಾಂಡಿತ್ಯದ ಸ್ತಂಭವೊಂದು ಕುಸಿಯಿತು.

## ೨

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ತೀರ್ಥಪುರದ ಶ್ಯಾನುಭೋಗರಾದ ನಂಜುಂಡಯ್ಯನವರ ಮಗ ಶ್ರೀಕಂಠಯ್ಯನವರು ಹುಟ್ಟಿದ್ದು ೧೯೦೬ ರ ನವಂಬರ್ ೨೬ ರಂದು.[1] ಪ್ರಾಥಮಿಕ ವಿದ್ಯಾಭ್ಯಾಸವನ್ನು ತೀರ್ಥಪುರದಲ್ಲಿಯೇ ಮುಗಿಸಿ, ಮಾಧ್ಯಮಿಕ ಅಭ್ಯಾಸವನ್ನು ಚಿಕ್ಕನಾಯಕನಹಳ್ಳಿಯಲ್ಲಿ

---

[1] ಶ್ರೀಕಂಠಯ್ಯನವರ ಜೀವನಕ್ಕೆ ಸಂಬಂಧಿಸಿದ ವಿವರಗಳನ್ನು ನಾನು ಪ್ರೊ. ದೇ. ಜವರೇಗೌಡರ ಸಾಹಿತಿಗಳ ಸಂಗದಲ್ಲಿ ಎಂಬ ಗ್ರಂಥದಿಂದ ತೆಗೆದುಕೊಂಡಿದ್ದೇನೆ. ಪ್ರಕಾಶಕರು : ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, (೧೯೬೪), ಪು. ೧೬೧–೮೧. ಶ್ರೀಕಂಠಯ್ಯನವರ ಮರಣಕ್ಕೆ ಮೊದಲು ಅವರನ್ನು ಕುರಿತು ಪ್ರಕಟವಾದ ಲೇಖನಗಳಲ್ಲಿ, ಇದನ್ನು ಬಿಟ್ಟರೆ ನನ್ನ ಗಮನಕ್ಕೆ ಬಂದ ಒಂದೇ ಒಂದು ಲೇಖನವೆಂದರೆ ಅ. ನ. ಕೃಷ್ಣರಾಯರದ್ದು. ಕನ್ನಡ ಕುಲರಸಿಕರು, ಪು. ೪೯–೫೪ (೧೯೫೧), ಪ್ರಕಾಶಕರು : ಆನಂದ ಬ್ರದರ್ಸ್, ಬೆಂಗಳೂರು.

ಮುಂದುವರಿಸಿದರು. ತುಮಕೂರಿನಲ್ಲಿ ಅವರು ಪ್ರೌಢಶಾಲಾ ವ್ಯಾಸಂಗವನ್ನು ಮುಗಿಸಿದರು. ಎಳೆಯ ವಯಸ್ಸಿನಲ್ಲಿಯೇ ಶ್ರೀಕಂಠಯ್ಯನವರ ಆಸಕ್ತಿ ಸಾಹಿತ್ಯದ ಕಡೆಗೆ, ಕನ್ನಡದ ಕಡೆಗೆ ತಿರುಗಿತು. ಸಿಕ್ಕ ಸಿಕ್ಕ ಕನ್ನಡ ಪತ್ರಿಕೆಗಳನ್ನೂ ಪುಸ್ತಕಗಳನ್ನೂ ಅವರು ಓದಿದರು. ಪ್ರೌಢಶಾಲೆಯಲ್ಲಿ ದ್ವಿತೀಯ ಭಾಷೆಯನ್ನಾಗಿ ಸಂಸ್ಕೃತವನ್ನು ಆರಿಸಿಕೊಳ್ಳದೆ ಕನ್ನಡವನ್ನು ತೆಗೆದುಕೊಂಡದ್ದಕ್ಕೆ ಅವರು ತಮ್ಮ ತಂದೆಯವರ ಆಕ್ಷೇಪಣೆಗೆ ಗುರಿಯಾದರೂ, ಸಂಸ್ಕೃತ ಅಭ್ಯಾಸವನ್ನು ಕೈಬಿಡಲಿಲ್ಲ. ಓದಿನ ಜೊತೆಗೇ ಶಾಲಾ ಪತ್ರಿಕೆಯಲ್ಲಿ ಬರೆಯುವ ಹವ್ಯಾಸವನ್ನೂ ಅವರು ಬೆಳೆಸಿಕೊಂಡರು.

೧೯೦೩ ರಲ್ಲಿ ಎಂಟ್ರೆನ್ಸ್ ಪರೀಕ್ಷೆಯನ್ನು ಮುಗಿಸಿ ಶ್ರೀಕಂಠಯ್ಯನವರು ಮೈಸೂರು ಮಹಾರಾಜರವರ ಕಾಲೇಜಿನ ಮೆಟ್ಟಲು ಹತ್ತಿದರು. ವಿಜ್ಞಾನ ವಿಷಯಗಳಲ್ಲಿ ಅವರು ಜಾಣರಾಗಿದ್ದರೂ, ಕಲಾವಿಷಯಗಳು ಅವರನ್ನು ಆಕರ್ಷಿಸಿದವು. ಅಲ್ಲಿ ಬಿ. ಎ. ತರಗತಿಗೆ ಇಂಗ್ಲಿಷ್ ಸಾಹಿತ್ಯ, ರಾಜ್ಯಶಾಸ್ತ್ರ, ಸಂಸ್ಕೃತ ಸಾಹಿತ್ಯಗಳನ್ನು ಅಭ್ಯಾಸಮಾಡಿ ೧೯೦೬ ರಲ್ಲಿ ಆರು ಸುವರ್ಣ ಪದಕಗಳನ್ನೂ ಹಲವು ಬಹುಮಾನಗಳನ್ನೂ ಗಳಿಸಿದರು. ಪ್ರೊಫೆಸರ್ ಎಸ್. ವಿ. ರಂಗಣ್ಣನವರನ್ನು ಬಿಟ್ಟರೆ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಷ್ಟು ಹೆಚ್ಚು ಸಂಖ್ಯೆಯ ಬಹುಮಾನಗಳನ್ನು ಗಳಿಸಿದವರೆಂದರೆ ಬಹುಶಃ ಶ್ರೀಕಂಠಯ್ಯನವರೇ.

ಇಂಗ್ಲಿಷ್ ಸಾಹಿತ್ಯದಲ್ಲಿ ಎಂ. ಎ. ಪರೀಕ್ಷೆಯನ್ನು ಅವರು ೧೯೦೮ ರಲ್ಲಿ ತೆಗೆದುಕೊಳ್ಳಬೇಕಾಗಿತ್ತು. ಅದರ ಬದಲಿಗೆ ಅವರು ಆ ವರ್ಷ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ತೆಗೆದುಕೊಂಡು ಮೂರನೆಯ ಸ್ಥಾನವನ್ನು ಪಡೆದರು. ಅದರ ಫಲವಾಗಿ ಅವರು ಅದೇ ವರ್ಷ ಅಮಲ್ದಾರ್ ಹುದ್ದೆಗೆ ಆರಿಸಲ್ಪಟ್ಟರು. ಶ್ರೀಕಂಠಯ್ಯನವರಿಗೆ ಅಧ್ಯಾಪಕ ವೃತ್ತಿಯ ಕಡೆ ಒಲವಿತ್ತೇ ಹೊರತು ರೆವೆನ್ಯೂ ಅಧಿಕಾರದಲ್ಲಲ್ಲ. ಅವರು ಆ ಅಧಿಕಾರದಲ್ಲಿ ಮುಂದುವರಿದಿದ್ದೇ ಆಗಿದ್ದರೆ ನಿವೃತ್ತಿಯ ಹೊತ್ತಿನಲ್ಲಿ ಬಹು ದೊಡ್ಡ ಅಧಿಕಾರದಲ್ಲಿರುತ್ತಿದ್ದರು. ಶ್ರೀಕಂಠಯ್ಯನವರು ರೆವೆನ್ಯೂ ಇಲಾಖೆಯಲ್ಲಿಯೇ ಇದ್ದಿದ್ದರೂ ಸಾಹಿತ್ಯ ಸೇವೆಯನ್ನು ಕೈಬಿಡುತ್ತಿರಲಿಲ್ಲವೆಂದು ನನಗನ್ನಿಸುತ್ತದೆ. ಆರ್. ನರಸಿಂಹಾಚಾರ್, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮೊದಲಾದವರ

ಕೆಲಸವನ್ನು ನೋಡಿದರೆ ಇದು ಇನ್ನೂ ದೃಢವಾಗುತ್ತದೆ. ಆದರೆ ಅವರು ಈ ಪ್ರಮಾಣದ ಪಂಡಿತರಾಗುತ್ತಿರಲಿಲ್ಲವೇನೊ. ಏನೇ ಇರಲಿ, ಕನ್ನಡ ಪಾಂಡಿತ್ಯದ ಪುಣ್ಯವಿಶೇಷದಿಂದ ಆರು ವಾರಗಳ ಅವಧಿಯಲ್ಲಿಯೇ ಅಮಲ್ದಾರಿಕೆಯನ್ನು ಬಿಟ್ಟು ಅವರು ಮೈಸೂರು ಇಂಟರ್ಮೀಡಿಯೆಟ್ ಕಾಲೇಜಿಗೆ ಕನ್ನಡ ಅಧ್ಯಾಪಕರಾಗಿ ಬಂದುಬಿಟ್ಟರು! ಮರುವರ್ಷ ಇಂಗ್ಲಿಷ್ ಸಾಹಿತ್ಯದ ಎಂ. ಎ. ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನ ಪಡೆದರು. ಮುಂದೆ ಅವರು ಕನ್ನಡದಲ್ಲಿಯೂ ಪ್ರಥಮ ದರ್ಜೆಯ ಎಂ. ಎ. ಪದವಿ ಗಳಿಸಿದರು.

ಶ್ರೀಕಂಠಯ್ಯನವರು ಕನ್ನಡ ಉಪಪ್ರಾಧ್ಯಾಪಕರಾಗಿ ಕೋಲಾರ ಮತ್ತು ದಾವಣಗೆರೆ ಕಾಲೇಜುಗಳಲ್ಲಿ ಕೆಲವು ಕಾಲ ಸೂಪರಿನ್‌ಟೆನ್‌ಡೆಂಟ್ ಆಗಿದ್ದರು. ಮೈಸೂರು ರಾಜ್ಯಾಂಗರಚನಾ ಸಮಿತಿಯಲ್ಲಿ ಅವರು ಕೆಲವು ಕಾಲ ಭಾಷಾಂತರಕಾರರಾಗಿದ್ದರು. ಭಾರತದ ರಾಜ್ಯಾಂಗಸಭೆ ನೇಮಿಸಿದ್ದ ಪಾರಿಭಾಷಿಕ ಪದಗಳ ಸಂಗ್ರಹಣ ಸಮಿತಿಯಲ್ಲಿ ಕನ್ನಡದ ಪ್ರತಿನಿಧಿಯಾಗಿದ್ದರು. ಹೊಸದಾಗಿ ಅಸ್ತಿತ್ವಕ್ಕೆ ಬಂದ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಅವರು ೧೯೪೯ ರಿಂದ ೫೭ರ ವರೆಗೆ ಕನ್ನಡ ಪ್ರಾಧ್ಯಾಪಕರಾಗಿದ್ದು, ಆ ಇಲಾಖೆಯನ್ನು ಸುವ್ಯವಸ್ಥಿತ ರೀತಿಯಲ್ಲಿ ಆರಂಭಿಸಿ, ಅದರ ಬೆಳವಣಿಗೆಗೆ ಭದ್ರವಾದ ಬುನಾದಿ ಹಾಕಿದರು. ೧೯೫೭ರಲ್ಲಿ ಶ್ರೀಕಂಠಯ್ಯನವರು ಮೈಸೂರಿಗೆ ಮರಳಿ ಬಂದು ಕನ್ನಡ ಇಲಾಖೆಯ ಮುಖ್ಯರಾಗಿ ಅಧಿಕಾರ ಸ್ವೀಕರಿಸಿದರು. ಐದು ವರ್ಷಗಳ ನಂತರ ೧೯೬೨ ರಲ್ಲಿ ಅವರು ನಿವೃತ್ತರಾದರು. ಆಮೇಲೆ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧನ ಪ್ರಾಧ್ಯಾಪಕರಾದರು.

ಅಖಿಲಭಾರತ ಭಾಷಾವಿಜ್ಞಾನಿಗಳ ಸಂಘದ ನೆರವಿನಲ್ಲಿ ದೇಶದ ನಾನಾ ಭಾಗಗಳಲ್ಲಿ ನಡೆದ ಅನೇಕ ಭಾಷಾವಿಜ್ಞಾನದ ಬೇಸಿಗೆ ಶಿಬಿರಗಳಲ್ಲಿ ಅವರು ಗೌರವ ಪ್ರಾಧ್ಯಾಪಕರಾಗಿ ಭಾಗವಹಿಸಿದ್ದರು. ಮೈಸೂರಿನಲ್ಲಿ ೧೯೫೮ ರಲ್ಲಿ ಕೂಡಿದ ಭಾಷಾವಿಜ್ಞಾನದ ಶಿಬಿರಕ್ಕೆ ಅವರೇ ನಿರ್ದೇಶಕರಾಗಿದ್ದು ಅದನ್ನು ಯಶಸ್ವಿಗೊಳಿಸಿದ್ದರು. ಅಮೆರಿಕೆಯಲ್ಲಿ ನಡೆಯುತ್ತಿರುವ ಭಾಷಾವಿಜ್ಞಾನದ ಅಧ್ಯಯನ ಸಂಶೋಧನಗಳನ್ನು ಪರಿಚಯ ಮಾಡಿಕೊಳ್ಳುವ ಸಲುವಾಗಿ ಶ್ರೀಕಂಠಯ್ಯನವರು ರಾಕ್‌ಫೆಲರ್ ಪ್ರತಿಷ್ಠಾನದ ವೇತನವೊಂದರ ಮೇಲೆ

೧೯೫೫ ರಲ್ಲಿ ಅಮೇರಿಕಾಕ್ಕೆ ಎಂಟು ತಿಂಗಳ ಕಾಲ ಭೇಟಿಕೊಟ್ಟು ಅಲ್ಲಿನ ಪ್ರಮುಖ ವಿಶ್ವವಿದ್ಯಾನಿಲಯಗಳನ್ನು ಸಂದರ್ಶಿಸಿದರು. ಅಲ್ಲಿನ ಹಲವು ಖ್ಯಾತ ಭಾಷಾವಿಜ್ಞಾನಿಗಳೊಂದಿಗೆ ಚರ್ಚೆ ನಡೆಸಿದರು. ತಮ್ಮ ಆಳವಾದ ಪಾಂಡಿತ್ಯದಿಂದ ಅವರ ಮೇಲೆ ಒಳ್ಳೆಯ ಪ್ರಭಾವವನ್ನು ಬೀರಿದರು. ಮೆಕ್ಸಿಕೋ ರಾಷ್ಟ್ರೀಯ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಮೋರಿಸ್ ಸ್ವಾಡಿಷ್ ಎಂಬ ವಿದ್ವಾಂಸರನ್ನು ೧೯೬೩ ರಲ್ಲಿ ನಾನು ಭೇಟಿಯಾಗಿದ್ದಾಗ ಅವರು ನನ್ನನ್ನು ಮೊದಲು ಕೇಳಿದ ಪ್ರಶ್ನೆ: "ನಿಮಗೆ ಶ್ರೀಕಂಠಯ್ಯನವರು ಗೊತ್ತೆ?" ನಾನು "ಬಹು ಚೆನ್ನಾಗಿ ಗೊತ್ತು" ಎಂದಾಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ. ಶ್ರೀಕಂಠಯ್ಯನವರ ಯೋಗಕ್ಷೇಮವನ್ನು ಅವರು ವಿಚಾರಿಸಿ, ತಾವು ತಮ್ಮ ಭಾಷಾಕಾಲಕ್ರಮ ವಿಜ್ಞಾನ (Glottochronology) ದ ಸಂಶೋಧನೆಯಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ಶ್ರೀಕಂಠಯ್ಯನವರಿಂದ ಪಡೆದ ನೆರವನ್ನು ಸ್ಮರಿಸಿದರು. ಅವರ ಪಾಂಡಿತ್ಯವನ್ನು ಸ್ವಾಡಿಷ್ ಬಹುವಾಗಿ ಪ್ರಶಂಸಿಸಿದರು. ಕೊನೆಗೆ "ಶ್ರೀಕಂಠಯ್ಯನವರನ್ನು ನಾನು ಇನ್ನು ಯಾವಾಗ ನೋಡುತ್ತೇನೆಯೋ. ಅಂತೂ ನನಗಿಂತ ಮೊದಲು ನೀವು ಅವರನ್ನು ನೋಡುವುದು ಖಂಡಿತ. ದಯವಿಟ್ಟು ನನ್ನ ವಿಶ್ವಾಸವನ್ನು ಅವರಿಗೆ ತಿಳಿಸಿ" ಎಂದು ಹೇಳಿದರು. ಅಮೆರಿಕೆಗೆ ಹೋಗಿದ್ದ ಸಂದರ್ಭದಲ್ಲಿಯೇ ಶ್ರೀಕಂಠಯ್ಯನವರು ಯೂರೋಪಿನ ಹಲವು ದೇಶಗಳಿಗೂ ಹೋಗಿ ಬಂದರು. ಅವರು ಸ್ವದೇಶಕ್ಕೆ ಮರಳಿದೊಡನೆಯೇ ತಮ್ಮ ಅನುಭವಗಳನ್ನು ಕುರಿತು ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕೆಲವು ವಿಶೇಷ ಉಪನ್ಯಾಸಗಳನ್ನು ಕೊಟ್ಟರು.

ಪ್ರೊಫೆಸರ್ ಶ್ರೀಕಂಠಯ್ಯನವರು ಹಲವಾರು ಸಭೆ ಸಮ್ಮೇಳನಗಳಿಗೆ, ವಿದ್ವದ್ಗೋಷ್ಠಿಗಳಿಗೆ ಅಧ್ಯಕ್ಷರಾಗಿದ್ದರು. ಅವರು ೧೯೫೭ ರಲ್ಲಿ ಓರಿಯಂಟಲ್ ಕಾನ್ಫರೆನ್ಸಿನ ದೆಹಲಿ ಸಮ್ಮೇಳನದ ದ್ರಾವಿಡ ವಿಭಾಗಕ್ಕೂ, ೧೯೬೦ ರಲ್ಲಿ ಅಖಿಲಭಾರತ ಭಾಷಾವಿಜ್ಞಾನಿಗಳ ಸಂಘಕ್ಕೂ ಅಧ್ಯಕ್ಷರಾಗಿದ್ದರು. ಈಚಿನ ವರ್ಷಗಳಲ್ಲಿ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡಕೋಶದ ಸಂಪಾದಕ ಮಂಡಳಿಯ ಅಧ್ಯಕ್ಷರಾಗಿ, ಮೈಸೂರು ಸರ್ಕಾರದ ವಿಶ್ವಕೋಶದ ಭಾಷಾ ವಿಜ್ಞಾನ ವಿಭಾಗದ ಮುಖ್ಯರಾಗಿ, ಮೈಸೂರು ವಿಶ್ವವಿದ್ಯಾನಿಲಯದ

ಕೆಲಸವನ್ನು ನೋಡಿದರೆ ಇದು ಇನ್ನೂ ದೃಢವಾಗುತ್ತದೆ. ಆದರೆ ಅವರು ಈ ಪ್ರಮಾಣದ ಪಂಡಿತರಾಗುತ್ತಿರಲಿಲ್ಲವೇನೊ. ಏನೇ ಇರಲಿ, ಕನ್ನಡ ಪಾಂಡಿತ್ಯದ ಪುಣ್ಯವಿಶೇಷದಿಂದ ಆರು ವಾರಗಳ ಅವಧಿಯಲ್ಲಿಯೇ ಅಮಲ್ದಾರಿಕೆಯನ್ನು ಬಿಟ್ಟು ಅವರು ಮೈಸೂರು ಇಂಟರ್ಮೀಡಿಯೆಟ್ ಕಾಲೇಜಿಗೆ ಕನ್ನಡ ಅಧ್ಯಾಪಕರಾಗಿ ಬಂದುಬಿಟ್ಟರು! ಮರುವರ್ಷ ಇಂಗ್ಲಿಷ್ ಸಾಹಿತ್ಯದ ಎಂ. ಎ. ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನ ಪಡೆದರು. ಮುಂದೆ ಅವರು ಕನ್ನಡದಲ್ಲಿಯೂ ಪ್ರಥಮ ದರ್ಜೆಯ ಎಂ. ಎ. ಪದವಿ ಗಳಿಸಿದರು.

ಶ್ರೀಕಂಠಯ್ಯನವರು ಕನ್ನಡ ಉಪಪ್ರಾಧ್ಯಾಪಕರಾಗಿ ಕೋಲಾರ ಮತ್ತು ದಾವಣಗೆರೆ ಕಾಲೇಜುಗಳಲ್ಲಿ ಕೆಲವು ಕಾಲ ಸೂಪರಿನ್‌ಟೆನ್‌ಡೆಂಟ್ ಆಗಿದ್ದರು. ಮೈಸೂರು ರಾಜ್ಯಾಂಗರಚನಾ ಸಮಿತಿಯಲ್ಲಿ ಅವರು ಕೆಲವು ಕಾಲ ಭಾಷಾಂತರಕಾರರಾಗಿದ್ದರು. ಭಾರತದ ರಾಜ್ಯಾಂಗಸಭೆ ನೇಮಿಸಿದ್ದ ಪಾರಿಭಾಷಿಕ ಪದಗಳ ಸಂಗ್ರಹಣ ಸಮಿತಿಯಲ್ಲಿ ಕನ್ನಡದ ಪ್ರತಿನಿಧಿಯಾಗಿದ್ದರು. ಹೊಸದಾಗಿ ಅಸ್ತಿತ್ವಕ್ಕೆ ಬಂದ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಅವರು ೧೯೫೨ ರಿಂದ ೫೭ರ ವರೆಗೆ ಕನ್ನಡ ಪ್ರಾಧ್ಯಾಪಕರಾಗಿದ್ದು, ಆ ಇಲಾಖೆಯನ್ನು ಸುವ್ಯವಸ್ಥಿತ ರೀತಿಯಲ್ಲಿ ಆರಂಭಿಸಿ, ಅದರ ಬೆಳವಣಿಗೆಗೆ ಭದ್ರವಾದ ಬುನಾದಿ ಹಾಕಿದರು. ೧೯೫೭ರಲ್ಲಿ ಶ್ರೀಕಂಠಯ್ಯನವರು ಮೈಸೂರಿಗೆ ಮರಳಿ ಬಂದು ಕನ್ನಡ ಇಲಾಖೆಯ ಮುಖ್ಯರಾಗಿ ಅಧಿಕಾರ ಸ್ವೀಕರಿಸಿದರು. ಐದು ವರ್ಷಗಳ ನಂತರ ೧೯೬೨ ರಲ್ಲಿ ಅವರು ನಿವೃತ್ತರಾದರು. ಆಮೇಲೆ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧನ ಪ್ರಾಧ್ಯಾಪಕರಾದರು.

ಅಖಿಲಭಾರತ ಭಾಷಾವಿಜ್ಞಾನಿಗಳ ಸಂಘದ ನೆರವಿನಲ್ಲಿ ದೇಶದ ನಾನಾ ಭಾಗಗಳಲ್ಲಿ ನಡೆದ ಅನೇಕ ಭಾಷಾವಿಜ್ಞಾನದ ಬೇಸಿಗೆ ಶಿಬಿರಗಳಲ್ಲಿ ಅವರು ಗೌರವ ಪ್ರಾಧ್ಯಾಪಕರಾಗಿ ಭಾಗವಹಿಸಿದ್ದರು. ಮೈಸೂರಿನಲ್ಲಿ ೧೯೫೮ ರಲ್ಲಿ ಕೂಡಿದ ಭಾಷಾವಿಜ್ಞಾನದ ಶಿಬಿರಕ್ಕೆ ಅವರೇ ನಿರ್ದೇಶಕರಾಗಿದ್ದು ಅದನ್ನು ಯಶಸ್ವಿಗೊಳಿಸಿದ್ದರು. ಅಮೆರಿಕೆಯಲ್ಲಿ ನಡೆಯುತ್ತಿರುವ ಭಾಷಾವಿಜ್ಞಾನದ ಅಧ್ಯಯನ ಸಂಶೋಧನಗಳನ್ನು ಪರಿಚಯ ಮಾಡಿಕೊಳ್ಳುವ ಸಲುವಾಗಿ ಶ್ರೀಕಂಠಯ್ಯನವರು ರಾಕ್‌ಫೆಲರ್ ಪ್ರತಿಷ್ಠಾನದ ವೇತನವೊಂದರ ಮೇಲೆ

೧೯೫೫ ರಲ್ಲಿ ಅಮೇರಿಕಾಕ್ಕೆ ಎಂಟು ತಿಂಗಳ ಕಾಲ ಭೇಟಿಕೊಟ್ಟು ಅಲ್ಲಿನ ಪ್ರಮುಖ ವಿಶ್ವವಿದ್ಯಾನಿಲಯಗಳನ್ನು ಸಂದರ್ಶಿಸಿದರು. ಅಲ್ಲಿನ ಹಲವು ಖ್ಯಾತ ಭಾಷಾವಿಜ್ಞಾನಿಗಳೊಂದಿಗೆ ಚರ್ಚೆ ನಡೆಸಿದರು. ತಮ್ಮ ಆಳವಾದ ಪಾಂಡಿತ್ಯದಿಂದ ಅವರ ಮೇಲೆ ಒಳ್ಳೆಯ ಪ್ರಭಾವವನ್ನು ಬೀರಿದರು. ಮೆಕ್ಸಿಕೋ ರಾಷ್ಟ್ರೀಯ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಮೋರಿಸ್ ಸ್ವಾಡಿಷ್ ಎಂಬ ವಿದ್ವಾಂಸರನ್ನು ೧೯೬೩ ರಲ್ಲಿ ನಾನು ಭೇಟಿಯಾಗಿದ್ದಾಗ ಅವರು ನನ್ನನ್ನು ಮೊದಲು ಕೇಳಿದ ಪ್ರಶ್ನೆ: "ನಿಮಗೆ ಶ್ರೀಕಂಠಯ್ಯನವರು ಗೊತ್ತೆ?" ನಾನು "ಬಹು ಚೆನ್ನಾಗಿ ಗೊತ್ತು" ಎಂದಾಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ. ಶ್ರೀಕಂಠಯ್ಯನವರ ಯೋಗಕ್ಷೇಮವನ್ನು ಅವರು ವಿಚಾರಿಸಿ, ತಾವು ತಮ್ಮ ಭಾಷಾಕಾಲಕ್ರಮ ವಿಜ್ಞಾನ (Glottochronology) ದ ಸಂಶೋಧನೆಯಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ಶ್ರೀಕಂಠಯ್ಯನವರಿಂದ ಪಡೆದ ನೆರವನ್ನು ಸ್ಮರಿಸಿದರು. ಅವರ ಪಾಂಡಿತ್ಯವನ್ನು ಸ್ವಾಡಿಷ್ ಬಹುವಾಗಿ ಪ್ರಶಂಸಿಸಿದರು. ಕೊನೆಗೆ "ಶ್ರೀಕಂಠಯ್ಯನವರನ್ನು ನಾನು ಇನ್ನು ಯಾವಾಗ ನೋಡುತ್ತೇನೆಯೋ. ಅಂತೂ ನನಗಿಂತ ಮೊದಲು ನೀವು ಅವರನ್ನು ನೋಡುವುದು ಖಂಡಿತ. ದಯವಿಟ್ಟು ನನ್ನ ವಿಶ್ವಾಸವನ್ನು ಅವರಿಗೆ ತಿಳಿಸಿ" ಎಂದು ಹೇಳಿದರು. ಅಮೆರಿಕೆಗೆ ಹೋಗಿದ್ದ ಸಂದರ್ಭದಲ್ಲಿಯೇ ಶ್ರೀಕಂಠಯ್ಯನವರು ಯೂರೋಪಿನ ಹಲವು ದೇಶಗಳಿಗೂ ಹೋಗಿ ಬಂದರು. ಅವರು ಸ್ವದೇಶಕ್ಕೆ ಮರಳಿದೊಡನೆಯೇ ತಮ್ಮ ಅನುಭವಗಳನ್ನು ಕುರಿತು ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕೆಲವು ವಿಶೇಷ ಉಪನ್ಯಾಸಗಳನ್ನು ಕೊಟ್ಟರು.

ಪ್ರೊಫೆಸರ್ ಶ್ರೀಕಂಠಯ್ಯನವರು ಹಲವಾರು ಸಭೆ ಸಮ್ಮೇಳನಗಳಿಗೆ, ವಿದ್ವದ್ಗೋಷ್ಠಿಗಳಿಗೆ ಅಧ್ಯಕ್ಷರಾಗಿದ್ದರು. ಅವರು ೧೯೫೭ ರಲ್ಲಿ ಓರಿಯಂಟಲ್ ಕಾನ್ಫರೆನ್ಸಿನ ದೆಹಲಿ ಸಮ್ಮೇಳನದ ದ್ರಾವಿಡ ವಿಭಾಗಕ್ಕೂ, ೧೯೬೦ ರಲ್ಲಿ ಅಖಿಲಭಾರತ ಭಾಷಾವಿಜ್ಞಾನಿಗಳ ಸಂಘಕ್ಕೂ ಅಧ್ಯಕ್ಷರಾಗಿದ್ದರು. ಈಚಿನ ವರ್ಷಗಳಲ್ಲಿ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡಕೋಶದ ಸಂಪಾದಕ ಮಂಡಳಿಯ ಅಧ್ಯಕ್ಷರಾಗಿ, ಮೈಸೂರು ಸರ್ಕಾರದ ವಿಶ್ವಕೋಶದ ಭಾಷಾವಿಜ್ಞಾನ ವಿಭಾಗದ ಮುಖ್ಯರಾಗಿ, ಮೈಸೂರು ವಿಶ್ವವಿದ್ಯಾನಿಲಯದ

'ಒಲುಮೆ' ಕನ್ನಡದಲ್ಲಿ ಮೊದಲನೆಯ ಪ್ರೇಮಗೀತಗಳ ಗುಚ್ಛ. ಇದರ ಮೊದಲ ಭಾಗದಲ್ಲಿ ಶ್ರೀಕಂಠಯ್ಯನವರ ಇಪ್ಪತ್ತು ಸ್ವಂತ ಕವಿತೆಗಳಿವೆ. ಎರಡನೆಯ ಅನುವಾದ ಭಾಗದಲ್ಲಿ ಸಂಸ್ಕೃತ ಪ್ರಾಕೃತಗಳ ಕೆಲವು ಮುಕ್ತಕಗಳನ್ನೂ, ಗ್ರೀಕಿನ ಎರಡು ತುಣುಕುಗಳನ್ನೂ, ಬೂರ್ಡಿಲಾಸ್ ಮತ್ತು ಕೋಲ್‌ರಿಜ್—ಇಬ್ಬರ ಒಂದೊಂದು ಕವಿತೆಗಳನ್ನೂ ಅನುವಾದಿಸಿದ್ದಾರೆ. 'ಒಲುಮೆ'ಯ ಗೀತೆಗಳಲ್ಲಿ ಶ್ರೀಕಂಠಯ್ಯನವರು ಪ್ರಣಯ ಪ್ರಪಂಚದ ಎಷ್ಟೋ ಮೃದು ಮಧುರ ಭಾವನೆಗಳಿಗೆ ದನಿಕೊಟ್ಟಿದ್ದಾರೆ. ಪ್ರೇಮಗೀತಗಳ ಹಲವು ರಚಕರಿಗೆ ಪ್ರೇರಣೆಯನ್ನೊದಗಿಸಿದ 'ಒಲುಮೆ'ಯ ಮೂರನೆಯ ಮುದ್ರಣ ಈಚೆಗೆ ಪ್ರಕಟವಾಗಿದೆ. ಪ್ರೇಮಗೀತೆಗಳ ರಚನೆಯಲ್ಲಿ "ಔಚಿತ್ಯದ ಹದ ಎಲ್ಲಿ ಮೀರುತ್ತದೆ, ರಸ ಎಲ್ಲಿ ಹಸಗೆಟ್ಟು ಹಾಸ್ಯಕರವಾಗುತ್ತದೆ ಎಂದು ಅರಿಯುವುದು ಲೇಖಕನಿಗಿಂತೂ ಬಲು ಕಷ್ಟ"[1] ಎಂಬುದು ಅವರಿಗೆ ತಿಳಿದಿದ್ದರಿಂದಲೇ ಈ ಕವಿತೆಗಳಲ್ಲಿ ಶೃಂಗಾರಗಾಂಭೀರ್ಯವೂ, ಧ್ವನಿ ಕೋಮಲತೆಯೂ ಕೂಡಿಕೊಂಡಿವೆ.

ಮೂರು ವರ್ಷಗಳ ಕೆಳಗೆ ಪ್ರಕಟವಾದ 'ನಂಟರು' ಎಂಬ ಅವರ ಪ್ರಬಂಧಗಳ ಸಂಕಲನದಲ್ಲಿ 'ನೆಗಡಿ', 'ತಗುಣೆ' ಮುಂತಾದ ಉತ್ಕೃಷ್ಟವಾದ ಲಲಿತಪ್ರಬಂಧಗಳನ್ನು ನೋಡಬಹುದು. 'ಒಲುಮೆ', 'ನಂಟರು'—ಈ ಎರಡು ಸಂಕಲನಗಳನ್ನು ಗಮನಿಸಿದವರಿಗೆ ಶ್ರೀಕಂಠಯ್ಯನವರು ಸಂಶೋಧನೆ ಪಾಂಡಿತ್ಯಗಳ ದಾರಿ ಹಿಡಿದಿದ್ದರಿಂದ ಲಲಿತ ಸಾಹಿತ್ಯಕ್ಕೆ ನಷ್ಟವಾಯಿತೆಂದು ಅನ್ನಿಸದೆ ಇರದು. ಆದರೆ ಇದರಲ್ಲಿ ಸ್ವತಃ ಶ್ರೀಕಂಠಯ್ಯನವರಿಗೇ ನಂಬಿಕೆಯಿಲ್ಲ. ಲಲಿತ ಸಾಹಿತ್ಯವನ್ನು ತಾವು "ರಚಿಸದೆ ಹೋದದ್ದರಿಂದ ನಮ್ಮ ಸಾಹಿತ್ಯಕ್ಕೆ ಅಂಥ ನಷ್ಟವೇನೂ ಆಗಿಲ್ಲವೆಂದು" ಅವರ ಭಾವನೆ. "ಭಾವ ತೀವ್ರವಾದಾಗ, ಅದಕ್ಕೆ ರೂಪು ಕೊಡಲು ಮಾತು ಹದವಾಗಿ ಬಂದಾಗ ಪ್ರತಿಭೆ ಅಷ್ಟೇನೂ ಉನ್ನತವಾಗಿಲ್ಲದವನ ಹೃದಯದಿಂದಲೂ ಕವನ ಆಗಾಗ

---

[1] ಒಲುಮೆ, (೧೯೩೨) ಪು. ೫. [ಇದರ ಮೊದಲನೆಯ ಮುದ್ರಣದ ಪ್ರಕಾಶಕರು : ಪ್ರೊಗ್ರೆಸ್ ಬುಕ್‌ಸ್ಟಾಲ್, ಮೈಸೂರು ; ಎರಡನೆಯ (೧೯೪೩) ಮತ್ತು ಮೂರನೆಯ (೧೯೬೫) ಮುದ್ರಣಗಳ ಪ್ರಕಾಶಕರು : ಶಾರದಾ ಮಂದಿರ, ಮೈಸೂರು.]

ಹೊಮ್ಮುತ್ತದೆ" ಎಂಬುದು ಅವರ ಅಭಿಪ್ರಾಯ.[1] ಆದುದರಿಂದಲೇ ಅವರು ಬಹುಶಃ ಪದ್ಯಕ್ಷೇತ್ರವನ್ನು ಬಿಟ್ಟು ಗದ್ಯದ ಬಯಲಿಗೆ ಇಳಿದರು. ಅಲ್ಲಿಯೂ ಅವರು ಹೆಚ್ಚಾಗಿ ಬರೆಯಲಿಲ್ಲ. ಇದಕ್ಕೂ ಕಾರಣವನ್ನು ಅವರೇ ಹೇಳಿಕೊಂಡಿದ್ದಾರೆ: "ನನಗೆ ಒಗ್ಗುವ ಹಾದಿ ಪದ್ಯಕ್ಕಿಂತ ಹೆಚ್ಚಾಗಿ ಗದ್ಯ; ಎರಡಕ್ಕಿಂತ ಹೆಚ್ಚಾಗಿ ಮೌನ."[2]

'ಕಾವ್ಯ ಸಮೀಕ್ಷೆ'ಯಲ್ಲಿ ಶ್ರೀಕಂಠಯ್ಯನವರ ಐದು ಸಾಹಿತ್ಯಿಕ ಪ್ರಬಂಧಗಳು ಸೇರಿವೆ. ವಿಮರ್ಶೆ ಸಂಶೋಧನೆಗಳ ಸಮನ್ವಯ ಸೃಷ್ಟಿಗೆ ಇದೊಂದು ಸುಂದರ ಸಾಕ್ಷಿ. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟವಾದ 'ಪಂಪ'—ಕವಿ ಕಾವ್ಯ ಪರಿಚಯದ ಕಿರುಕೃತಿ. ಇದನ್ನು ಮೀರಿಸುವ ಪಂಪನನ್ನು ಕುರಿತ ವಿಮರ್ಶೆ ಇನ್ನೂ ಬರಬೇಕಾಗಿದೆ. 'ನಂಬಿಯಣ್ಣನ ರಗಳೆ' ಮತ್ತು 'ಗದಾಯುದ್ಧ ಸಂಗ್ರಹ'—ಗ್ರಂಥ ಸಂಪಾದನೆಯ ಉತ್ಕೃಷ್ಟ ಮಾದರಿಯಾಗಿವೆ. ಆದರೆ, ಈ ಕಾವ್ಯಗಳ ವಿಮರ್ಶೆ ಹಾಗೂ ಇತರ ವಿಷಯಗಳನ್ನು ಕುರಿತ ಚರ್ಚೆಯನ್ನು ಶ್ರೀಕಂಠಯ್ಯನವರು ಬರೆಯದೆ ಹೋದದ್ದು ದುರ್ದೈವದ ಸಂಗತಿ. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರಿಗೆ ಅವರು ಸಿದ್ಧಪಡಿಸಿಕೊಟ್ಟ ೨೪ ಪುಟಗಳ 'ಹೆಣ್ಣುಮಕ್ಕಳ ಪದಗಳು' ಎಂಬ ಚಿಕ್ಕ ಹೊತ್ತಗೆಯಲ್ಲಿಯೂ ಅವರ ಪರಿಷ್ಕಾರದ ಪಾಂಡಿತ್ಯವನ್ನು ಕಾಣಬಹುದಾಗಿದೆ. 'ಸಮಾಲೋಕನ'ದಲ್ಲಿ ಅವರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಬಿಡಿಲೇಖನಗಳೂ, ವಿಮರ್ಶೆ, ಮುನ್ನುಡಿಗಳೂ ಸಂಗ್ರಹಿಸಲ್ಪಟ್ಟಿವೆ. ಸಾಹಿತ್ಯವಿಮರ್ಶೆ, ಸಾಹಿತ್ಯಚರಿತ್ರೆ, ಛಂದಸ್ಸು, ಕಾವ್ಯಮೀಮಾಂಸೆ, ಭಾಷಾಶಾಸ್ತ್ರ, ಪ್ರಾಚೀನ ಸಾಹಿತ್ಯ, ಆಧುನಿಕ ಸಾಹಿತ್ಯ, ನಿಘಂಟುಶಾಸ್ತ್ರ—ಹೀಗೆ ಹಲವು ಹತ್ತು ವಿಚಾರಗಳಲ್ಲಿ ಅವರೆಷ್ಟು ಪರಿಣತರಾಗಿದ್ದರೆಂಬುದಕ್ಕೆ 'ಸಮಾಲೋಕನ' ಉಜ್ವಲ ಸ್ಮಾರಕ. ಈ ಗ್ರಂಥದಲ್ಲಿ ೨೫ ಲೇಖನಗಳಿವೆ. ಹಳೆಯ ಲೇಖನಗಳನ್ನು ಅಲ್ಲಲ್ಲಿ ಮಾರ್ಪಡಿಸಿಯೋ ಅಡಿ ಟಿಪ್ಪಣಿಗಳನ್ನು ಸೇರಿಸಿಯೋ ಕಾಲಕ್ಕೆ ಸರಿಯಾಗಿ ಹೊಂದಿಸಿದ್ದಾರೆ. ಹೆಚ್ಚಿನ ಮಾರ್ಪಾಡು ಆವಶ್ಯಕವೆಂದು ಅವರಿಗೆ ಅನ್ನಿಸಿದ ಕೆಲವು

[1] ಸಾಹಿತಿಗಳ ಸಂಗದಲ್ಲಿ, ಪು. ೧೮೨.

[2] ಅಲ್ಲೇ.

ಲೇಖನಗಳನ್ನು ಸಂಕಲನದಲ್ಲಿ ಅವರು ಜೋಡಿಸಲೇ ಇಲ್ಲ.

'ರಾಕ್ಷಸನ ಮುದ್ರಿಕೆ' ಎಂಬ ಅವರ ನಾಟಕ 'ಮುದ್ರಾರಾಕ್ಷಸ'ದ ಆಧಾರದಿಂದ ರೂಪುಗೊಂಡ ಕೃತಿ. ಇದರಲ್ಲಿ ಮೂಲನಾಟಕದ ಎಷ್ಟೋ ಭಾಗಗಳನ್ನು ಅಕ್ಷರಶಃ ಭಾಷಾಂತರಿಸದೆ ಬಿಟ್ಟಿದ್ದಾರೆ; ಸಂದರ್ಭೋಚಿತವಾಗಿ ಅನೇಕ ಚಿಕ್ಕಪುಟ್ಟ ಮಾರ್ಪಾಡುಗಳನ್ನು ಮಾಡಿದ್ದಾರೆ. ಎಲ್ಲ ಬದಲಾವಣೆಗಳಲ್ಲಿಯೂ ಶ್ರೀಕಂಠಯ್ಯನವರು ನಾಟಕದ ಕಲಾಸೌಂದರ್ಯದ ಹೆಚ್ಚಳಕ್ಕೂ, ಆಧುನಿಕ ವಾಚಕನ ಅಭಿರುಚಿಗೂ, ರಂಗಭೂಮಿಯ ಅನುಕೂಲತೆಗೂ ಗಮನ ಕೊಟ್ಟಿದ್ದಾರೆ.

'ಭಾರತೀಯ ಕಾವ್ಯಮೀಮಾಂಸೆ' ಅವರ ಮೇರುಕೃತಿ. ಮಾತ್ರವಲ್ಲ ಆಧುನಿಕ ಕನ್ನಡದ ಅತಿ ಮಹತ್ವದ ಗ್ರಂಥಗಳಲ್ಲಿ ಅದು ಒಂದಾಗಿದೆ. ಇದನ್ನು ಕುವೆಂಪು ಅವರು 'ಆಚಾರ್ಯಕೃತಿ'ಯೆಂದು ಕರೆದಿರುವುದು ಸಮರ್ಪಕವಾಗಿದೆ.[1] ಭಾರತೀಯ ಕಾವ್ಯಮೀಮಾಂಸೆಯ ಮೂಲತತ್ವಗಳು ಸಮಗ್ರವಾಗಿ ಹೀಗೆ ಒಂದೆಡೆ ದೊರಕುವುದೂ, ಅವುಗಳಿಗೆ ಅಗತ್ಯವಾದ ಆಧುನಿಕ ದೃಷ್ಟಿಯ ವಿಮರ್ಶೆ ವಿವರಣೆ ವಿಶ್ಲೇಷಣೆಗಳು ಕೂಡಿರುವುದೂ ಅತಿ ವಿರಳ. ಇಂಗ್ಲಿಷಿನಲ್ಲಿಯೂ ಇಂಥದೊಂದು ಪುಸ್ತಕ ಇಲ್ಲವೆಂದು ಬಲ್ಲವರು ಹೇಳುತ್ತಾರೆ. ಇದರಲ್ಲಿ ಶ್ರೀಕಂಠಯ್ಯನವರ ಸ್ವಂತದ್ದು ಏನಿದೆ ಎಂದೂ ಕೆಲವರು ಕೇಳುತ್ತಾರೆ. ಅಂಥವರಿಗೆ ಈ ಪುಸ್ತಕ ಈ ಬಗೆಯಾಗಿ ರೂಪು ಪಡೆದಿರುವುದೇ ಶ್ರೀಕಂಠಯ್ಯನವರ ಸ್ವಂತಿಕೆಯೆಂದು ಧಾರಾಳವಾಗಿ ಉತ್ತರ ಹೇಳಬಹುದು.

ಶ್ರೀಕಂಠಯ್ಯನವರು ಮಾಧ್ಯಮಿಕ ಶಾಲೆಯ ಮಕ್ಕಳಿಗಾಗಿ ಬರೆದಿರುವ ವ್ಯಾಕರಣವು ಕನ್ನಡ ಭಾಷೆಯ ಒಂದು ಅತ್ಯುತ್ತಮ ವ್ಯಾಕರಣವಾಗಿದೆ.

ಶ್ರೀಕಂಠಯ್ಯನವರು ವಿವಿಧ ಪತ್ರಿಕೆಗಳಲ್ಲಿಯೂ, ಸಂಕಲನ ಗ್ರಂಥಗಳಲ್ಲಿಯೂ, ಭಾಷಾಶಾಸ್ತ್ರ, ಕಾವ್ಯಮೀಮಾಂಸೆ, ಕನ್ನಡ ಸಾಹಿತ್ಯಗಳನ್ನು ಕುರಿತು ಇಂಗ್ಲಿಷಿನಲ್ಲಿ ಹಲವಾರು ಲೇಖನಗಳನ್ನು ಪ್ರಕಟಿಸಿದ್ದಾರೆ. ಅವುಗಳನ್ನು ಸಂಗ್ರಹಿಸಿ ತೀರ ಈಚೆಗೆ ಅಚ್ಚಿಗೆ ಅಣಿಗೊಳಿಸಿದ್ದಾಗಿದೆ. "Studies in Literature and Linguistics" ಎಂಬ ಹೆಸರಿನಲ್ಲಿ ಪ್ರಕಟವಾಗಬೇಕಾಗಿರುವ ಆ ಪುಸ್ತಕ

---

[1] ಕುವೆಂಪು: ಭಾರತೀಯ ಕಾವ್ಯಮೀಮಾಂಸೆ, ಮುನ್ನುಡಿ ಪು. ix, ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ, ೧೯೫೩.

ಇದೀಗ ಪ್ರಕಾಶಕರ ಕೈಲಿದೆ. ಇದರಲ್ಲಿ ಎರಡು ಭಾಗಗಳಿದ್ದು ಮೊದಲ ಭಾಗದಲ್ಲಿ ಮೈಸೂರಿನವರು ಉಚ್ಚರಿಸುವ ಇಂಗ್ಲಿಷ್, ಕನ್ನಡ ಭಾಷೆಯ ಚಾರಿತ್ರಿಕ ಬೆಳವಣಿಗೆ, ಕನ್ನಡ ಬರವಣಿಗೆಯ ಭಾಷೆ ಮತ್ತು ಆಡುನುಡಿ, ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯರ 'ಹೊಸಗನ್ನಡ ನುಡಿಗನ್ನಡಿ' ಮೊದಲಾದ ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳಿವೆ. ಎರಡನೆಯ ಭಾಗದಲ್ಲಿ ಕಾವ್ಯದಲ್ಲಿ ಅರ್ಥ, ರನ್ನನ ಗದಾಯುದ್ಧ ಮುಂತಾದ ಸಾಹಿತ್ಯ, ಕಾವ್ಯ ಮೀಮಾಂಸೆಗಳಿಗೆ ಸಂಬಂಧಿಸಿದ ಲೇಖನಗಳಿವೆ. ಈ ಸಂಗ್ರಹದಲ್ಲಿ ಬರುವ ಹದಿನಾರು ಲೇಖನಗಳನ್ನು ಅಚ್ಚಿಗೆ ಸಿದ್ಧಗೊಳಿಸಿದ್ದೇ ಶ್ರೀಕಂಠಯ್ಯನವರು ಮರಣಕ್ಕೆ ಕೆಲವು ದಿನಗಳ ಮೊದಲು ಮಾಡಿದ ದೊಡ್ಡ ಕೆಲಸವಾಗಿದೆ. ಇದನ್ನು ಸಿದ್ಧಗೊಳಿಸುವುದರಲ್ಲಿ ನಾನೂ ಭಾಗಿಯಾಗಿದ್ದೆನೆಂಬುದು ನನಗೆ ಸಂತೋಷ ದುಃಖಗಳೆರಡಕ್ಕೂ ಕಾರಣವಾಗಿದೆ. ಈ ಕೃತಿಯನ್ನು ಭಾರತದ ಭಾಷಾವಿಜ್ಞಾನದ ದಿಗ್ಗಜ ಡಾ. ಸುನೀತಿ ಕುಮಾರ ಛಟರ್ಜಿಯವರಿಗೆ ಅರ್ಪಿಸಬೇಕೆಂಬುದು ಶ್ರೀಕಂಠಯ್ಯನವರ ಇಚ್ಛೆಯಾಗಿತ್ತು. ನಮ್ಮ ಯೋಜನೆಯಂತೆ ಈ ಪುಸ್ತಕ ೧೯೬೬ರ ನವಂಬರ್‌ನಲ್ಲಿ ಅವರ ಅರವತ್ತನೆಯ ಹುಟ್ಟುಹಬ್ಬದಂದು ಪ್ರಕಟವಾಗಬೇಕಾಗಿತ್ತು.

ಅವರು ಬರೆಯಲು ಯೋಚಿಸಿಕೊಂಡಿದ್ದು ಬಹಳವಾಗಿತ್ತು. ಅವರು ಸಂಗ್ರಹಿಸಿ ಅನುವಾದಿಸಿರುವ ಸಂಸ್ಕೃತ ಮುಕ್ತಕಗಳ ಸಂಕಲನ 'ಬಿಡಿಮುತ್ತು' ಇಷ್ಟರಲ್ಲಿಯೇ ಪ್ರಕಟವಾಗಬೇಕಾಗಿದೆ. ಆಧುನಿಕ ಭಾಷಾಶಾಸ್ತ್ರದ ಬೆಳಕಿನಲ್ಲಿ ಕೇಶಿರಾಜನ 'ಶಬ್ದಮಣಿದರ್ಪಣ'ಕ್ಕೆ ಒಂದು ವ್ಯಾಖ್ಯಾನವನ್ನು ಬರೆಯಲು ಸಿದ್ಧಗೊಳಿಸಿ ಅದರ ಹೆಸರನ್ನೂ ಪ್ರಕಟಿಸಿದ್ದರು. ಪೂನಾ ಡೆಕ್ಕನ್ ಕಾಲೇಜ್ ಹಾಗೂ ಭಾರತೀಯ ಭಾಷಾವಿಜ್ಞಾನ ಪರಿಷತ್ತುಗಳಿಗಾಗಿ ಅವರು ಕನ್ನಡ ಭಾಷೆಯ ಇತಿಹಾಸವನ್ನು ಬರೆಯಬೇಕಾಗಿತ್ತು. ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧಕರಾಗಿ ಅವರು ಕೆಲಸಮಾಡುತ್ತಿದ್ದು ತೌಲನಿಕ ದ್ರಾವಿಡ ಭಾಷಾವಿಜ್ಞಾನವನ್ನು ಕುರಿತ ಬರವಣಿಗೆಯಲ್ಲಿ ತೊಡಗಿದ್ದರು. 'ಗದಾಯುದ್ಧ'ಕ್ಕೆ ಪೀಠಿಕೆ, ಕನ್ನಡ ಛಂದಸ್ಸಿನ ಸಮಸ್ಯೆಗಳು— ಹೀಗೆ ಅವರ ಹಲವಾರು ಯೋಜನೆಗಳು ಅವರ ಟಿಪ್ಪಣಿಯ ಕಟ್ಟನಲ್ಲಿಯೇ ಮರೆಯಾಗಿ ಹೋಗುತ್ತವೆ. ಈಗ ಯೋಜಿಸಿರುವಂತೆ ಚದರಿಹೋದ ಅವರ

ಲಲಿತ ಬರಹಗಳೆಲ್ಲ 'ನಂಟರು' ಗ್ರಂಥಕ್ಕೆ ಸೇರಿಕೊಳ್ಳುತ್ತವೆ; ಸಂಶೋಧನದ ಬರಹಗಳೆಲ್ಲ 'ಸಮಾಲೋಕನ'ದಲ್ಲಿ ಸಮಾವೇಶಗೊಳ್ಳುತ್ತವೆ. ಕವಿತೆಗಳ ಸಂಕಲನವೊಂದು ಮಾತ್ರ ಬೇರೆಯಾಗಿಯೇ ಪ್ರಕಟವಾಗಬೇಕು.

ಸೊಕ್ಕಿನಲಿ ತಲೆಯೆತ್ತಿ ಜತೆಯುವರ ಕೂಟದಲಿ
ನಾವು ಸಮ ನಿಮಗೆಂದು ನುಡಿವ ಬಲವಿಲ್ಲ!
ಮಿಕ್ಕವರು ಕಡೆಗಣಿಸಿ ನೂಕಿದಾಕಡೆಬಿದ್ದು
ಯಾವ ಮಂಕೋ ಕವಿದು, ಹುದುಗಿರುವೆಲ್ಲ![1]

ಎಂದು ಶ್ರೀಕಂಠಯ್ಯನವರು ಕೊರಗಿ ನಿಟ್ಟುಸಿರು ಬಿಟ್ಟಿದ್ದರು. ಆದರೆ ಈ ಮೂವತ್ತು ವರ್ಷಗಳಲ್ಲಿ ಕನ್ನಡಿಗರು ನಾನಾ ಕ್ಷೇತ್ರಗಳಲ್ಲಿ ನಾವು ಸಮ ನಿಮಗೆಂದು ಜತೆಯುವರ ಕೂಟದಲಿ ಸೊಕ್ಕಿನಲಿ ತಲೆಯೆತ್ತಿ ನುಡಿವ ಬಲವನ್ನು ಗಳಿಸಿಕೊಂಡಿರುವುದು ಹೆಮ್ಮೆಯ ವಿಚಾರ. ಈ ಸಾಧನೆಗೆ ಶ್ರೀಕಂಠಯ್ಯನವರ ಸೇವೆಯೂ ಅತ್ಯಂತ ಗಮನಾರ್ಹವಾದುದೆಂಬುದನ್ನು ನಾವು ಮರೆಯುವಹಾಗಿಲ್ಲ.

ಶ್ರೀಕಂಠಯ್ಯನವರ "ಪಾಂಡಿತ್ಯದ ಪೂರ್ಣಫಲ ಇನ್ನೂ ಕನ್ನಡಿಗರಿಗೆ ಸಾಕಷ್ಟು ಒದಗಿಲ್ಲವೆಂದೇ ಹೇಳಬಹುದು. ಅವರು ಈಗಾಗಲೇ ಮಾಡಿರುವ ಕೆಲಸ ಅತ್ಯಮೂಲ್ಯವಾದುದಾದರೂ ಅವರ ಪಾಂಡಿತ್ಯದ ಆಳ ಅಗಲ ಬೀಸುಗಳನ್ನು ನೋಡಿದವರಿಗೆ ಅವರು ಮಾಡಬೇಕಾದ ಕೆಲಸ ಇನ್ನೂ ಅಗಾಧವಾಗಿದೆ ಎನಿಸದಿರಲಾರದು. ಅವರು ಮಾಡಬೇಕು, ನಿಜ; ಏಕೆಂದರೆ ಅವರು ಮಾಡಬಹುದಾದ ಕೆಲಸ ಇತರರಿಂದ ಸಾಧ್ಯವಿಲ್ಲ. ಆದರೆ ಆ ಕೆಲಸವನ್ನು ಮಾಡಿಸಿಕೊಳ್ಳುವ ಪುಣ್ಯ ಕನ್ನಡಿಗರಿಗಿದೆಯೋ?" ಎಂಬುದಾಗಿ ಪ್ರೊ. ಜವರೇಗೌಡರು ಕೆಲವು ಕಾಲದ ಕೆಳಗೆ ಹೇಳಿದ್ದರು.[2] ಆ ಪುಣ್ಯ ನಿಜಕ್ಕೂ

---

[1] ೧೯೨೮ರಲ್ಲಿ ಪ್ರಕಟವಾದ ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘದ 'ಕಿರಿಯ ಕಾಣಿಕೆ' ಸಂಕಲನದಲ್ಲಿ 'ಕನ್ನಡಿಗನ ಕೊರಗು' ಎಂಬ ಪದ್ಯ ಮೊದಲನೆಯದು. ಇವು ಅದರ ಮೊದಲ ನಾಲ್ಕು ಸಾಲುಗಳು. ಶ್ರೀಕಂಠಯ್ಯನವರ ಕವಿತೆಗಳ ಸಂಕಲನವೊಂದು ಈಗ ಪ್ರತ್ಯೇಕವಾಗಿ ಪ್ರಕಟವಾಗಬೇಕು.

[2] ಸಾಹಿತಿಗಳ ಸಂಗದಲ್ಲಿ, ಪು. ೧೭೪.

ಕನ್ನಡಿಗರಿಗೆ ಪ್ರಾಪ್ತವಾಗದೆ ಹೋದದ್ದು ಅತ್ಯಂತ ದುರ್ದೈವದ ಸಂಗತಿಯಾಗಿದೆ.

೪

ತೀ. ನಂ. ಶ್ರೀಯವರ ಹೆಸರನ್ನು ನಾನು ಮೊದಲು ಕೇಳಿದ್ದು ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗ—ಮೂವತ್ತು ವರ್ಷಗಳ ಕೆಳಗೆ, 'ಕನ್ನಡಿಗನ ಕೊರಗು' ಎಂಬ ಅವರ ಕವಿತೆಯಿಂದಾಗಿ. ಅವರನ್ನು ನಾನು ಮೊದಲ ಬಾರಿಗೆ ನೋಡಿದ್ದು ಇಪ್ಪತ್ತು ವರ್ಷಗಳ ಕೆಳಗೆ ಕಾಸರಗೋಡಿನ ಸಾಹಿತ್ಯ ಸಮ್ಮೇಳನದಲ್ಲಿ ಎಂಬ ನೆನಪು. ನಾನು ಆಗ ಪ್ರೌಢಶಾಲೆಯ ವಿದ್ಯಾರ್ಥಿ. ಅವರ ಗುಂಡು ಮೊಗ, ಆಕರ್ಷಣೀಯ ನಗೆ, ಹೆಗಲಮೇಲೆ ಶಲ್ಯಹಾಕಿಕೊಂಡು, ಸೈಲಿ ಛತ್ರಿ ಹಿಡಿದುಕೊಂಡಿದ್ದ ಅವರ ಮೋಹಕ ವ್ಯಕ್ತಿತ್ವ—ನನ್ನ ಎಳೆಯ ಮನಸ್ಸಿನಲ್ಲಿ ಬಲವಾಗಿ ಉಳಿದುಕೊಂಡವು. ಆಗ ಅವರಿಗೆ ಕಿವಿಯ ನೋವಿತ್ತೆಂದು ಕಾಣುತ್ತದೆ. ಕಿವಿಯಲ್ಲಿ ಹತ್ತಿ ತುಂಬಿಕೊಂಡಿದ್ದರು. ಇಪ್ಪತ್ತು ವರ್ಷಗಳ ನಂತರವೂ ಈಗ ನನಗೆ ಅವರ ಅಂದಿನ ಚಿತ್ರ ಕಣ್ಣೆದುರು ಬಂದು ನಿಲ್ಲುತ್ತದೆ. ಮುಂದೆ ಇಂಟರ್ಮೀಡಿಯಟ್ ಕಳೆದು ನಾನು ಕನ್ನಡ ಆನರ್ಸ್ ತರಗತಿಗೆ ಓದಲು ಮೈಸೂರಿಗೆ ಬಂದಾಗ ಶ್ರೀಕಂಠಯ್ಯನವರು ಧಾರವಾಡದಲ್ಲಿದ್ದರು. ಆದರೆ ಮೊದಲ ವರ್ಷದ ಆನರ್ಸ್ ತರಗತಿಯಲ್ಲಿ ನಾನು ಮಾಡಿದ ಕೆಲಸವೆಂದರೆ ಹಿಂದಿನ ವಿದ್ಯಾರ್ಥಿಗಳಿಗೆ ಶ್ರೀಕಂಠಯ್ಯನವರು ಹೇಳಿ ಬರೆಸಿದ್ದ ಶಬ್ದಮಣಿದರ್ಪಣದ ಟಿಪ್ಪಣಿಗಳನ್ನು ನಕಲು ಮಾಡಿಕೊಂಡದ್ದು. ಮುಂದಿನ ಒಂದೆರಡು ವರ್ಷಗಳಲ್ಲಿ ನಾನು ಬೇರೆ ಬೇರೆ ಸಂದರ್ಭಗಳಲ್ಲಿ ಅವರಿಗೆ ಕಾಗದ ಬರೆದಿದ್ದೆ; ಅವಕ್ಕೆ ಅವರಿಂದ ಉತ್ತರವೂ ಬಂದಿತ್ತು.

೧೯೫೭ರಲ್ಲಿ ನಾನು ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿವೇತನ ಪಡೆದು ಭಾಷಾಶಾಸ್ತ್ರದ ಅಭ್ಯಾಸಕ್ಕೆಂದು ಕಲ್ಕತ್ತ ವಿಶ್ವವಿದ್ಯಾನಿಲಯಕ್ಕೆ ಹೋಗುವ ಮುನ್ನ, ನನ್ನ ವಿಷಯವಾಗಿ ಆಗ ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಭಾಷಾಶಾಸ್ತ್ರ ವಿಭಾಗದ ಮುಖ್ಯ ಪ್ರಾಧ್ಯಾಪಕರಾಗಿದ್ದ ಡಾ. ಸುಕುಮಾರ ಸೇನ್ ಅವರಿಗೆ ಒಂದೆರಡು ಪರಿಚಯದ ಮಾತುಗಳನ್ನು ಬರೆಯ

ಬೇಕೆಂದು ನಾನು, ಪರಿಚಯವಿಲ್ಲದಿದ್ದರೂ, ಶ್ರೀಕಂಠಯ್ಯನವರಿಗೆ ಕೇಳಿಕೊಂಡಿದ್ದೆ. ಶ್ರೀಕಂಠಯ್ಯನವರಿಂದ ನನಗೆ ಕೂಡಲೇ ತುಂಬ ಪ್ರೋತ್ಸಾಹದಾಯಕವಾದ ಒಂದು ಕಾಗದ ಬಂತು. ಅದರಲ್ಲಿ ಅವರು ನನ್ನನ್ನು ಭಾಷಾಶಾಸ್ತ್ರದ ಅಧ್ಯಯನಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಪ್ರೋತ್ಸಾಹವನ್ನು ಪಡೆದು ಕಲ್ಕತ್ತೆಗೆ ಹೋಗುತ್ತಿರುವುದಕ್ಕೆ ಹೃತ್ಪೂರ್ವಕವಾಗಿ ಅಭಿನಂದಿಸಿದ್ದರು. ನನ್ನ ವ್ಯಾಸಂಗವನ್ನು ಹೇಗೆ ನಡೆಸಬೇಕೆಂದೂ ಸಲಹೆ ಸೂಚನೆಗಳನ್ನು ಕೊಟ್ಟಿದ್ದರು. ಜೊತೆಗೆ ಹೀಗೆ ಬರೆದಿದ್ದರು: "ಪ್ರೊ. ಸೇನ್ ಅವರು ದೊಡ್ಡ ವಿದ್ವಾಂಸರು. ಅಂಥ ಸಮರ್ಥರ ಕೈಕೆಳಗೆ ಶಿಕ್ಷಣ ಪಡೆಯುವುದು ಒಂದು ಭಾಗ್ಯ. ಪ್ರೊ. ಸೇನ್ ಅವರಿಗೆ ಈ ದಿನ ನಿಮ್ಮ ವಿಷಯವಾಗಿ ಬರೆದಿದ್ದೇನೆ. ನನ್ನ ಎರಡು ಮಾತಿನಿಂದ ನಿಮಗೆ ಅಲ್ಪ ಸ್ವಲ್ಪ ಪ್ರಯೋಜನವಾದರೆ ನನಗೂ ಸಂತೋಷವಾಗುತ್ತದೆ" (೭-೮-೩೬). ಮಾತ್ರವಲ್ಲದೆ, ನಾನು ಕಲ್ಕತ್ತ ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾಪಕರಾಗಿದ್ದ ಡಾ. ಸುನೀತಿ ಕುಮಾರ ಛಟರ್ಜಿಯವರನ್ನೂ, ನ್ಯಾಷನಲ್ ಲೈಬ್ರೆರಿಯ ಮುಖ್ಯರಾಗಿದ್ದ ಶ್ರೀ ಬಿ. ಎಸ್. ಕೇಶವನ್ ಅವರನ್ನೂ ನೋಡಬೇಕೆಂದೂ, ಅವರಿಗೂ ನನ್ನ ಪರಿಚಯವನ್ನು ಸೂಚಿಸುವುದಾಗಿಯೂ ತಿಳಿಸಿದ್ದರು. ಇದೆಲ್ಲರ ಫಲವಾಗಿ ನಾನು ಮೈಸೂರಿನಲ್ಲಿ ಶ್ರೀಕಂಠಯ್ಯನವರ ವಿದ್ಯಾರ್ಥಿಯಾಗದಿದ್ದರೂ ಕಲ್ಕತ್ತೆಯಲ್ಲಿ ಶ್ರೀಕಂಠಯ್ಯನವರ ಶಿಷ್ಯನೆನಿಸಿಕೊಂಡು ನಿರೀಕ್ಷೆಗೂ ಮೀರಿದ ವಿಶ್ವಾಸ, ಸಹಕಾರ, ಅನುಕೂಲಗಳನ್ನು ಸಂಪಾದಿಸಿಕೊಂಡೆನು. ನಾನು ಪ್ರೊ. ಸೇನ್ ಅವರನ್ನು ಕಂಡಾಗ ಮೊದಲು ಅವರು ನನ್ನನ್ನು ಕೇಳಿದ್ದು: "ನೀವು ಪ್ರೊ. ಶ್ರೀಕಂಠಯ್ಯನವರ ವಿದ್ಯಾರ್ಥಿಯೇ?" ನಾನು "ಇಲ್ಲ" ಎಂದಾಗ ಅವರಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. "ಮತ್ತೆ ನಿಮ್ಮ ವಿಚಾರವಾಗಿ ಅವರು ಅಷ್ಟು ಒಳ್ಳೆಯ ಮಾತುಗಳನ್ನು ಬರೆದಿದ್ದಾರಲ್ಲ!" ಎಂದು ಅವರು ಹೇಳಿದಾಗ ಏನು ಉತ್ತರಿಸಬೇಕೆಂದು ನನಗೆ ತೋರದೆ ಪೇಚಾಡಿದೆ. ಆ ಜೀವಕ್ಕೆ ಪುಣ್ಯವಿರಲಿ.

ಅದೇ ವರ್ಷದ ಕೊನೆಯ ವೇಳೆಗೆ ನಾನು ಶ್ರೀಕಂಠಯ್ಯನವರಿಗೆ ನನ್ನ ಪ್ರಬಂಧಗಳ ಸಂಕಲನದ ಪ್ರತಿಯೊಂದನ್ನು ಕಳಿಸಿಕೊಟ್ಟೆ. ಅದಕ್ಕೆ ಅವರಿಂದ ಯಾವ ಬಗೆಯ ಉತ್ತರವೂ ಬರಲಿಲ್ಲ. ಅದರಿಂದ ನನಗೆ ಸ್ವಲ್ಪ ನಿರಾಶೆಯೇ

ಆಯಿತು. ಆದರೆ ಕೆಲವು ದಿನಗಳಲ್ಲಿಯೇ, ನನ್ನ ಆ ಪುಸ್ತಕಕ್ಕೆ ಮುನ್ನುಡಿ ಬರೆದಿದ್ದ ಶ್ರೀ ಪು. ತಿ. ನರಸಿಂಹಾಚಾರ್ಯರಿಂದ ನನಗೆ ಒಂದು ಕಾಗದ ಬಂತು (೧೮-೧೨-೫೬). ಅದರಲ್ಲಿ ಅವರು ತಮಗೆ ಶ್ರೀಕಂಠಯ್ಯನವರು ಸಿಕ್ಕಿದ್ದರೆಂದೂ ಅವರು ನನ್ನ ಪ್ರಬಂಧಗಳನ್ನು ಬಹುವಾಗಿ ಮೆಚ್ಚಿಕೊಂಡರೆಂದೂ, ಜೊತೆಗೆ ಮುನ್ನುಡಿಯನ್ನೂ ತುಂಬ ಇಷ್ಟಪಟ್ಟರೆಂದೂ ಬರೆದಿದ್ದರು. ಇದರಿಂದ ನನಗೆ ಸ್ವಲ್ಪ ಸಂತೋಷವಾಯಿತಾದರೂ ಶ್ರೀಕಂಠಯ್ಯನವರು ನನಗೇ ಏಕೆ ಬರೆಯಲಿಲ್ಲ ಎಂಬ ಕೊರಗು ಬಾಧಿಸುತ್ತಿತ್ತು. ೧೯೫೭ರ ಬೇಸಿಗೆಯಲ್ಲಿ ಭಾಷಾ ಶಾಸ್ತ್ರದ ಶಿಬಿರಕ್ಕೆಂದು ನಾನು ಡೆಹರಾಡೂನಿಗೆ ಹೋಗಿದ್ದೆ. ಅಲ್ಲಿಗೆ ಶ್ರೀಕಂಠಯ್ಯನವರೂ ಬಂದರು. ಮೊದಲು ನಮ್ಮ ಭೇಟಿಯಾದಾಗ ಅವರು ಕೈಕುಲುಕಿ ನನ್ನ ಪ್ರಬಂಧಗಳಿಗಾಗಿ ಹೃತ್ಪೂರ್ವಕವಾಗಿ ಅಭಿನಂದಿಸಿದರು. "ನಿಮ್ಮನ್ನು ಮುಖತಃ ನೋಡಿಯೇ ನನ್ನ ಸಂತೋಷವನ್ನು ವ್ಯಕ್ತಪಡಿಸಬೇಕೆಂದು ಉದ್ದೇಶಿಸಿ ನಾನು ನಿಮಗೆ ಕಾಗದ ಬರೆಯಲಿಲ್ಲ" ಎಂದೂ ಅವರು ಹೇಳಿದರು. ನನ್ನನ್ನು ಅವರು ಬೇರೆ ಕೆಲವು ಪ್ರಾಧ್ಯಾಪಕರುಗಳಿಗೆ ಪರಿಚಯಮಾಡಿಕೊಡುವಾಗ ನನ್ನ ಬರವಣಿಗೆಯ ಬಗೆಗೆ ಆಡುತ್ತಿದ್ದ ವಿಶ್ವಾಸಪೂರ್ವಕವಾದ ಮಾತುಗಳನ್ನು ಕೇಳಿ ನಾನು ನಾಚಿಕೊಳ್ಳುವಂತಾಗುತ್ತಿತ್ತು. ಅಷ್ಟೇ ಅಲ್ಲದೆ ತೀರ ಈಚೆಗೆ ನನ್ನ ವಿಷಯದಲ್ಲಿ ಅವರು ಬರೆದ ಒಂದು ಶಿಫಾರಸ್ ಪತ್ರದಲ್ಲಿಯೂ "He has written some delightful prose in Kannada" ಎಂದು ಸೇರಿಸಿದ್ದರು.

ಡೆಹರಾಡೂನ್ ಶಿಬಿರದಲ್ಲಿ ಅವರು ಹೆಚ್ಚು ದಿನ ಇರುವುದು ಆಗದಿದ್ದರೂ, ಇದ್ದ ಅವಧಿಯಲ್ಲಿ ನಮ್ಮ ಪರಿಚಯ ನಿಕಟವಾಯಿತು. ಕನ್ನಡ ಭಾಷೆಯನ್ನು ಕುರಿತ ಅವರ ಉಪನ್ಯಾಸಗಳ ತರಗತಿಯಲ್ಲಿ ನಾನು ಕುಳಿತಾಗ ಅವರು ಆ ಉಪನ್ಯಾಸಗಳಿಂದ ನನಗೆ ಹೆಚ್ಚಿನ ಉಪಯೋಗವಾಗುವುದಿಲ್ಲವೆಂದೂ, ಪಕ್ಕದ ಕೊಠಡಿಯಲ್ಲಿದ್ದ ಪ್ರೊ. ಟಿ. ಪಿ. ಮೀನಾಕ್ಷಿಸುಂದರನ್ ಅವರ ತಮಿಳು ಭಾಷೆಯನ್ನು ಕುರಿತ ಉಪನ್ಯಾಸಗಳಿಗೆ ಹೋಗಬೇಕೆಂದೂ ಸೂಚಿಸಿದರು. ತರಗತಿ ಮುಗಿದನಂತರ ಅವರೇ ಪ್ರೊ. ಮೀನಾಕ್ಷಿ ಸುಂದರನ್ ಅವರ ಬಳಿಗೆ ಬಂದು ನನ್ನ ಪರಿಚಯ ಮಾಡಿಕೊಟ್ಟರು.

ಮುಂದೆ ಮೈಸೂರಿನ ಮಹಾರಾಜರವರ ಕಾಲೇಜಿನಲ್ಲಿಯೂ, ಮಾನಸ

ಗಂಗೋತ್ರಿಯಲ್ಲಿಯೂ ಅವರ ಜತೆ ಕೆಲಸಮಾಡುವ, ಭಾಷಾಶಾಸ್ತ್ರದ ಬೇಸಿಗೆ ಶಿಬಿರಗಳಲ್ಲಿ ಒಡನಾಡುವ, ಹಲವು ಸಮಿತಿಗಳಲ್ಲಿ ಅವರೊಡನೆ ಸಹಕರಿಸುವ ಸಂದರ್ಭಗಳು ನನಗೆ ಒದಗಿದವು. ಅನೇಕ ವಿಚಾರಗಳಲ್ಲಿ ನನ್ನ ಅವರ ದೃಷ್ಟಿಗಳು ಒಂದಾಗಿರಲಿಲ್ಲ; ಆದರೆ ನನ್ನ ಬಗೆಗೆ ಅವರ ಒಲವೂ ವಿಶ್ವಾಸವೂ ಕೊರೆಯಾಗಲಿಲ್ಲ. ೧೯೬೦ರಲ್ಲಿ ನಾನೂ ಅವರೂ, ಭಾರತದ ಭಾಷಾವಿಜ್ಞಾನಿಗಳ ಸಮ್ಮೇಳನಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಪ್ರತಿನಿಧಿಗಳಾಗಿ ಹೋಗಿದ್ದೆವು. ನಮ್ಮ ಪ್ರವಾಸದ ಉದ್ದಕ್ಕೂ ನನ್ನ ಊಟ ನಿದ್ರೆಗಳಲ್ಲಿ ಅವರು ವಹಿಸುತ್ತಿದ್ದ ಎಚ್ಚರವನ್ನು ನೆನಸಿಕೊಂಡರೆ ಈಗಲೂ ನನಗೆ ಸಂಕೋಚವಾಗುತ್ತದೆ, ಮನಸ್ಸು ಭಾರವಾಗುತ್ತದೆ. ೧೯೬೨ರಲ್ಲಿ ನಾನು ಅಮೆರಿಕೆಗೆ ಹೊರಡುವ ಮುನ್ನ ಅವರಿಗೆ ಹೇಳಿಬರಲು ಹೋದಾಗ ನನ್ನನ್ನು ಕೂರಿಸಿಕೊಂಡು ಅವರು ತಮ್ಮ ಅನುಭವಗಳನ್ನೂ, ನನ್ನ ಉಪಯೋಗಕ್ಕೆಂದು ಹಲವು ಹಿತನುಡಿಗಳನ್ನೂ ಹೇಳಿದ 'ಆ ಸಂಜೆ' ಇನ್ನೂ ನನ್ನ ಕಣ್ಣೆದುರಿಗಿದೆ. ನಾನು ಅಮೆರಿಕೆಯಿಂದ ಮರಳಿ ಬಂದಮೇಲೆ ಎಷ್ಟೋ ಸಲ ನಮ್ಮ ಅನುಭವಗಳನ್ನು ತಾಳೆ ನೋಡುತ್ತಿದ್ದೆವು. ನನಗಿನ್ನೂ ನೆನಪಿದೆ: ನಾನು ಮಾರಿಸ್ ಸ್ವಾಡಿಷ್ ಭೇಟಿಯಾದ ವಿಚಾರ ತಿಳಿಸಿದಾಗ ಅವರಿಗಾದ ಸಂತೋಷ ಅದ್ಭುತವಾದದ್ದು. "ನಿಜಕ್ಕೂ?" ಎಂದು ಭುಜಕುಣಿಸಿ, ತಮ್ಮ ಪತ್ನಿಯವರನ್ನು ಕೂಗಿ ಕರೆದು ಹೇಳಿದರು—"ನೋಡೆ, ನಾಯಕ್‌ಗೆ ಅಮೆರಿಕಾದಲ್ಲಿ ಸ್ವಾಡಿಷ್ ಸಿಕ್ಕಿದ್ದರಂತೆ, ನನ್ನನ್ನು ಬಹಳವಾಗಿ ವಿಚಾರಿಸಿದರಂತೆ."

೫

ಶ್ರೀಕಂಠಯ್ಯನವರದು ತುಂಬ ಒಪ್ಪವಾದ, ಓರಣವಾದ, ವ್ಯವಸ್ಥಿತವಾದ ಜೀವನ. ಪೆನ್ಸಿಲ್ ಕೆತ್ತುವುದರಿಂದ, ತಲೆಬಾಚಿಕೊಳ್ಳುವವರೆಗೆ ಅವರದು ಒಂದೇ ವಿಧಾನ. ಅಲ್ಲಿ ಆವೇಗ ಉದ್ವೇಗಗಳಿಗೆ ಆಸ್ಪದವಿಲ್ಲ. ತಮ್ಮ ವೇಷಭೂಷಣಗಳಲ್ಲಿ ತೋರುತ್ತಿದ್ದ ಕಲೆಗಾರಿಕೆಯನ್ನೇ ಪುಸ್ತಕಕ್ಕೆ ರಟ್ಟು ಹಾಕುವುದರಲ್ಲಿಯೂ ಅವರು ತೋರುತ್ತಿದ್ದರು. ತಮ್ಮ ಪಾಲಿನ ಕೆಲಸ ನಡೆಸುವುದರಲ್ಲಿ ಅವರು ಸ್ವಲ್ಪವೂ ಅತ್ತಿತ್ತ ನಡೆದವರಲ್ಲ. ನಿವೃತ್ತರಾಗಿ ಅಧಿಕಾರವನ್ನು

ವಹಿಸಿಕೊಟ್ಟು ಕಛೇರಿಯಿಂದ ಹೊರಗೆ ಬಂದಾಗ ತಮ್ಮ ಹೆಸರಿನ ಹಲಗೆಯನ್ನೂ ತೆಗೆಸಿ ಇಡಲು ಅವರು ಮರೆಯದಿದ್ದ ಸಂಗತಿಯನ್ನು ಆ ಹೊತ್ತಿನಲ್ಲಿ ಅಲ್ಲಿದ್ದವರಾರೂ ಮರೆಯುವಂತಿಲ್ಲ !

ಅವರದು ಪ್ರೀತಿಯ, ತೃಪ್ತಿಯ ಕುಟುಂಬಜೀವನ. ಅವರು ತಮ್ಮ ಪತ್ನಿಯೊಡನೆ ಆಗಾಗ ಹಾರಿಸುತ್ತಿದ್ದ ಹಾಸ್ಯದ ಚಟಾಕಿಗಳು ತರುಣರನ್ನೂ ನಾಚಿಸುತ್ತಿದ್ದವು. ತಮ್ಮ ಮಗನೊಡನೆ ನಡೆದುಕೊಳ್ಳುತ್ತಿದ್ದುದನ್ನು ನೋಡಿದರೆ, ಸ್ನೇಹಿತರೊಡನೆ ವರ್ತಿಸುತ್ತಿರುವಂತೆ ತೋರುತ್ತಿತ್ತು. ಅವರು ತುಂಬ ಸ್ನೇಹಪರರು; ಸರಸಿಗಳು. ಕಪಟ ಅವರಿಗೆ ತಿಳಿಯದು. ಉಪಚಾರ ಸತ್ಕಾರಗಳಲ್ಲಿ ಧಾರಾಳ; ಮನೆಯಲ್ಲಿಯೂ ಸಭೆ ಸಮಿತಿಗಳಲ್ಲಿಯೂ ಅವರು ತಿಂಡಿತೀರ್ಥಗಳನ್ನು ಸಾಕೆನಿಸುವಷ್ಟು ನೀಡುತ್ತಿದ್ದರು. ಖರ್ಚಿನಲ್ಲಿ ಅವರು ಕೈಹಿಡಿದವರಲ್ಲ. ಒಟ್ಟಿನಲ್ಲಿ ಶ್ರೀಕಂಠಯ್ಯನವರ ಬದುಕು ಋಜು ಜೀವನದ ಒಂದು ಸುಂದರವಾದ ಅಧ್ಯಾಯ.

ಕೆಲವು ಸಲ ಅವರು ಶೀಘ್ರವಾಗಿ ಕೋಪಗೊಳ್ಳುತ್ತಿದ್ದರು; ತೀಕ್ಷ್ಣವಾಗಿ ಅಸಮಾಧಾನವನ್ನು ವ್ಯಕ್ತಪಡಿಸುತ್ತಿದ್ದರು. ಅವರು ಸಿಡುಕುತ್ತಿದ್ದುದನ್ನೂ ನಾನು ನೋಡಿದ್ದೇನೆ. ತಮಗೆ ಅನ್ನಿಸಿದ್ದನ್ನು ಒಡನೆಯೇ ಹೇಳಿ ಎಷ್ಟೋ ಸಲ ತಪ್ಪುತಿಳಿವಳಿಕೆಗೆ ಕಾರಣರಾಗುತ್ತಿದ್ದರು. ವ್ಯಕ್ತಿಗಳ ನಿಜಗುಣಗಳನ್ನು ಅವರು ತಪ್ಪಾಗಿ ಗುರುತಿಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಅವರಲ್ಲಿ ವ್ಯವಹಾರ ಚತುರತೆ ಅಷ್ಟಾಗಿ ಕಾಣಿಸುತ್ತಿರಲಿಲ್ಲ. ಅವರ ಅನೇಕ ನಿರ್ಣಯಗಳಲ್ಲಿ ದೂರ ದೃಷ್ಟಿ ತೋರುತ್ತಿರಲಿಲ್ಲ. ಸಭೆ, ಸಮಿತಿಗಳಲ್ಲಿ ತಮ್ಮ ಅಭಿಪ್ರಾಯಗಳಿಗೆ ವಿರೋಧ ಬಂದಾಗ ಅದರಿಂದ ಅವರು ಖಿನ್ನರಾಗುತ್ತಿದ್ದರು; ಉದ್ರೇಕಗೊಳ್ಳುತ್ತಿದ್ದರು. ಇದೆಲ್ಲವೂ ಆ ಕ್ಷಣದಲ್ಲಿ ಮಾತ್ರ. ಅವರ ಬಹು ದೊಡ್ಡ ಕೊರತೆಯೆಂದರೆ ಅವರಿಗೆ ಪ್ರಬಲವಾದ ಇಷ್ಟಾನಿಷ್ಟಗಳಿದ್ದವು. ಆದರೆ ಈ ಕೊರತೆಗಳನ್ನೆಲ್ಲ ಮರೆಸುವ ಸೌಜನ್ಯ ಸಜ್ಜನಿಕೆಗಳು ಅವರಿಗಿದ್ದವು.

ಪ್ರೊಫೆಸರ್ ಶ್ರೀಕಂಠಯ್ಯನವರು 'ಉಡಾಫೆ' ವಿದ್ವಾಂಸರಾಗಿರಲಿಲ್ಲ. ಅವರು ಯಾವುದೇ ಅನುಮಾನಕ್ಕೂ ಅವಕಾಶ ಕೊಡುತ್ತಿರಲಿಲ್ಲ. ನಿಷ್ಕೃಷ್ಟತೆ ಅವರ ವಿದ್ವತ್ತಿನ ಪ್ರಮುಖ ಲಕ್ಷಣ. ಒಂದುಸಲ ನಾನು ಅವರನ್ನು ಒಂದು ಶಿಫಾರಸ್ ಪತ್ರ ಕೇಳಿದೆ. ಆ ಚಿಕ್ಕ ಪತ್ರ ಬರೆದು ಮುಗಿಸುವಷ್ಟರಲ್ಲಿಯೇ

ಅವರು ನಾಲ್ಕಾರು ಸಲ ಒಂದೆರಡು ಅರ್ಥಕೋಶಗಳನ್ನು ತಿರುವಿಹಾಕಿದರು! ಹಿಂದಿನಿಂದ ಪತ್ರವನ್ನು ನಾನು ನೋಡಿಕೊಂಡಾಗ ಅದರಲ್ಲಿ ಅವರು ಯಾವ ಪದವನ್ನೂ ಹೊಡೆದು ಬರೆದಿರಲಿಲ್ಲ. ಮಾತ್ರವಲ್ಲ ಅರ್ಥಕೋಶ ನೋಡ ಬೇಕಾದ ಯಾವ ಪದವೂ ನನಗೆ ಅಲ್ಲಿ ಕಾಣಿಸಲಿಲ್ಲ!

ಕನ್ನಡ ಸಂಸ್ಕೃತ ಇಂಗ್ಲಿಷ್ ಭಾಷೆಗಳಲ್ಲಿ ಶ್ರೀಕಂಠಯ್ಯನವರದು ಖಚಿತ ವಾದ ವಿದ್ವತ್ತು. ಅವರು ಆದರ್ಶ ಅಧ್ಯಾಪಕರಾಗಿದ್ದರು; ಉತ್ತಮ ವಾಗ್ಮಿ ಗಳಾಗಿದ್ದರು. ಇಂಗ್ಲಿಷ್ ಕನ್ನಡ ಎರಡರಲ್ಲಿಯೂ ಅವರು ನಿರರ್ಗಳವಾಗಿ ಮಾತನಾಡಬಲ್ಲವರಾಗಿದ್ದರು. ಕಾವ್ಯಮೀಮಾಂಸೆ, ಭಾಷಾವಿಜ್ಞಾನ ಎರಡ ರಲ್ಲಿಯೂ ಅವರಿಗೆ ಒಂದೇ ವಿಧವಾದ ಆಸಕ್ತಿ; ಒಂದೇ ಬಗೆಯ ವಿದ್ವತ್ತು. ಭಾಷಾನಾಣ್ಯದ ಈ ಎರಡೂ ಮುಖಗಳಲ್ಲಿ ಏಕಪ್ರಕಾರವಾದ ಸಾಧನೆ ಸಿದ್ಧಿಗಳು ಬಹು ವಿರಳ. ಈ ಎರಡರಲ್ಲಿ ನಿಮಗೆ ಯಾವುದು ಹೆಚ್ಚು ಮೆಚ್ಚು ಎಂದು ಕೇಳಿದರೆ ಶ್ರೀಕಂಠಯ್ಯನವರ ಉತ್ತರ: "ನಿನಗೆ ಬಲಗಣ್ಣು ಹೆಚ್ಚೋ ಎಡಗಣ್ಣು ಹೆಚ್ಚೋ ಎಂದು ಕೇಳಿದರೆ ಏನು ಉತ್ತರ ಹೇಳುವುದು? ನಾನು ಕಾಲೇಜಿನಲ್ಲಿ ಓದುವಾಗ ನನ್ನ ಪೂಜ್ಯಗುರುಗಳಾದ ಪ್ರೊ. ಹಿರಿಯಣ್ಣನವರ ಕೃಪೆಯಿಂದ ಕಾವ್ಯಮೀಮಾಂಸೆ, ಭಾಷಾವಿಜ್ಞಾನ, ಈ ಎರಡರಲ್ಲೂ ಪ್ರವೇಶ ದೊರೆಯಿತು; ಎರಡೂ ನನ್ನ ಮನಸ್ಸನ್ನು ಸೆಳೆದವು....ನಾನು ಕಾವ್ಯವನ್ನು ಓದುವಾಗ ಕೂಡ ಅದರ ಶಬ್ದರೂಪಗಳ ಕಡೆಗೆ ಗಮನದ ಒಂದು ಭಾಗ ಹೋಗಿರುತ್ತದೆ....ಭಾಷಾರೂಪಗಳ ಅನ್ವೇಷಣ ವಿಶ್ಲೇಷಣಗಳಲ್ಲಿಯೂ ಅವುಗಳ ರೂಪಸೌಂದರ್ಯವೂ ನಿಷ್ಪತ್ತಿಸ್ವಾರಸ್ಯವೂ ಹೃದಯವನ್ನು ಉಕ್ಕಿಸು ತ್ತವೆ. ಇದು ಸರಿಯೆಂದೇ ನನ್ನ ಎಣಿಕೆ. ಆಚಾರ್ಯ ಅಭಿನವಗುಪ್ತ ಬಹಳ ಹಿಂದೆಯೇ ಹೇಳಿದ: ಒಂದು ಕಣ್ಣಿನ ನೋಟ ಸಾಲದು; ಸರಿಯಾಗಿ ಕಾಣಬೇಕಾದರೆ ಎರಡು ಕಣ್ಣೂ ಬೇಕು ಎಂದು. 'ನಹಿ ಏಕಯಾ ದೃಷ್ಟ್ಯಾ ಶಿ ಸಮ್ಯಜ್ನಿರ್ವರ್ಣನಂ ಭವತಿ.' ಇದರ ಮೇಲೆ ಈ ಎರಡಕ್ಕೂ ಅಂಥ ವೈಷಮ್ಯವೂ ಇಲ್ಲ. ಭಾಷೆಯೆಲ್ಲ ಕವಿತೆ ಎಂದು ಕ್ರೋಚೆ ಹೇಳಿದ್ದಾನೆ.... ಭಾಷೆ ಕವಿತೆಯಾದರೆ ಭಾಷಾವಿಜ್ಞಾನ ಕಾವ್ಯಮೀಮಾಂಸೆಯೂ ಆಗ ಬಹುದು ಎಂದು ಹೇಳಿದರೆ ಏನು ತಪ್ಪು?"[1] ಶ್ರೀಕಂಠಯ್ಯನವರ ಈ

[1] ಅದೇ. ಪು. ೧೮೨-೮೩.

ಮಾತುಗಳನ್ನು ಕೇಳುತ್ತಿರುವಾಗ ಮಲಾರ್ಮೆಯ "Poetry is not written with ideas but with words" ಎಂಬ ಪ್ರಖ್ಯಾತವಾದ ಹೇಳಿಕೆಯ ನೆನಪಾಗುತ್ತದೆ.

ಖಂಡಿತವಾಗಿಯೂ ಪ್ರೊಫೆಸರ್ ಶ್ರೀಕಂಠಯ್ಯನವರು ಈ ಶತಮಾನದ ಕನ್ನಡ ಪಾಂಡಿತ್ಯದ ಒಂದು ಶ್ರೇಷ್ಠ ಉದಾಹರಣೆಯಾಗಿದ್ದರು.

೬

ಈಚಿನ ಒಂದೆರಡು ವರ್ಷಗಳಲ್ಲಿ ಶ್ರೀಕಂಠಯ್ಯನವರ ಆರೋಗ್ಯ ಕುಸಿಯುತ್ತಾ ಬಂದಿತ್ತು. ಕೆಲಸ, ಪ್ರವಾಸಗಳಲ್ಲಿ ಅವರು ತಮ್ಮ ಆರೋಗ್ಯಕ್ಕೆ ಕೊಡಬೇಕಾದ ಗಮನಕೊಡಲಿಲ್ಲ. ಅವರ ಉತ್ಸಾಹ, ಚಟುವಟಿಕೆ, ಎಂದಿಗೂ ಮರೆಯಲಾಗದ ಅವರ ಮೋಹಕ ನಗು—ಇವು ಅವರ ಸುತ್ತಲಿನವರನ್ನೂ ಮೋಸಗೊಳಿಸಿದವು. ದೆಹಲಿ, ಅಣ್ಣಾಮಲೈ ವಿಶ್ವವಿದ್ಯಾನಿಲಯಗಳಿಂದ ಅವರಿಗೆ ಪ್ರಾಧ್ಯಾಪಕರಾಗಿ ಬರುವಂತೆ ಆಹ್ವಾನಗಳು ಬಂದಿದ್ದು ಅನಾರೋಗ್ಯದ ಕಾರಣಗಳಿಂದಲೇ ಅವನ್ನು ಒಪ್ಪಿಕೊಳ್ಳುವುದು ಅವರಿಗೆ ಸಾಧ್ಯವಾಗಲಿಲ್ಲ.

ಆಚಾರ್ಯ ಶ್ರೀಕಂಠಯ್ಯನವರು ಬದುಕಿದ್ದಿದ್ದರೆ ನಾಳೆ ನವಂಬರ್ ತಿಂಗಳಿಗೆ ಅವರಿಗೆ ಅರುವತ್ತು ವರ್ಷಗಳು ತುಂಬುತ್ತಿದ್ದುವು. ಆ ಸಂದರ್ಭದಲ್ಲಿ ಅವರಿಗೆ 'ಶ್ರೀಕಂಠಿಕೆ' ಎಂಬ ಒಂದು ಅಭಿನಂದನ ಗ್ರಂಥವನ್ನು ಒಪ್ಪಿಸಬೇಕೆಂದು ಮೈಸೂರಿನ ಅವರ ಕೆಲವು ಶಿಷ್ಯಮಿತ್ರರು ಇಚ್ಛಿಸಿ ಆ ಕುರಿತ ಸುತ್ತೋಲೆ ಇನ್ನೂ ಅಚ್ಚಿನ ಮನೆಯಲ್ಲಿಯೇ ಇದೆ. ಸೆಪ್ಟಂಬರ್ ಹತ್ತನೆಯ ತಾರೀಖು ಅವರು ಕಲ್ಕತ್ತೆಯಿಂದ ಮೈಸೂರಿಗೆ ಮರಳಬೇಕಾಗಿತ್ತು. ನಮ್ಮಲ್ಲಿ ಎಷ್ಟೋ ಜನ ಅವರನ್ನು ಅಂದೇ ರಾತ್ರಿಯೋ, ಮಾರನೆದಿನ ಬೆಳಗ್ಗೆಯೋ ನೋಡುವ ಕಾರ್ಯಕ್ರಮವಿತ್ತು. ಅದಕ್ಕಾಗಿ ಅವರು ಕಲ್ಕತ್ತೆಯಿಂದಲೇ ಕಾಗದ ಬರೆದಿದ್ದರು....

ಆದರೇನು? ಶ್ರೀಕಂಠಯ್ಯನವರು ಇನ್ನು ಬರುವುದಿಲ್ಲ. ಅವರ ಆ ನಗೆಯನ್ನು ಮತ್ತೆ ನಾವು ನೋಡುವುದಿಲ್ಲ.

ಮೇಯಿಸಲು ಆಡುಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಐದು ವರ್ಷದ ಬಾಲಕನಿಗೆ, ತನ್ನ ಓರಗೆಯವರು ಸ್ಲೇಟು ಪುಸ್ತಕ ಹಿಡಿದುಕೊಂಡು ಶಾಲೆಗೆ ಹೋಗುವುದನ್ನು ನೋಡಿ, ತಾನೂ ಅವರಂತೆ ಶಾಲೆಗೆ ಹೋಗ ಬೇಕೆಂಬ ಆಸೆಯಾಯಿತು. ಆದರೆ ತನ್ನ ಮನೆಯ ಕಡುಬಡತನದ ಪರಿಸ್ಥಿತಿ ಯಲ್ಲಿ ಅವನು ಹಾಗೆ ಮಾಡುವುದು ಸಾಧ್ಯವಿರಲಿಲ್ಲ. ಹುಡುಗ ಆಸೆಯನ್ನು ಬಿಟ್ಟುಕೊಡಲಿಲ್ಲ. ಆಡುಗಳನ್ನು ಬೇಲಿಯಲ್ಲಿ ತರುಬಿ ತಾನು ಶಾಲೆಗೆ ಹೋಗ ಲಾರಂಭಿಸಿದ. ಅವರಿವರ ಸ್ಲೇಟು ಬಳಪ ಎರವಲು ಪಡೆದು ಅಕ್ಷರಗಳನ್ನು ಕಲಿತ.

ಒಂದು ದಿನ ಅವನು ಶಾಲೆಯಲ್ಲಿದ್ದಾಗ ಅವನ ಆಡುಗಳೆಲ್ಲ ಪಕ್ಕದ ಹೊಲಕ್ಕೆ ನುಗ್ಗಿದವು. ಹುಡುಗನ ತಂದೆಗೆ ದೂರು ಹೋಯಿತು. ತಂದೆ ಕೋಪದಿಂದ ಕಿಡಿಕಿಡಿಯಾದರು. ಮಗನನ್ನು ಹುಡುಕಿಕೊಂಡು ಶಾಲೆಗೆ ಬಂದರು. ಮಗನನ್ನು ಹೊರಗೆ ಕರೆಸಿ ಮೈ ಮುಖ ನೋಡದೆ ಹೊಡೆಯ ತೊಡಗಿದರು. ಎಳೆಯ ಬಾಲಕ ಒಂದೇ ಸಮನೆ ಚೀರಲಾರಂಭಿಸಿದ. ಮೈ ಮುಚ್ಚದ ಉಡುಗೆಯ ಆ ಬುದ್ಧಿವಂತ ಬಾಲಕನ ಕರುಣಾಜನಕ ಸ್ಥಿತಿ ಶಾಲೆಯ ಅಧ್ಯಾಪಕರೊಬ್ಬರ ಕರುಳನ್ನು ಕರಗಿಸಿತು. ತರಗತಿಯಿಂದ ಓಡಿ ಬಂದು ಹುಡುಗನನ್ನು ಬಿಡಿಸಿಕೊಂಡು ಶಾಲೆಯ ಮುಖ್ಯೋಪಾಧ್ಯಾಯರ ಬಳಿ ಕರೆದೊಯ್ದರು. ಎಲ್ಲ ಸಂಗತಿಯನ್ನೂ ಅವರಿಗೆ ವಿವರಿಸಿ ಹೇಳಿದರು.

ಮುಖ್ಯೋಪಾಧ್ಯಾಯರು ಹುಡುಗನ ತಂದೆಯನ್ನು ಕರೆಸಿಕೊಂಡು, ಹುಡುಗ ಬುದ್ಧಿವಂತನಾಗಿದ್ದಾನೆಂದೂ, ಶಾಲೆಗೆ ಕಳಿಸಿಕೊಡಬೇಕೆಂದೂ ಹೇಳಿದರು. ತಂದೆ ತಮ್ಮ ಬಡತನವನ್ನೆಲ್ಲ ವಿವರಿಸಿ, ಈಗಾಗಲೇ ಮೊದಲ ಮಗನನ್ನು ಶಾಲೆಗೆ ಕಳಿಸುತ್ತಿರುವುದಾಗಿಯೂ, ಅವನಿಗೇ ಸ್ಲೇಟು ಪುಸ್ತಕ ಕೊಡಿಸುವ ಸಾಮರ್ಥ್ಯ ತಮ್ಮಲ್ಲಿಲ್ಲವೆಂದೂ, ಇಂಥ ಪರಿಸ್ಥಿತಿಯಲ್ಲಿ ಈಗ ಇನ್ನೊಬ್ಬನನ್ನು ಶಾಲೆಗೆ ಕಳಿಸುವುದು ಸಾಧ್ಯವಿಲ್ಲವೆಂದೂ ಖಡಾಖಂಡಿತವಾಗಿ

ಹೇಳಿಬಿಟ್ಟರು. ಮುಖ್ಯೋಪಾಧ್ಯಾಯರು ಅಷ್ಟಕ್ಕೇ ಸುಮ್ಮನಾಗಲಿಲ್ಲ. ಹುಡುಗನ ಸ್ಲೇಟು ಪುಸ್ತಕ ಬಟ್ಟೆಗಳನ್ನು ತಾವು ಕೊಡಿಸುವುದಾಗಿಯೂ ಆದರೆ ಹುಡುಗನನ್ನು ಶಾಲೆಗೆ ಕಳಿಸಲೇಬೇಕೆಂದೂ ಇಲ್ಲದಿದ್ದರೆ ಸರ್ಕಾರಕ್ಕೆ ದೂರುಕೊಟ್ಟು ಜುಲ್ಮಾನೆ ವಿಧಿಸುವುದಾಗಿಯೂ ಗದರಿಸಿದರು. ಬಡ ತಂದೆಗೆ ಬೇರೆ ದಾರಿಯೇ ಉಳಿಯಲಿಲ್ಲ. ಹುಡುಗ ಮರುದಿನದಿಂದ ಶಾಲೆಗೆ ಸೇರಿದ.

ಇದು ಸುಮಾರು ನಲವತ್ತೈದು ವರ್ಷಗಳ ಹಿಂದಿನಮಾತು. ಈ ಬಾಲಕನೇ ಇಂದಿನ ಕನ್ನಡ ಪ್ರಪಂಚದಲ್ಲಿ ಖ್ಯಾತನಾಮರಾಗಿರುವ ಪ್ರೊಫೆಸರ್ ದೇ. ಜವರೇಗೌಡರು. ಬಾಲಕ ಶಾಲೆಗೆ ಸೇರಲು ಕಾರಣರಾದ ಮುಖ್ಯೋಪಾಧ್ಯಾಯರು ಮೈಸೂರು ರಾಜಕೀಯದಲ್ಲಿ ಪ್ರಸಿದ್ಧರಾಗಿರುವ ಶ್ರೀ ಎಚ್. ಕೆ. ವೀರಣ್ಣಗೌಡರು. ಜವರೇಗೌಡರನ್ನು ಶಾಲೆಗೆ ಸೇರಿಸಲು ಕಾರಣರಾಗಿ ವೀರಣ್ಣಗೌಡರು ಕನ್ನಡ ಜನತೆಯ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಚನ್ನಪಟ್ಟಣ ತಾಲ್ಲೂಕಿನ ಒಂದು ಸಣ್ಣ ಹಳ್ಳಿ ಚಕ್ಕೆರೆ ಜವರೇಗೌಡರ ಊರು. ಈ ಹಳ್ಳಿ ಹತ್ತಿರದ ದಾರಿಯಿಂದ ತಾಲ್ಲೂಕಿನ ಮುಖ್ಯ ಸ್ಥಳಕ್ಕೆ ನಾಲ್ಕೂವರೆ ಮೈಲಿ ದೂರದಲ್ಲಿದೆ. ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿರುವ ಚಿಕ್ಕ ಊರು ಮತ್ತಿಕೆರೆ. ಅಲ್ಲಿಂದ ದಕ್ಷಿಣಕ್ಕೆ ಚಕ್ಕೆರೆ ಎರಡು ಮೈಲಿ. ದೊಡ್ಡ ರಸ್ತೆಯಿಂದ ಹಳ್ಳಿ ಸೇರಲು ಒಳ್ಳೆಯ ರಸ್ತೆಯಿಲ್ಲ. ಮಳೆಗಾಲದಲ್ಲಂತೂ ಅದು ಮಿಕ್ಕ ಪ್ರದೇಶಗಳಿಂದ ಪ್ರತ್ಯೇಕಗೊಳ್ಳುತ್ತದೆ. ಈ ವಿಷಯದಲ್ಲಿ ಇದು ಮಲೆನಾಡು ಪ್ರದೇಶದ ದುರ್ಗಮವಾದ ಹಳ್ಳಿಗಳ ನೆನಪು ತರುತ್ತದೆ. ಚಕ್ಕೆರೆಯಲ್ಲಿ ಮುಖ್ಯವಾಗಿ ವಾಸಿಸುವವರು ಒಕ್ಕಲಿಗರು ಮತ್ತು ಹರಿಜನರು. ಉಳಿದ ಜಾತಿಗಳವರ ಮನೆಗಳಿದ್ದರೆ ಹೆಸರಿಗೆ ಒಂದೋ ಎರಡೊ. ಹರಿಜನರು ನಿರ್ಗತಿಕರಾಗಿದ್ದು ಒಕ್ಕಲಿಗರ ಮನೆಯ ಜೀತದಿಂದ ಬದುಕು ಸವೆಸುತ್ತಿದ್ದರೆ, ಒಕ್ಕಲಿಗರಾದರೂ ಎಲ್ಲರೂ ಅನುಕೂಲವಂತರಾಗಿದ್ದರೆಂದು ಹೇಳುವ ಹಾಗಿಲ್ಲ. ಸಂಪತ್ತು ಕೇವಲ ಕೆಲವರಲ್ಲಿ ಸೇರಿಕೊಂಡಿದ್ದು ಉಳಿದವರೆಲ್ಲ ಬಡತನದ ಬವಣೆಯಲ್ಲಿ ಬೇಯುತ್ತಿದ್ದರು.

ಊರಿನ ಮುಖ್ಯರು ಗೌಡ ಪಟೇಲರು. ಅವರಿಗೂ ವಿದ್ಯೆಗೂ ಬಲುದೂರ. ಆದರೂ ಚಕ್ಕೆರೆಯಲ್ಲಿ ಅಂದಿನ ದಿನಗಳಲ್ಲಿಯೇ ಒಂದು ಪ್ರಾಥಮಿಕ ಶಾಲೆ, ಸುತ್ತಣ ಹಳ್ಳಿಗಳಲ್ಲಿ ಎಲ್ಲೂ ಇಲ್ಲದ ಒಂದು ಅಪೂರ್ಣ ಮಾಧ್ಯಮಿಕ ಶಾಲೆ

ಅಸ್ತಿತ್ವದಲ್ಲಿದ್ದವು. ಹರಿಜನರಿಗೆ ಈ ಶಾಲೆಗಳು ಅನಧಿಕೃತವಾಗಿ ಬಾಗಿಲು ತೆರೆಯುತ್ತಿರಲಿಲ್ಲ. ಶ್ರೀಮಂತರ ಮನೆಯ ಮಕ್ಕಳಿಗೆ ಅಕ್ಷರ ಕಲಿಯುವುದರಿಂದ ಉಪಯೋಗ ಕಾಣುತ್ತಿರಲಿಲ್ಲ. ಬಡವರಾದ ಕೆಲವರ ಮಕ್ಕಳು ಮಾತ್ರ ಹೇಗೋ ಈ ಶಾಲೆಗಳ ಪೂರ್ಣ ಪ್ರಯೋಜನ ಪಡೆದುಕೊಳ್ಳುತ್ತಿದ್ದರು. ಅವರು ಕಷ್ಟ ಪಟ್ಟು ವ್ಯಾಸಂಗಮಾಡಿ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸುಮಾಡಿ ಪ್ರಾಥಮಿಕ ಶಾಲೆಗಳಲ್ಲಿ ಉಪಾಧ್ಯಾಯರಾಗುತ್ತಿದ್ದರು. ನಾಲ್ಕು ಕಾಸು ಗಳಿಸಿ ಹಣವಂತರ ಸಾಲವನ್ನು ಹಿಂದಿರುಗಿಸಲು ಬಡ ತಂದೆತಾಯಿಗಳಿಗೆ ನೆರವಾಗು ತ್ತಿದ್ದರು. ಅಕ್ಷರಜ್ಞಾನ ಹೆಚ್ಚಿದಂತೆಲ್ಲ ಹಳ್ಳಿಗರ ಮೇಲೆ ಹಣವಂತರ ಹತೋಟಿ ನಿಧಾನವಾಗಿ ಜಾರಿಹೋಗುತ್ತಿತ್ತು. ಕಲಿತ ಮಕ್ಕಳ ತಂದೆತಾಯಿಯರಿಗೆ ಊರ ಪಟೇಲರು ಆಗಾಗ ಕರೆದು ಎಚ್ಚರಿಕೆ ನೀಡುತ್ತಿದ್ದರು; ನಾನಾ ಬಗೆಯ ಭಯಗಳನ್ನು ತೋರುತ್ತಿದ್ದರು; ಗದರುತ್ತಿದ್ದರು; ಶಾಲೆಗಳನ್ನೇ ಊರಿನಿಂದ ಸ್ಥಳಾಂತರಿಸಲೂ ಪ್ರಯತ್ನಿಸುತ್ತಿದ್ದರು.

ಇದು ಜವರೇಗೌಡರು ಶಾಲೆಗೆ ಸೇರಿದ ದಿನಗಳಲ್ಲಿ ಅವರ ಹಳ್ಳಿಯ ಪರಿಸ್ಥಿತಿ. ಇಂಥದರಲ್ಲಿ ಅವರ ತಂದೆಯವರಾದ ದೇವೇಗೌಡರಿಗೆ ತಮ್ಮ ಮಕ್ಕಳನ್ನು ಓದಿಸುವುದು ಖಂಡಿತವಾಗಿಯೂ ಸಾಧ್ಯವಿಲ್ಲದ ಮಾತಾಗಿತ್ತು. ಆದರೂ ಮಕ್ಕಳು ವಿದ್ಯಾವಂತರಾಗಬೇಕೆಂಬುದು ಅವರ ಮಹದಾಶೆ ಯಾಗಿತ್ತು. ಕೊನೆಗೆ ದೊಡ್ಡಮಗನೊಬ್ಬನಾದರೂ ಓದಿದರೆ ಸಾಕೆಂದು ಅವನನ್ನು ಶಾಲೆಗೆ ಸೇರಿಸಿದರು. ಆತ ಲೋಯರ್ ಸೆಕೆಂಡರಿ ಪರೀಕ್ಷೆಯನ್ನೂ ಮುಗಿಸಲಿಲ್ಲ.

ಜವರೇಗೌಡರು ಕಷ್ಟಪಟ್ಟು ಶಾಲೆಗೆ ಸೇರಿದರು. ಮುಂದೆ ಅವರು ತಮ್ಮ ಹಾದಿಯನ್ನು ಸೃಷ್ಟಿಸಿಕೊಂಡರು. ತರಗತಿಗಳಲ್ಲಿ ಯಾವಾಗಲೂ ಮೊದಲಿಗ ರಾಗಿರುತ್ತಿದ್ದರು. ಯಾವ ಆಟಗಳಿಗೂ ಹೋಗುತ್ತಿರಲಿಲ್ಲ. ಸ್ನೇಹಿತರನ್ನು ಬೆಳೆಸಿಕೊಳ್ಳುತ್ತಿರಲಿಲ್ಲ. ತಾವಾಯಿತು ತಮ್ಮ ಪಾಠವಾಯಿತು. ಬಿಡುವಿನ ವೇಳೆಯಲ್ಲಿ ಮನೆಯ ಕೆಲಸ ಹೊಲದ ಕೆಲಸ ಗುಡ್ಡದಷ್ಟಿರುತ್ತಿತ್ತು. ತಮ್ಮ ಹಳ್ಳಿಯ ಶಾಲೆಯನ್ನು ಮುಗಿಸಿ ಅವರು ಚನ್ನಪಟ್ಟಣದಲ್ಲಿ ಓದನ್ನು ಮುಂದುವರಿಸಿದರು. ಮಗ ಪ್ರೈಮರಿ ಶಾಲೆಯ 'ಮೇಷ್ಟ'ರಾಗಿ ನಾಲ್ಕು ಕಾಸು ಗಳಿಸಿದರೆ ಸಾಕೆಂದುಕೊಂಡಿದ್ದ ತಂದೆಯವರಿಗೆ ಊರಿನ ಕೆಲವು

ಹಿತೈಷಿಗಳು ಹುಡುಗ ಎಸ್.ಎಸ್.ಎಲ್.ಸಿ. ಮಾಡಿದರೆ ಶೇಕದಾರನಾಗ ಬಹುದೆಂದು ಆಸೆ ತೋರಿಸಿದರು.

ಸ್ವಭಾವತಃ ಸಂಕೋಚದವರಾದ ಬಾಲಕ ಜವರೇಗೌಡರು ಎಂದೂ ಮಹತ್ವಾಕಾಂಕ್ಷಿಗಳಾಗಿರಲಿಲ್ಲ. ವಿದ್ಯಾಭ್ಯಾಸವನ್ನು ಮುಂದುವರಿಸುವುದರಲ್ಲಿ ಅವರಿಗೆ ಯಾವುದೇ ಉದ್ದೇಶವಿರಲಿಲ್ಲ, ಗುರಿಯಿರಲಿಲ್ಲ. ಅದೊಂದು ಕೇವಲ ಯಾಂತ್ರಿಕ ಹವ್ಯಾಸವಾಗಿತ್ತು. ಯಾವುದಾದರೊಂದು ವಿಷಯದಲ್ಲಿ ಆಸಕ್ತಿ ಯನ್ನು ಹುಟ್ಟಿಸಿ ಪೋಷಿಸುವಂಥ ಅಧ್ಯಾಪಕರೂ ಅವರಿಗೆ ಆಗ ಸಿಕ್ಕಿರಲಿಲ್ಲ. ಪಂಡಿತರ ಪಾಠಕ್ರಮ ಶೋಚನೀಯವಾಗಿತ್ತು. ಆಧುನಿಕ ಕಾವ್ಯವನ್ನು ಅವರು ಹೇಳುತ್ತಿದ್ದ ರೀತಿಯಂತೂ ಜುಗುಪ್ಸೆ ಬರಿಸುವಂತಿತ್ತು.

ಚನ್ನಪಟ್ಟಣದಲ್ಲಿ ಎಸ್. ಎಸ್. ಎಲ್. ಸಿ. ಮುಗಿಸಿ ಬೆಂಗಳೂರಿಗೆ ಇಂಟರ್ಮೀಡಿಯೆಟ್ ಓದಲು ಹೋದಾಗ ಒಮ್ಮೆ ವಾಚನಾಲಯದಲ್ಲಿ ಕುವೆಂಪು (ಆಗಿನ್ನೂ ಕೆ. ವಿ. ಪುಟ್ಟಪ್ಪ) ಅವರನ್ನು ಕುರಿತ ಇಂಗ್ಲಿಷ್ ಲೇಖನವೊಂದು ಜವರೇಗೌಡರ ಕಣ್ಣಿಗೆ ಬಿತ್ತು. ಒಡನೆಯೇ ಅವರ ಮನಸ್ಸು ಕುವೆಂಪು ಸಾಹಿತ್ಯದತ್ತ ಹರಿಯಿತು. ಕವಿವರ್ಯರ ಕೃತಿಗಳನ್ನೆಲ್ಲ ಕೊಂಡು ಅಧ್ಯಯನ ಮಾಡತೊಡಗಿದರು. ಮೊದಲಬಾರಿಗೆ ಕುವೆಂಪು ಅವರ ಕೃತಿಗಳ ಮೂಲಕ ಕನ್ನಡ ಜವರೇಗೌಡರನ್ನು ತನ್ನೆಡೆಗೆ ಸೆಳೆಯಿತು. ಅವರು ನಿಧಾನ ವಾಗಿ ಹೊಸ ಲೋಕವೊಂದರತ್ತ ಹೆಜ್ಜೆ ಹಾಕತೊಡಗಿದರು.

ಬಿ.ಎ., ಆನರ್ಸ್ ತರಗತಿಗೆ ಸೇರುವಾಗ ಜವರೇಗೌಡರು ಇತಿಹಾಸ ವನ್ನು ಮುಖ್ಯ ವಿಷಯವನ್ನಾಗಿ ಆರಿಸಿಕೊಳ್ಳಲು ನಿರ್ಧರಿಸಿದ್ದರು. ಆದರೆ ವೆಂಕಣ್ಣಯ್ಯ, ಕುವೆಂಪು ಮೊದಲಾದವರ ಪಾಠ ಕೇಳುವ ಅವಕಾಶವಿದೆ ಯೆಂಬ, ಇತಿಹಾಸ ಇಲಾಖೆಯ ರಾಜಕೀಯ ಚೆನ್ನಾಗಿಲ್ಲವೆಂಬ ಕಾರಣ ಗಳಿಂದ ಅವರು ಕನ್ನಡ ವಿಭಾಗಕ್ಕೆ ಸೇರಿಕೊಂಡರು. ಆನರ್ಸ್ ತರಗತಿಗಳಲ್ಲಿ ನಿಜವಾದ ವಿದ್ಯಾಭ್ಯಾಸ ಪ್ರಾರಂಭವಾಯಿತು. ಇದುವರೆಗಿನ ಉದ್ದೇಶರಹಿತ ಶಿಕ್ಷಣಕ್ಕೆ ಹೊಸ ಜೀವಕಳೆಯೊಂದು ಕೂಡಿಕೊಂಡಿತು. ಕವಿ ವಿದ್ವಾಂಸರ ಉಪನ್ಯಾಸಗಳು ಸಾಹಿತ್ಯ ಲೋಕಕ್ಕೆ ಹೊಸ ಬಾಗಿಲುಗಳನ್ನು ತೆರೆದು ಕೊಟ್ಟವು. ಜವರೇಗೌಡರು ಆಗ ಶ್ರೀರಾಮಕೃಷ್ಣಾಶ್ರಮದವರ ವಿದ್ಯಾರ್ಥಿ ನಿಲಯದಲ್ಲಿ ವಾಸಮಾಡುತ್ತಿದ್ದರು. ಅವರ ಮಾತುಗಳಲ್ಲಿಯೇ ಹೇಳುವು

ದಾದರೆ "ಕುವೆಂಪುರವರ ಸಾನ್ನಿಧ್ಯ, ತೀನಂಶ್ರೀಯವರ ಸಲಿಗೆ ಮತ್ತು ಶ್ರೀರಾಮಕೃಷ್ಣಾಶ್ರಮದ ಸಂಪರ್ಕ" ಹಳ್ಳಿಯ ಹಿಂದುಳಿದ ಹುಡುಗನಲ್ಲಿ ಕೆಚ್ಚನ್ನೂ, ನೆಚ್ಚನ್ನೂ, ಆತ್ಮಪ್ರತ್ಯಯವನ್ನೂ ತುಂಬಿದವು.

೧೯೪೧ ರಲ್ಲಿ ಬಿ. ಎ., ಆನರ್ಸ್ ಪರೀಕ್ಷೆಯಲ್ಲಿ ತೇರ್ಗಡೆಯಾದಮೇಲೆ ನ್ಯಾಯಶಾಸ್ತ್ರ ಓದುವ ಹಂಬಲದಿಂದ ಜವರೇಗೌಡರು ದೂರದ ಕೊಲ್ಹಾಪುರಕ್ಕೆ ಹೋದರು. ಆದರೆ ಕೆಲವು ತಾಂತ್ರಿಕ ಕಾರಣಗಳಿಂದ ಅವರು ಅಲ್ಲಿ ಕಾಲೇಜಿಗೆ ಸೇರುವುದಾಗಲಿಲ್ಲ. ಮರಳಿ ಬಂದವರು ಒಂದು ವರ್ಷ ವಿದ್ಯಾ ಇಲಾಖೆಯಲ್ಲಿ ಗುಮಾಸ್ತರಾಗಿ ಮರುವರ್ಷ ಕನ್ನಡ ಎಂ. ಎ., ತರಗತಿಗೆ ಸೇರಿದರು. ಎಂ. ಎ., ಮುಗಿಸುವ ಹೊತ್ತಿಗೆ ಅವರಿಗೆ ವಿವಾಹವಾಗಿತ್ತು. ಎಂ. ಎ., ಆದಮೇಲೆ ಮುಂದೇನು ಎಂಬ ಪ್ರಶ್ನೆ ಬೃಹದಾಕಾರವಾಗಿ ನಿಂತಿತ್ತು. ಗುರುಗಳಾದ ಕೃಷ್ಣಶಾಸ್ತ್ರಿಗಳೇನೋ "ರೆವೆನ್ಯೂ ಇಲಾಖೆಯಲ್ಲಿ ಕೆಲಸಗಳಿಗೇನು ಬರಗಾಲ. ಹೋಗಿ ಸೇರಿಕೋ. ನಾಳೆ ಅಸಿಸ್ಟೆಂಟ್ ಕಮಿಷನರ್ ಆಗಬಹುದು." ಎಂದು ಹಿತವಾದ ಹೇಳಿದರು. ಇಷ್ಟವಿಲ್ಲ ದಿದ್ದರೂ, ಜವರೇಗೌಡರು ಅನಿವಾರ್ಯವಾಗಿ ಸೆಕ್ರೆಟರಿಯೆಟ್ಟಿನ ಮೆಟ್ಟಲು ಹತ್ತಬೇಕಾಗಿ ಬಂತು. ಆಗಲೇ ಕೆಲಕಾಲ ಅನುಭವಿಸಿದ್ದ ಗುಮಾಸ್ತಗಿರಿ ಯನ್ನೇ ಮತ್ತೆ ಅವರು ಹಿಡಿದುಕೊಳ್ಳಬೇಕಾಯಿತು. ಇದಕ್ಕಾಗಿ ಅವರು ಅನೇಕ ಇಲಾಖಾ ಪರೀಕ್ಷೆಗಳನ್ನೂ ಪಾಸು ಮಾಡಿದರು.

ಕುವೆಂಪು, ವೆಂಕಣ್ಣಯ್ಯನವರಂಥವರಲ್ಲಿ ಶಿಷ್ಯವೃತ್ತಿ ನಡೆಸಿದ ಕನ್ನಡ ಎಂ. ಎ. ಪದವೀಧರ, ರಾಮಕೃಷ್ಣಾಶ್ರಮದಲ್ಲಿ ವಾಸಿಸಿ ಅನೇಕ ಆದರ್ಶಗಳ ಕೋಟೆ ಕಟ್ಟಿಕೊಂಡಿದ್ದ ತರುಣ ಜವರೇಗೌಡರಿಗೆ ಗುಮಾಸ್ತವೃತ್ತಿ ಅಸಹನೀಯ ವಾಯಿತು; ನರಕ ಸದೃಶವಾಯಿತು. ಜೀವನದ ನಿಜವಾದ ಮೌಲ್ಯಗಳಿಗೆ ಬೆಲೆ ಇಲ್ಲವೆ ಎಂದು ಕೇಳುವ ಪರಿಸ್ಥಿತಿ ಯುಂಟಾಯಿತು. ವಿಶ್ವವಿದ್ಯಾ ನಿಲಯದ ತಮ್ಮ ಪ್ರಾಧ್ಯಾಪಕರಿಗೆ ಅವರು ಪದೇ ಪದೇ ಕಾಗದ ಬರೆದು ತಮಗೊಂದು ಅಧ್ಯಾಪಕವೃತ್ತಿಯನ್ನು ಕೊಡಿಸಬೇಕೆಂದು ಕೇಳಿಕೊಳ್ಳು ತ್ತಿದ್ದರು. ೧೯೪೬ ರಲ್ಲಿ ಅವರ ಬಯಕೆ ಈಡೇರಿತು. ಮೈಸೂರು ವಿಶ್ವವಿದ್ಯಾ ನಿಲಯದಲ್ಲಿ ಅವರು ಕನ್ನಡ ಉಪನ್ಯಾಸಕರಾಗಿ ನೇಮಕಗೊಂಡರು.

ವಿದ್ಯಾರ್ಥಿಯಾಗಿದ್ದಾಗ, ಗುಮಾಸ್ತರಾಗಿದ್ದಾಗ ಜವರೇಗೌಡರು ಕಥೆ

ಕವಿತೆಗಳನ್ನು ಬರೆಯುತ್ತಿದ್ದರು. ಕವಿತೆಗಳಲ್ಲಿ ಅವರು ಎಲ್ಲ ಆರಂಭದ ಪ್ರಯತ್ನಗಳಂತೆ ಆಕಾಶದಲ್ಲಿ ಮಿನುಗುವ ತಾರೆಗಳನ್ನೂ, ಭೂಮಿಯಲ್ಲಿ ನಡೆದಾಡುವ ತಾರೆಗಳನ್ನೂ ವರ್ಣಿಸಿದರು. ಅವರ ಆ ರಚನೆಗಳಲ್ಲಿ ಕುವೆಂಪುರವರ ಅನುಕರಣೆ ಹೇರಳವಾಗಿ ಕಾಣಿಸುತ್ತದೆ. ಅವರ ಕಥೆಗಳು ಸಾಮಾಜಿಕ ಅನ್ಯಾಯಗಳನ್ನೂ, ಅಸಮತೆಗಳನ್ನೂ, ಬಡತನದ ದಾರುಣತೆಯನ್ನು ಕುರಿತಿದ್ದು ಕಲೆಗಾರಿಕೆಯನ್ನೇನೂ ತೋರಿಸುವುದಿಲ್ಲ. ಜವರೇಗೌಡರು ಗ್ರಾಮಗಳ ಪುನರುದ್ಧಾರದ ಬಗೆಗೆ ಮೊದಲಿನಿಂದಲೂ ಆಸಕ್ತರು. ಸಾಮಾನ್ಯ ಜನತೆಯಲ್ಲಿ ಜ್ಞಾನಪ್ರಸಾರವಾಗುವುದೇ ರಾಷ್ಟ್ರದ ಅಭ್ಯುದಯಕ್ಕೆ ಕಾರಣವೆಂದು ಅವರ ದೃಢವಾದ ತಿಳಿವಳಿಕೆ. ತಮ್ಮ ಸ್ವಂತ ಹಳ್ಳಿಯ ಜನರನ್ನು ಜಡ ನಿದ್ರೆಯಿಂದ ಎಚ್ಚರಿಸಲು ಅವರು ರಜಾ ದಿನಗಳಲ್ಲಿ 'ಜ್ಞಾನೋದಯ ಸಂಘ' ವೊಂದನ್ನು ಕಟ್ಟಿದ್ದುಂಟು. ಇದಕ್ಕಾಗಿ ಊರಿನ ಶ್ರೀಮಂತರು ಅವರನ್ನು ಕೊಲೆ ಮಾಡಲು ಸಂಚು ಮಾಡಿದ್ದೂ ಉಂಟು. ಜವರೇಗೌಡರ ಆರಂಭದ ಬರವಣಿಗೆಗಳು ಸಮಾಜ ಜೀವನದ ಸುಧಾರಣೆಗೆ ಕೊಟ್ಟ ಕರೆಗಳಾಗಿವೆ; ನಾಡಿನ ಪುನರುತ್ಥಾನಕ್ಕೆ ನೀಡಿದ ರಚನಾತ್ಮಕ ಸಲಹೆಗಳಾಗಿವೆ; ಹೊಸ ಬಾಳಿನ ಆಗಮನಕ್ಕೆ ತವಕಿಸುತ್ತಿರುವ ಯುವ ಚೇತನದ ತುಡಿತಗಳಾಗಿವೆ.

ಬೆಂಗಳೂರಿನಲ್ಲಿ ತಮ್ಮ ಅಧ್ಯಾಪಕವೃತ್ತಿಯನ್ನು ಆರಂಭಿಸಿದ ಜವರೇಗೌಡರು ಒಂದೆರಡು ವರ್ಷಗಳಲ್ಲಿಯೇ ಮೈಸೂರಿಗೆ ವರ್ಗವಾಗಿ ಬಂದರು. ೧೯೫೫ ರಲ್ಲಿ ಕನ್ನಡ ಅಸಿಸ್ಟೆಂಟ್ ಪ್ರೊಫೆಸರ್ ಆದ ಅವರು ಒಂಬತ್ತು ವರ್ಷಗಳನಂತರ ೧೯೬೪ ರಲ್ಲಿ ಪ್ರಾಧ್ಯಾಪಕರೂ ಇಲಾಖೆಯ ಮುಖ್ಯರೂ ಆಗಿ ನೇಮಕವಾದರು. ಈಗ ಅವರು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದಾರೆ. ಈ ಮಧ್ಯೆ ಅವರು ವಿಶ್ವವಿದ್ಯಾನಿಲಯದ ಅನೇಕ ಹುದ್ದೆಗಳನ್ನು ವಹಿಸಿದ್ದಾರೆ; ಹಲವು ಕಾರ್ಯಭಾರಗಳನ್ನು ನಡೆಸಿದ್ದಾರೆ.

ವಿಶ್ವವಿದ್ಯಾನಿಲಯದ ಪ್ರಕಟಣ ಶಾಖೆಗೆ ಅವರೇ ಮೊದಲನೆಯ ಪೂರ್ಣಕಾಲದ ಕಾರ್ಯದರ್ಶಿಗಳಾಗಿದ್ದರು. ಕವಿಕಲ್ಪನೆಯ ವಿಶ್ವವಿದ್ಯಾನಿಲಯದ ಮೂರು ಅಂಗಗಳಲ್ಲಿ ಒಂದಾದ ಪ್ರಸಾರಾಂಗದ ರೂಪರೇಷೆಗಳನ್ನು ಅವರು ತಮ್ಮ ಅಧಿಕಾರಾವಧಿಯಲ್ಲಿ ಯೋಜಿಸಿದರು. ಅವರಿಗೆ ವಿಶ್ವವಿದ್ಯಾನಿಲಯವೇ

ಒಂದು ಮುದ್ರಣಾಲಯುವನ್ನು ಹೊಂದಿರುವ ಆವಶ್ಯಕತೆ ಆಗ ತೋರಿತು. ಆ ದಿಕ್ಕಿನಲ್ಲಿ ಕಾರ್ಯಪ್ರವರ್ತರಾದರು. ವಿಶ್ವವಿದ್ಯಾನಿಲಯುದ ಮುದ್ರಣಾಲಯು ಆರಂಭವಾಯಿತು. ಜವರೇಗೌಡರೆ ಅದರ ಮೊದಲನೆಯು ಮೇಲ್ವಿಚಾರಕ ರಾದರು. ಸ್ವಂತ ಮುದ್ರಣಾಲಯುಗಳನ್ನು ಹೊಂದಿದ ಭಾರತದ ಕೆಲವೇ ವಿಶ್ವವಿದ್ಯಾನಿಲಯುಗಳಲ್ಲಿ, ಮೈಸೂರು ಒಂದಾಗಿದೆ. ಅಂದಿನ ದಿನಗಳಲ್ಲಿ ಇದು ಎರಡನೆಯುದೊ, ಮೂರನೆಯದೊ ಆಗಿತ್ತು. ಈಗ ಬೃಹದಾಕಾರವಾಗಿ ಬೆಳೆದಿರುವ ಈ ಮುದ್ರಣಾಲಯ ಜವರೇಗೌಡರ ದೂರ ದೃಷ್ಟಿಯು ಫಲ.

ವಿಶ್ವವಿದ್ಯಾನಿಲಯುದಲ್ಲಿ ಪರೀಕ್ಷಾ ವಿಭಾಗ ಹೊಸದಾಗಿ ರೂಪುಗೊಂಡಾಗ ಜವರೇಗೌಡರು ಮೊದಲನೆಯು ಪರೀಕ್ಷಾಧಿಕಾರಿಯಾಗಿ ನೇಮಕಗೊಂಡರು. ಆ ವಿಭಾಗದಲ್ಲಿ ಹಲವಾರು ಶ್ರೇಷ್ಠ ಸಂಪ್ರದಾಯುಗಳನ್ನು ಬಳಕೆಗೆ ತಂದರು. ಅಧಿಕಾರ ಕೇವಲ ಕೆಂಪು ಪಟ್ಟಿ, ಡವಾಲಿ ಬಿಲ್ಲೆಗಳಲ್ಲಿ ಅಡಗಿಲ್ಲದೆ ಮಾನವೀಯತೆ, ಅಂತಃಕರಣಗಳಲ್ಲಿಯೂ ಇರಬಲ್ಲುದೆಂಬುದನ್ನು ಅವರು ತಮ್ಮ ಅಧಿಕಾರಾವಧಿಯಲ್ಲಿ ತೋರಿಸಿಕೊಟ್ಟರು. ಕೆಲವು ಕಾಲ ಅವರು ಶಿವಮೊಗ್ಗೆಯ ಸಹ್ಯಾದ್ರಿಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಮಾನಸ ಗಂಗೋತ್ರಿಯ ವಿದ್ಯಾರ್ಥಿನಿಲಯುದ ಆರಂಭದ ವಾರ್ಡನ್ ಕೂಡ ಅವರೇ ಆಗಿದ್ದರೆಂಬುದು ಅನೇಕರಿಗೆ ಗೊತ್ತಿಲ್ಲದ ವಿಚಾರ. ಯಾವುದೆ ಕೆಲಸವನ್ನು ಎತ್ತಿಕೊಂಡರೂ ಅದನ್ನು ಆಸಕ್ತಿಯಿಟ್ಟು ನಡೆಸಿಕೊಡುವುದು ಜವರೇಗೌಡರ ಕಾರ್ಯಭಾರದ ಲಕ್ಷಣ. ಜೊತೆಗಾರರಲ್ಲಿ ನಂಬಿಕೆ, ಕೆಳಗಿನ ಕೆಲಸಗಾರರೊಡನೆ ಸೌಜನ್ಯ, ಮೇಲಿನವರೊಡನೆ ಜಾಣೆನ ಸಂಬಂಧ—ಜವರೇಗೌಡರ ಕೆಲಸಗಳ ಯಶಸ್ಸಿನ ಗುಟ್ಟು. ಅವರು ಕೆಲಸ ಮಾಡಲೂ ಬಲ್ಲರು ; ಮಾಡಿಸಲೂ ಬಲ್ಲರು. ಸ್ನೇಹದ ನಗುವಿನಲ್ಲೇ ಕಾಠಿಣ್ಯವನ್ನು, ದರ್ಪವನ್ನು ಅವರು ತೋರಬಲ್ಲರು.

ತಮ್ಮ ಗುರುಗಳಾದ ಕುವೆಂಪು ಅವರಿಂದ ಕನ್ನಡದ ದೀಕ್ಷೆ ಪಡೆದ ಜವರೇಗೌಡರು ಇಂದು ವಿಶ್ವವಿದ್ಯಾನಿಲಯುದಲ್ಲಿ ಕನ್ನಡ ಬಾವುಟವನ್ನು ಅತಿ ಎತ್ತರವಾಗಿ ಹಾರಿಸಿದ್ದಾರೆ. ಈ ಸಾಧನೆಗೆ ಅವರು ಪಟ್ಟಿರುವ ಕಷ್ಟ ಅಲ್ಪಸ್ವಲ್ಪವಲ್ಲ. ಕುವೆಂಪು ಅವರು ಉಪಕುಲಪತಿಗಳಾಗಿ ನಿವೃತ್ತರಾದಮೇಲೆ, ತೀನಂಶ್ರೀ ಅವರು ಪ್ರಾಧ್ಯಾಪಕರಾಗಿ ನಿವೃತ್ತರಾದ ಮೇಲೆ ಜವರೇಗೌಡರು ಹಲವು ಅಗ್ನಿಪರೀಕ್ಷೆಗಳಿಗೆ ಎದುರಾಗಬೇಕಾಯಿತು. ಕನ್ನಡದ ದ್ರೋಹಿಗಳು,

ಕುವೆಂಪು ದ್ವೇಷಿಗಳು, ಜವರೇಗೌಡರಿಂದಲೇ ನೆರವು ಪಡೆದು ಮೇಲೆ ಬಂದೂ ಜವರೇಗೌಡರನ್ನು ಸಹಿಸದ ಕೃತಘ್ನರು—ಎಲ್ಲರೂ ಒಂದಾಗಿ ಕತ್ತಿ ಮಸೆದರು. ಕನ್ನಡದ ಸ್ಥಾನವನ್ನು ಕೆಳಗಿಳಿಸಲೂ, ಜವರೇಗೌಡರಿಗೆ ವೈಯಕ್ತಿಕ ತೊಂದರೆ ಕೊಡಲೂ ಅನೇಕರು ಮುಂದಾದರು.

ಕನ್ನಡ ಅಧ್ಯಯನ ಮಂಡಳದಲ್ಲಿ ಕನ್ನಡ ಪಾಠಗಳ ಗಂಟೆಯನ್ನು ಕಡಿಮೆ ಮಾಡುವಂತೆ ನಿರ್ಣಯ ಕೈಗೊಳ್ಳಬೇಕೆಂದು ಸ್ವಯಂ ಉಪಕುಲಪತಿಗಳೇ ಜವರೇಗೌಡರಿಗೆ ಹೇಳಿಕಳಿಸಿದರು. ರಾಜ್ಯದ ಬೇರೆಬೇರೆ ವಿಶ್ವವಿದ್ಯಾನಿಲಯಗಳ ಪಠ್ಯಕ್ರಮವನ್ನು ಒಂದು ಮಾದರಿಗೆ ತರುವ ನೆಪದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕಿರುವ ಮಹತ್ವದ ಸ್ಥಾನವನ್ನು ಕುಸಿಗೊಳಿಸಲು ನಾನಾ ಶಕ್ತಿಗಳು ಪ್ರಯತ್ನಿಸಿದವು. ಜವರೇಗೌಡರು ಏಕೈಕವೀರರಾಗಿ ಹೋರಾಡಿದರು. "ರಾಜಿನಾಮೆಯನ್ನು ಕೊಟ್ಟು ಹೊರಗೆ ಹೋಗುತ್ತೇನೆ. ಆದರೆ, ಕನ್ನಡವನ್ನು ಕೀಳುಗೊಳಿಸುವ ಯಾವ ಕೆಲಸವನ್ನೂ ಮಾಡಲಾರೆ" ಎಂದು ಅವರು ಉಪಕುಲಪತಿಗಳಿಗೇ ಹೇಳಿಬಿಟ್ಟರು. ಗುರೂಪದೇಶದಂತೆ ಕನ್ನಡಕ್ಕಾಗಿ ಜವರೇಗೌಡರು ಎತ್ತಿದ ಕಿರುಬೆರಳು ಗೋವರ್ಧನ ಗಿರಿಧಾರಿಯಾಯಿತು. ಅಂತಿಮ ಜಯ ಅವರದೇ ಆಯಿತು!

ಬರೀ ಕನ್ನಡದ ಕೆಲಸಗಳಲ್ಲದೆ ವಿಶ್ವವಿದ್ಯಾನಿಲಯದ ಸಮಗ್ರ ಪ್ರಗತಿಯಲ್ಲಿಯೂ ಜವರೇಗೌಡರು ಆಸಕ್ತರು. ಸಂಗೀತ ನೃತ್ಯ ಕಾಲೇಜಿನ ಆರಂಭ, ಅದರ ಪಾಠಕ್ರಮಗಳ ಸಿದ್ಧತೆ, ದಕ್ಷಿಣ ಭಾರತೀಯ ಅಧ್ಯಯನ, ಭಾಷಾ ವಿಜ್ಞಾನ, ಭಾಷಾಂತರ ತರಗತಿಗಳು—ಎಲ್ಲದರಲ್ಲೂ ಅವರು ಮುಂದು. ವಿಶ್ವವಿದ್ಯಾನಿಲಯದಲ್ಲಿ ಹೊಸ ಹೊಸ ಅಧ್ಯಯನ ವಿಷಯಗಳ ವ್ಯವಸ್ಥೆಯಾಗಬೇಕೆಂಬುದು ಅವರ ಅಭಿಮತ. ಕನ್ನಡ ಎಂ. ಎ. ಪಠ್ಯಕ್ರಮದಲ್ಲಿ ಜಾನಪದವನ್ನು ಕುರಿತ ಎರಡು ಪ್ರಶ್ನಪತ್ರಿಕೆಗಳು ಸೇರಲು ಅವರ ಅಮಿತ ಉತ್ಸಾಹವೇ ಕಾರಣ. ಫಲವಾಗಿ ಜಾನಪದಕ್ಕೆ ಜಾಗ ಕೊಟ್ಟ ದಕ್ಷಿಣ ಭಾರತದ ವಿಶ್ವವಿದ್ಯಾನಿಲಯಗಳಲ್ಲಿ ಮೈಸೂರೇ ಮೊದಲನೆಯದಾಯಿತು. ಮೂರು ವರ್ಷ ಕಲಾವಿಭಾಗದ ಡೀನರಾಗಿ ಸೇವೆ ಸಲ್ಲಿಸಿದ ಅವರು ಇದೀಗ ಸಿಂಡಿಕೇಟ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸದಲ್ಲಿ ಕನ್ನಡ ಪ್ರಾಧ್ಯಾಪಕರೊಬ್ಬರು ಸಿಂಡಿಕೇಟ್

ಸಭೆಗೆ ಸ್ಪರ್ಧಿಸಿ ಆಯ್ಕೆಯಾಗಿರುವುದು ಇದೇ ಮೊದಲನೆಯ ಸಲ. ಇದು ಅವರ ಕಾರ್ಯಕ್ಷೇತ್ರದ ವಿಸ್ತಾರವನ್ನೂ ಅಧ್ಯಾಪಕವರ್ಗದಲ್ಲಿನ ಜನಪ್ರಿಯತೆಯನ್ನೂ ಸೂಚಿಸುತ್ತದೆ.

ಸರ್ದಾರ್ ಪಣಿಕ್ಕರ್ ಅವರು ಉಪಕುಲಪತಿಗಳಾಗಿದ್ದಾಗ ಕನ್ನಡ ಅಧ್ಯಯನ ಸಂಸ್ಥೆಯೊಂದನ್ನು ಸ್ಥಾಪಿಸುವ ಯೋಜನೆ ಹಾಕಿದ್ದರು. ವಿಶ್ವವಿದ್ಯಾನಿಲಯದ ಕನ್ನಡ ಚಟುವಟಿಕೆಗಳನ್ನೆಲ್ಲ ಕೇಂದ್ರೀಕರಿಸಿ ಆ ಮೂಲಕ ಕನ್ನಡ ಭಾಷೆ ಸಾಹಿತ್ಯಗಳ ಅಧ್ಯಯನತಲಕಾವೇರಿಯನ್ನು ನಿರ್ಮಿಸುವ ಯೋಜನೆ ಅದು. ಡಾ. ಶ್ರೀಮಾಲಿಯವರು ಉಪಕುಲಪತಿಗಳಾಗಿ ಬಂದ ಮೇಲೆ ಜವರೇಗೌಡರು ಈ ಯೋಜನೆಗೆ ಅವರ ಮನವೊಪ್ಪಿಸಿದರು. ಫಲವಾಗಿ ಕನ್ನಡ ಅಧ್ಯಯನ ಸಂಸ್ಥೆ ೧೯೬೬ ರ ಕೊನೆಯ ಭಾಗದಲ್ಲಿ ಅಸ್ತಿತ್ವಕ್ಕೆ ಬಂತು. ಜವರೇಗೌಡರು ಅದರ ಮೊದಲ ಡೈರೆಕ್ಟರಾಗಿ ನೇಮಕಗೊಂಡರು. ಈಗ ಸುಮಾರು ಏಳೂವರೆ ಲಕ್ಷ ರೂಪಾಯಿಗಳ ಅಂದಾಜಿನಲ್ಲಿ ಅಧ್ಯಯನ ಸಂಸ್ಥೆಗೆ ಸ್ವಂತ ಕಟ್ಟಡದ ನಿರ್ಮಾಣವಾಗುತ್ತಿದ್ದು ಐದಾರು ತಿಂಗಳ ಅವಧಿಯಲ್ಲಿ ಮುಗಿಯುವ ಹಂತದಲ್ಲಿದೆ. ಕಂಟ್ರಾಕ್ಟರ್ ಅಥವಾ ಎಂಜನಿಯರ್‌ಗಿಂತ ಹೆಚ್ಚಾಗಿ ಜವರೇಗೌಡರು ಆ ಕಟ್ಟಡದ ಉಸ್ತುವಾರಿ ನಡೆಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಗೆ ಬರುವ ಯಾರಿಗೇ ಆದರೂ ಅವರು ಹೊಸ ಕಟ್ಟಡದ ಪ್ರದಕ್ಷಿಣೆ ಹಾಕಿಸದೆ ತಮ್ಮ ಯೋಜನೆಗಳ ನೀಲನಕಾಶೆಯನ್ನು ವಿವರಿಸದೆ ಬಿಡುವುದಿಲ್ಲ.

ಐದು ವರ್ಷಗಳ ಕೆಳಗೆ ಐದಾರು ಜನ ಅಧ್ಯಾಪಕರಿದ್ದ ಕನ್ನಡ ಇಲಾಖೆ ಇವತ್ತು ಅರುವತ್ತು ಎಪ್ಪತ್ತು ಜನರ ದೊಡ್ಡ ಸಂಸ್ಥೆಯಾಗಿ ಬೆಳೆದಿದೆ. ಸ್ನಾತಕೋತ್ತರ ತರಗತಿಗಳು, ಕನ್ನಡೇತರರಿಗೆ ತರಗತಿಗಳು, ಭಾಷಾಂತರ ತರಗತಿಗಳು, ಪಠ್ಯಪುಸ್ತಕ ನಿರ್ಮಾಣ, ಅಚ್ಚಾದ ಕನ್ನಡ ಗ್ರಂಥಗಳ ಸೂಚಿಸಿದ್ಧತೆ, ಹರಿದಾಸಸಾಹಿತ್ಯ ಸಂಪಾದನಾ ವಿಭಾಗ, ಪ್ರಾಚೀನ ಗ್ರಂಥ ಸಂಪಾದನಾವಿಭಾಗ, ಜಾನಪದವಿಭಾಗ, ಭಾಷಾವಿಜ್ಞಾನದ ವಿಭಾಗ, ಸಾಂಸ್ಕೃತಿಕ ಚರಿತ್ರೆಯ ವಿಭಾಗ—ಹೀಗೆ ಹಲವು ಇಲ್ಲಿ ಸಮ್ಮಿಳಿತವಾಗಿವೆ. ಮೈಸೂರು ಸರ್ಕಾರ ವಿಶ್ವವಿದ್ಯಾನಿಲಯಕ್ಕೆ ಈಚೆಗೆ ವಹಿಸಿಕೊಟ್ಟ ಕನ್ನಡ ವಿಶ್ವಕೋಶದ ಕೆಲಸವಾದರೂ ಈಗ ಕನ್ನಡ ಅಧ್ಯಯನ ಸಂಸ್ಥೆಯದೇ ಆಗಿದೆ.

ಸಮಕಾಲೀನ ಕನ್ನಡ ಲೇಖಕರ ಹಸ್ತಪ್ರತಿಗಳು, ಅವರ ಧ್ವನಿ, ಕಣ್ಮರೆಯಾದ ಲೇಖಕರು ಬಳಸುತ್ತಿದ್ದ ವಿವಿಧ ವಸ್ತುಗಳು—ಹೀಗೆ ಖಾಯಂ ಆದ ಅನೇಕ ವಸ್ತುಪ್ರದರ್ಶನಗಳನ್ನು ಅಧ್ಯಯನ ಸಂಸ್ಥೆಯಲ್ಲಿ ಏರ್ಪಡಿಸಬೇಕೆಂಬುದು ಜವರೇಗೌಡರ ಯೋಜನೆ. ಅವರ ಯೋಜನೆಗಳೆಲ್ಲ ಪೂರ್ಣಗೊಂಡಾಗ ಭಾರತೀಯ ಭಾಷೆಗಳಲ್ಲೇ ಇನ್ನೊಂದಕ್ಕೆ ಇಂಥ ಸಂಸ್ಥೆ ಇರುವುದಿಲ್ಲ. ಜ್ಞಾನೋಪಾಸನೆಗೆ ಮೀಸಲಾದ ಕನ್ನಡ ಅಧ್ಯಯನಸಂಸ್ಥೆ ಅಪರೂಪದ ಒಂದು ಸಾಹಿತ್ಯಿಕ ಸಾಂಸ್ಕೃತಿಕ ಕೇಂದ್ರ. ಅದರ ಯೋಜನೆ, ನಿರ್ವಹಣೆ ಎಲ್ಲವೂ ಜವರೇಗೌಡರ ಸಾಹಸದ ಕಥೆ.

ಬಹುದೊಡ್ಡ ಪ್ರಮಾಣದಲ್ಲಿ ಕನ್ನಡದ ಕಾರ್ಯಭಾರವನ್ನು ಹೊತ್ತಿರುವ ಜವರೇಗೌಡರು ನಮ್ಮ ಪ್ರಸಿದ್ಧ ಲೇಖಕರಲ್ಲಿ ಒಬ್ಬರಾಗಿದ್ದಾರೆ. ಸುಮಾರು ನಲವತ್ತೈದು ಪುಸ್ತಕಗಳನ್ನು ಪ್ರಕಟಿಸಿರುವ ಅವರ ಸಾಹಿತ್ಯದ ಮೊತ್ತ ಎಂಟು ಸಾವಿರ ಪುಟಗಳನ್ನೂ ಮೀರುತ್ತದೆ. ಅದೆಲ್ಲ ವಿಚಾರ ಸಾಹಿತ್ಯ, ವಿಮರ್ಶೆ, ಸಂಶೋಧನೆ. ಕೃಷ್ಣಾಹತೀಸಿಂಗರ 'ನೆನಪು ಕಹಿಯಲ್ಲ', ಜೇನ್ ಆಸ್ಟಿನ್ನಳ 'ಹಮ್ಮು ಬಿಮ್ಮು', ಬಿನಿಯನ್ನನ 'ಅಕ್ಬರ್', ಮತ್ತು ಟಾಲ್ ಸ್ಟಾಯರ 'ಪುನರುತ್ಥಾನ' ಎಂಬ ನಾಲ್ಕು ಗ್ರಂಥಗಳನ್ನು ಅವರು ಉತ್ತಮವಾಗಿ ಅನುವಾದಿಸಿದ್ದಾರೆ. ಅನುವಾದ ಸಾಹಿತ್ಯದಿಂದಲೂ ಒಂದು ಭಾಷೆಗೆ ಶಕ್ತಿ ತೇಜಸ್ಸುಗಳು ಕೂಡುತ್ತವೆಂದು ನಂಬಿರುವ ಅವರು ಅದಕ್ಕಾಗಿ ಶ್ರಮಿಸುತ್ತಿದ್ದಾರೆ. ಅವರ ಅನುವಾದಗಳು ಅತ್ಯುತ್ತಮ ಅನುವಾದಗಳಿಗೆ ಮಾದರಿಯಾಗಿವೆ. 'ಪುನರುತ್ಥಾನ'ಕ್ಕೆ 'ಸೋವಿಯೆತ್ ದೇಶ'ದ ಪ್ರಶಸ್ತಿ ಲಭ್ಯವಾಗಿದೆ.

ಅನೇಕ ಪ್ರಾಚೀನ ಕನ್ನಡ ಕಾವ್ಯಗಳನ್ನು ಒಪ್ಪವಾಗಿ ಸಂಪಾದಿಸಿ ಪ್ರಕಟಿಸಿರುವ ಕೀರ್ತಿ ಜವರೇಗೌಡರದು. ಕವಿಕಾವ್ಯಗಳನ್ನು ಕುರಿತು ಅವರು ಬರೆದಿರುವ ಉಪೋದ್ಘಾತಗಳು ಆಳವಾದ ವಿದ್ವತ್ತಿಗೂ, ಸೂಕ್ಷ್ಮವಾದ ವಿವೇಚನೆಗೂ ಸಾಕ್ಷಿಯಾಗಿವೆ. 'ನಂಜುಂಡಕವಿ' ಎಂಬ ಅವರ ಗ್ರಂಥ ನಮ್ಮ ಕವಿಗಳನ್ನು ಅಧ್ಯಯನ ಮಾಡುವ ಬಗೆಗೆ ಮಾದರಿಯಾಗಿದೆ. ನಂಜುಂಡನಿಗಿಂತಲೂ ಪ್ರಸಿದ್ಧರಾದ ಎಷ್ಟೋ ಜನ ಕವಿಗಳು ನಮ್ಮಲ್ಲಿದ್ದಾರೆ. ಆದರೆ ಅವರಾರನ್ನು ಕುರಿತೂ ಇಷ್ಟು ಸಮಗ್ರವಾದ ಒಂದು ಪುಸ್ತಕ ಪ್ರಕಟ

ವಾಗಿಲ್ಲ. ಜವರೇಗೌಡರಂಥ ವಿಮರ್ಶಕರನ್ನು ಆಕರ್ಷಿಸಿದ ನಂಜುಂಡ ನಿಜಕ್ಕೂ ಭಾಗ್ಯವಂತ!

'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಗದ್ಯಾನುವಾದ, ವಿದ್ಯಾಪೀಠಗಳನ್ನು ಕುರಿತ ಪರಿಚಯ, ಐತಿಹಾಸಿಕ ವ್ಯಕ್ತಿಗಳಾದ ಕೆಂಪೇಗೌಡ-ಕುಮಾರರಾಮರನ್ನು ಕಲ್ಪನೆ ಬೆರಸಿ ಚಿತ್ರಿಸಿದ ಕಥಾನಕಗಳು, ಮೋತಿಲಾಲ್ ನೆಹರೂರವರ ಜೀವನ ಚರಿತ್ರೆ, ಆಧುನಿಕ ಕನ್ನಡ ಲೇಖಕರು ಕೆಲವರನ್ನು ಕುರಿತ ವ್ಯಕ್ತಿಚಿತ್ರಗಳು, ವಿಮರ್ಶಾತ್ಮಕ ಪ್ರಬಂಧಗಳು—ಜವರೇಗೌಡರ ಇನ್ನೂ ಕೆಲವು ಪುಸ್ತಕಗಳು. ಹೊಸದಾಗಿ ಓದು ಕಲಿತ ವಯಸ್ಕರಿಗಾಗಿಯೂ, ಎಳೆಯ ಮಕ್ಕಳಿಗಾಗಿಯೂ, ಅವರು ಅನೇಕ ಮಹಾಪುರುಷರ ಜೀವನ ಕಥೆಗಳನ್ನೂ ಬರೆದಿದ್ದಾರೆ. ಅವರ ಸಂಶೋಧನೆಯ ಲೇಖನಗಳ ಹರವು ವಿಸ್ತಾರವಾಗಿದ್ದು ಅವು ಸಾಹಿತ್ಯಮಾತ್ರವಲ್ಲದೆ ಭಾಷಾಶಾಸ್ತ್ರ, ಜಾನಪದ, ಇತಿಹಾಸ ಹೀಗೆ ನಾನಾ ವಿಷಯಗಳನ್ನು ಕುರಿತವಾಗಿವೆ.

ಜವರೇಗೌಡರು ಹೊಸಗನ್ನಡದ ಗದ್ಯಲೇಖಕರಲ್ಲಿ ಗಣನೀಯ ಸ್ಥಾನ ಪಡೆದಿದ್ದಾರೆ. ಅವರಷ್ಟು ಬಿಗುವಿನ ಆದರೆ ಅಕ್ಲಿಷ್ಟವಾದ, ನೇರವಾದ ಆದರೆ ಕಸುವಿನ, ಸುಂದರವಾದ ಆದರೆ ಸಪ್ಪೆಯಲ್ಲದ ಗದ್ಯವನ್ನು ಬರೆಯುವವರು ಯಾವ ಭಾಷೆಯಲ್ಲಾದರೂ ಹೆಚ್ಚು ಜನರಿಲ್ಲ. ಹಳ್ಳಿ ಜನರಲ್ಲಿ ಮಾತ್ರ ಚಲಾವಣೆಯಲ್ಲಿದ್ದು ಕಾಲ ಕಳೆದಂತೆ ಸವೆದುಹೋಗುವ ಎಷ್ಟೋ ಪದಗಳನ್ನು ಅವರು ಉಳಿಸಿಕೊಟ್ಟಿದ್ದಾರೆ. ಅವರು ಬಳಸುವ ಅನೇಕ ಪದಗಳು ಯಾವ ಅರ್ಥಕೋಶದಲ್ಲೂ ಸಿಕ್ಕುವುದಿಲ್ಲ. ಪಟ್ಟಣದವರ ಮಾತಿನಲ್ಲಿದ್ದೂ ಸಾಹಿತ್ಯಕ್ಕೆ ಬರಲು ಅಂಜುತ್ತ ನಿಂತ ಕೆಲವು ಪದಗಳನ್ನೂ ಅವರೂ ಕೈಹಿಡಿದು ನಡೆಸಿದ್ದಾರೆ. ಹೊಸಹೊಸ ಪದಗಳನ್ನು ಸೃಷ್ಟಿಸಲು, ಇರುವ ಪದಗಳಿಗೆ ರೂಪ-ಅರ್ಥಗಳ ದೃಷ್ಟಿಯಿಂದ ಹೊಸ ತಿರುವನ್ನು ಕೊಡಲು ಅವರು ಎಂದೂ ಹಿಂಜರಿದವರಲ್ಲ. ಭಾಷೆಯ ಜಾಯಮಾನವನ್ನು ಚೆನ್ನಾಗಿಬಲ್ಲ ಅವರು ಇಂಥ ಪ್ರಯೋಗಗಳ ಸಾರ್ಥಕತೆಯನ್ನೂ ಬಲ್ಲರು!

ವಿದ್ವಾಂಸರಾದ ಜವರೇಗೌಡರು ವಿಮರ್ಶಕರೂ ಹೌದು. ಕವಿಯ ಕಾಲ ಚರ್ಚೆಯ ಗವಿಯಲ್ಲಿ ಧೈರ್ಯದಿಂದ ನುಗ್ಗುವ ಅವರು, ಕಾವ್ಯಸೌಂದರ್ಯದ ಉದ್ಯಾನದಲ್ಲಿ ಅವಸರವಿಲ್ಲದೆ ವಿಹರಿಸಬಲ್ಲರು. ಅವರ ಬರವಣಿಗೆಯಲ್ಲಿ

ವಿಮರ್ಶೆ-ವಿಶ್ಲೇಷಣೆಗಳು ಕೈ ಕೈ ಹಿಡಿದು ನಡೆಯುತ್ತವೆ. ತಮಗೆ ಇಷ್ಟ ವಾದುದನ್ನು ಮೆಚ್ಚುವಲ್ಲಿ ಅವರದು ಒಂದು ಹಿಡಿ ಧಾರಾಳ. ಫಲವಾಗಿ ಪ್ರಶಂಸೆ ಹೆಚ್ಚಾಗುತ್ತದೆ; ಒಮ್ಮೊಮ್ಮೆ ಅದು ಅತಿರೇಕಕ್ಕೂ ಹೋಗುವು ದುಂಟು. ಆದರೆ ಅವರು ದೋಷಗಳನ್ನೆಂದೂ ಮುಚ್ಚಿಡಲು ಪ್ರಯತ್ನಿಸು ವವರಲ್ಲ.

ಕನ್ನಡದ ಶ್ರದ್ಧಾವಂತ ಕೆಲಸಗಾರರಲ್ಲಿ ಜವರೇಗೌಡರು ಅದ್ವಿತೀಯರಾಗಿ ದ್ದಾರೆ. ಕನ್ನಡಕ್ಕಾಗಿ ಅವರು ತನುಮನಧನಗಳನ್ನು ಮೀಸಲಿರಿಸಿದ್ದಾರೆ ಕನ್ನಡ ನಾಡಿನ ಉದ್ಧಾರ, ಕನ್ನಡ ಭಾಷೆಯ ಪ್ರಗತಿ, ಕನ್ನಡ ಸಾಹಿತ್ಯದ ಸಮೃದ್ಧಿ—ಇವೇ ಅವರ ದುಡಿಮೆಯ ಧ್ಯೇಯೋದ್ದೇಶಗಳು. ಇವುಗಳಾದರೆ ಲೋಕಕಲ್ಯಾಣಕ್ಕೆ ನಮ್ಮ ಸೇವೆ ತನ್ನಷ್ಟಕ್ಕೇ ಸಲ್ಲುತ್ತದೆ ಎಂಬುದು ಅವರ ದೃಢವಾದ ನಂಬಿಕೆ. ತನ್ನ ಮನೆಯನ್ನೇ ಚೆನ್ನಾಗಿ ಇಟ್ಟುಕೊಳ್ಳಲಾರದವನಿಂದ ಪ್ರಪಂಚಕ್ಕೆ ಏನೂ ಸಲ್ಲುವುದಿಲ್ಲವಲ್ಲ! ಜವರೇಗೌಡರು ನಿಷ್ಠಾವಂತ ಕನ್ನಡಿಗರು; ಆದ್ದರಿಂದಲೇ ಅವರು ನಿಷ್ಠಾವಂತ ಭಾರತೀಯರು. ಮಾತ್ರವಲ್ಲ, ಇದೇ ಕಾರಣದಿಂದ ಅವರು ನಿಷ್ಠಾವಂತ ವಿಶ್ವಪ್ರಜೆ ಕೂಡ. ನಮ್ಮ ನಾಡಿನ ದುರ್ದೈವವೆಂದರೆ, ಇಂದು ಬಹುಜನ ಆರಂಭದಿಂದಲೇ ವಿಶ್ವಪ್ರಜೆಯೋ, ಭಾರತೀಯನೋ ಆಗಲು ಪ್ರಯತ್ನಿಸುತ್ತಾರೆ. ಫಲವಾಗಿ ಅವರು ಏನೂ ಆಗುವುದಿಲ್ಲ! ಮಾಹೇಶ್ವರ ಸ್ಥಲದ ಏಕದೇವೋಪಾಸಕರ ಅಚಲನಿಷ್ಠೆಯನ್ನು ನೆನಪಿಗೆ ತರುವ ಜವರೇಗೌಡರು ತಮ್ಮ ಕನ್ನಡ ಕಾಯಕದಿಂದಾಗಿ ಕನ್ನಡ ತನಕ್ಕೆ ಮತ್ತೊಂದು ಹೆಸರಾಗಿದ್ದಾರೆ.

೧೯೧೮ ರ ಜುಲೈ ೬ರಂದು ಜನಿಸಿದ ಜವರೇಗೌಡರು ಇದೀಗ ಐವತ್ತರಲ್ಲಿ ಅಡಿ ಇಡುತ್ತಿದ್ದಾರೆ. ಅವರನ್ನು ನೋಡುವ ಯಾರೇ ಆದರೂ ಅವರಿಗೆ ಐವತ್ತು ವರ್ಷಗಳಾದುವೆಂದರೆ ನಂಬಲಾರರು. ಉದಾರವಾದ ಮನಸ್ಸು, ಜೀವನದಲ್ಲಿ ದೊರೆತದ್ದಕ್ಕೆ ಸಂತೃಪ್ತಿ, ಸೋಮಾರಿತನಕ್ಕೆ ಆಸ್ಪದವಿಲ್ಲದ ದುಡಿಮೆ ಇವೇ ಜವರೇಗೌಡರ ಚಿರತಾರುಣ್ಯದ ಗುಟ್ಟುಗಳೆಂದು ನಾನು ಭಾವಿಸಿದ್ದೇನೆ. ಮಾಡಲು ಕೆಲಸವಿಲ್ಲದಾಗ ಮನುಷ್ಯ ವಯಸ್ಸು ಎಣಿಸು ತ್ತಾನೆಂಬ ಅರ್ಥದ ಮಾತು 'ರಂಗಬಿನ್ನಪ'ದ ವಚನವೊಂದರಲ್ಲಿ ಬರುತ್ತದೆ. ಜವರೇಗೌಡರಿಗೆ ವಯಸ್ಸನ್ನು ಎಣಿಸಲು ವ್ಯವಧಾನವಿಲ್ಲ. ಅವರೇನಾದರೂ

ತಮ್ಮ ವಯಸ್ಸನ್ನು ಎಣಿಸಿಕೊಳ್ಳುತ್ತಾ ಕುಳಿತಿದ್ದಿದ್ದರೆ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಈಗಿರುವ ಸ್ಥಾನಮಾನ ಇರುತ್ತಿರಲಿಲ್ಲ. ಜವರೇಗೌಡರು ತಮ್ಮ ಶ್ರಮ ದುಡಿಮೆಗಳಿಂದಾಗಿ ಕನ್ನಡವನ್ನು ವಿಶ್ವವಿದ್ಯಾನಿಲಯದ ಹೃದಯವನ್ನಾಗಿಸಿದ್ದಾರೆ. ಇದು ಸಾಧ್ಯವಾಗಿರುವುದು ಅವರ ಅಪಾರವಾದ ಕನ್ನಡ ಪ್ರೇಮ, ಆರದ ಉತ್ಸಾಹ, ಅದ್ವಿತೀಯ ಕಾರ್ಯಶೀಲತೆ —ಈ ಗುಣಗಳಿಂದ. ಅವರು ನಡೆಯುವ ದಾರಿ ಇನ್ನೂ ದೊಡ್ಡದಿದೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಸ್ಥಾನಮಾನಗಳಿಗಾಗಿ ಹೋರಾಟ ನಡೆಸಿದ ಪ್ರಾಧ್ಯಾಪಕರು ಮೂವರು: ಒಬ್ಬರು ಡಾ. ಕೃಷ್ಣಶಾಸ್ತ್ರಿಗಳು, ಇನ್ನೊಬ್ಬರು ಕುವೆಂಪುರವರು, ಮೂರನೆಯವರು ಇಂದಿನ ಪ್ರಾಧ್ಯಾಪಕ ಜವರೇಗೌಡರು. ಅವರು ಶಾಸ್ತ್ರಿಗಳು ಹಾಗೂ ಕುವೆಂಪು ಇಬ್ಬರಿಗೂ ಶಿಷ್ಯರು. ಫಲವಾಗಿಯೋ ಏನೋ, ಕನ್ನಡದ ವಿಷಯದಲ್ಲಿ ಕೃಷ್ಣಶಾಸ್ತ್ರಿಗಳ ಮತ್ತು ಕುವೆಂಪುರವರ ಕಠೋರನಿಷ್ಠೆ, ಕಾರ್ಯಕೌಶಲ, ಕಲ್ಪನೆ, ಪ್ರವಾದಿತನ ಮೊದಲಾದ ಗುಣಗಳೆಲ್ಲ ಜವರೇಗೌಡರಲ್ಲಿ ಏಕೀಭವಿಸಿವೆ.

ಜವರೇಗೌಡರಿಗೆ ಹುಟ್ಟುಹಬ್ಬದ ಶುಭಾಶಯಗಳನ್ನು ಕೋರುವುದು ಕನ್ನಡ ಜನತೆಗೆ ಸಂತೋಷ. ಅಷ್ಟೇ ಅಲ್ಲ, ಹೆಮ್ಮೆ ಕೂಡ.

# ತಾರಾಶಂಕರ ಬ್ಯಾನರ್ಜಿ

ಹತ್ತು ವರ್ಷಗಳ ಹಿಂದೆ ಬಂಗಾಳದ ಕೆಲವು ಲೇಖಕರು ಆಸಕ್ತಿ ವಹಿಸಿ ಶ್ರಮಪೂರ್ವಕವಾಗಿ ಮೊದಲನೆಯ ಅಖಿಲ ಭಾರತ ಲೇಖಕರ ಸಮ್ಮೇಳನವನ್ನು ಕಲ್ಕತ್ತೆಯಲ್ಲಿ ಕೂಡಿಸಿದರು. ತಾರಾಶಂಕರ ಬ್ಯಾನರ್ಜಿ ಈ ಕೆಲವರಲ್ಲಿ ಬಹು ಮುಖ್ಯರಾದವರು. ಸಮ್ಮೇಳನಕ್ಕೆ ಕೆಲವು ದಿನಗಳ ಮೊದಲು ಯಾವುದೋ ಒಂದು ವಿವರಣೆಗಾಗಿ ನಾನು ಸ್ವಾಗತ ಸಮಿತಿಯ ಕಛೇರಿಗೆ ಹೋದೆ. ಸ್ವಯಂಸೇವಕನೊಬ್ಬ, ಬಂಗಾಳದ ಪ್ರಸಿದ್ಧ ಲೇಖಕರಲ್ಲಿ ಒಬ್ಬರಾದ ಮನೋಜ ಬಸು ಅವರಲ್ಲಿಗೆ ನನ್ನನ್ನು ಕರೆದೊಯ್ದ. ಸಮ್ಮೇಳನಕ್ಕೆ ಸಂಬಂಧಿಸಿದ ನಮ್ಮ ಮಾತುಕಥೆ ಮುಗಿದ ಮೇಲೆ ಅದೇ ಕೊಠಡಿಯ ಇನ್ನೊಂದು ಮೂಲೆಯಲ್ಲಿ ಕುಳಿತಿದ್ದ ವ್ಯಕ್ತಿಯೊಬ್ಬರನ್ನು ಬಸು ನನಗೆ ಪರಿಚಯ ಮಾಡಿಕೊಟ್ಟರು. ತೆಳ್ಳನೆಯ ವ್ಯಕ್ತಿ. ನೆಹರೂ ಜುಬ್ಬ. ಬಂಗಾಳೀ ಕಚ್ಚೆ. ನಿರ್ಲಕ್ಷ್ಯ ತುಂಬಿದ ಮುಖಚರ್ಯೆ. ಬಳಲಿಕೆ ಸೂಸುತ್ತಿದ್ದ ಕಣ್ಣುಗಳು.

"ಇವರು ಗೊತ್ತಿಲ್ಲವೆ? ನಮ್ಮ ತಾರಾಶಂಕರಬಾಬು. ಸಮ್ಮೇಳನದ ಸೂತ್ರಧಾರಿ" ಬಸು ಪರಿಚಯ ಮಾಡಿಕೊಟ್ಟರು.

ನನಗೆ ಅಪರಿಮಿತ ಆನಂದವಾಯಿತು. ತಾರಾಶಂಕರಬಾಬು—ಬಂಗಾಳಿಗಳು ಪ್ರೀತಿಯಿಂದ ಹಾಗೆಂದು ಕೂಗುವ—ತಾರಾಶಂಕರ ಬಂದೋಪಾಧ್ಯಾಯ, ಇಂಗ್ಲಿಷ್ ರೂಪಾಂತರದಲ್ಲಾದರೋ ತಾರಾಶಂಕರ ಬ್ಯಾನರ್ಜಿ, ಯಾರಿಗೆ ಗೊತ್ತಿಲ್ಲ! ಸಮಕಾಲೀನ ಬಂಗಾಳಿ ಸಾಹಿತ್ಯದ ಶರತ್‌ಚಂದ್ರರೆಂದು ಪ್ರಸಿದ್ಧರಾದ ಕಾದಂಬರಿಕಾರರವರು. ಸಣ್ಣಕಥೆ, ನಾಟಕಗಳಲ್ಲೂ ಎತ್ತಿದ ಕೈ. ಹಿಂದಿನ ವರ್ಷವಷ್ಟೆ (೧೯೫೬) ಅವರು ತಮ್ಮ ಕಾದಂಬರಿ 'ಆರೋಗ್ಯ ನಿಕೇತನ'ಕ್ಕಾಗಿ ಸಾಹಿತ್ಯ ಅಕೆಡೆಮಿಯ ಬಹುಮಾನ ಪಡೆದಿದ್ದರು; ಅದಕ್ಕೂ ಹಿಂದಿನ ವರ್ಷ (೧೯೫೫) ಅದೇ ಕಾದಂಬರಿಗೆ ರವೀಂದ್ರ ಪಾರಿತೋಷಕ ದೊರೆತಿತ್ತು. ಆ ಕಾದಂಬರಿ ನಾಟಕ ರೂಪದಲ್ಲಿ ಕಲ್ಕತ್ತೆಯ

ರಂಗಮಂಚದ ಮೇಲೆ ಯಶಸ್ವಿಯಾಗಿ ನಡೆಯುತ್ತಿತ್ತು. ದಿನಕ್ಕೆ ಎರಡು ನಾಟಕಗಳು ನಡೆದರೂ ಟಿಕೆಟ್ ದೊರೆಯದೆ ನಿರಾಶರಾದವರ ಸಂಖ್ಯೆ ಆರು ತಿಂಗಳು ಕಳೆದರೂ ಬೆಳೆಯುತ್ತಲೇ ಇತ್ತು. ಅದ್ಭುತ ಪ್ರಸಿದ್ಧಿ ಪಡೆದಿದ್ದ ಚಲನಚಿತ್ರ ನಿರ್ದೇಶಕ ಸತ್ಯಜಿತರಾಯ್ ಅವರು ತಾರಾಶಂಕರರ ಕೃತಿ 'ಜಲಸಾ ಘರ್' ಅನ್ನು ಚಲನಚಿತ್ರಕ್ಕೆ ಅಳವಡಿಸುತ್ತಿದ್ದರು....ವಂಗ ಸಮಾಜದಲ್ಲಿ ತಾರಾಶಂಕರರು ಮನೆಮಾತಾಗಿದ್ದರು.

ಆಗಷ್ಟೇ ಅವರ ಒಂದು ಚಿಕ್ಕ ಕಥೆ 'ನಾರೀ ಓ ನಾಗಿನಿ'ಯನ್ನು ನಾನು ಕನ್ನಡಕ್ಕೆ ಅನುವಾದಿಸಿದ್ದೆ. ಹಳವನೊಬ್ಬ ಹಾವೊಂದನ್ನು ಮದುವೆಯಾಗಿ, ಅವನ ಮೊದಲ ಹೆಂಡತಿಗೂ ಹಾವಿಗೂ ಬೆಳೆದು ಬಂದ ವೈಷಮ್ಯದ ಕಥೆ 'ಹಾವು ಮತ್ತು ಹೆಣ್ಣು' ನನ್ನನ್ನು ತುಂಬ ಆಕರ್ಷಿಸಿತ್ತು. ಆ ಒಂದು ಕಥೆ ನನ್ನನ್ನು ತಾರಾಶಂಕರರ ಕಡೆಗೆ ಬಲವಾಗಿ ಎಳೆದ ಸೂಜಿಗಲ್ಲಾಗಿತ್ತು. ತಾರಾಶಂಕರರನ್ನು ಕಂಡು ಮಾತಾಡಬೇಕೆಂಬುದು ನನ್ನ ಹಲವು ದಿನಗಳ ಬಯಕೆಯಾಗಿತ್ತು. ಲೇಖಕರ ಸಮ್ಮೇಳನದ ಸ್ವಾಗತ ಕಛೇರಿಯಲ್ಲಿ ಅವರನ್ನು ಅಷ್ಟು ಸುಲಭವಾಗಿ ಆ ಸಂಜೆ ಕಾಣಬಹುದೆಂದು ನಾನು ಊಹಿಸಿರಲಿಲ್ಲ. ಅಪೇಕ್ಷಿಸಿದ ಅವಕಾಶ ಅನಿರೀಕ್ಷಿತವಾಗಿ ಎದುರಿಗೆ ಬಂದಿತ್ತು.

ಮುಗಿಯುತ್ತಾ ಬಂದಿದ್ದ ಸಿಗರೇಟನ್ನು ಮೂಲೆಗೆ ಎಸೆದು ತಾರಾಶಂಕರರು ಎದ್ದರು. ನಮಸ್ಕಾರ ಮಾಡಿ, ನನ್ನ ಪರಿಚಯ ಹೇಳಿಕೊಂಡೆ. ಅವರ ಮುಖ ನನಗೆ ಚಿರಪರಿಚಯದ ಮುಖವಾಗಿ ತೋರಿತು. ಅವರನ್ನು ಎಲ್ಲೋ ನೋಡಿದ ರಹಸ್ಯ ನನ್ನನ್ನು ಬಾಧಿಸಿತು. ಅವರನ್ನು ಕೇಳಿದೆ. "ನೀವೆಲ್ಲಿದ್ದೀರಿ?" ನನ್ನನ್ನು ಮರುಪ್ರಶ್ನಿಸಿದರು.

"೨೩, ಇಂದ್ರ ಬಿಸ್ವಾಸ ರಸ್ತೆ."

"ಓ! ಸರಿ ಮತ್ತೆ. ನಾನಿರುವುದೂ ಬೆಲಗಾಚಿಯಾದಲ್ಲೇ. ತಾಲಾ ಟ್ಯಾಂಕಿನ ಬುಡದಲ್ಲೇ ನನ್ನ ಮನೆ. ದಿನವೂ ಬೆಳಗ್ಗೆ ಸಾಯಂಕಾಲ ನಿಮ್ಮ ಬೀದಿಯಲ್ಲೇ ಓಡಾಡುತ್ತಿದ್ದೇನಲ್ಲ." ಅವರು ನಕ್ಕು ಹೇಳಿದರು.

ನನಗೆ ಆಗ ರಹಸ್ಯದ ಅರ್ಥವಾಯಿತು. ಇಂದ್ರ ಬಿಸ್ವಾಸ ರಸ್ತೆಯಲ್ಲಿ ನಿತ್ಯವೂ ಓಡಾಡುವ, ಉಡುಗೆ ತೊಡುಗೆಗಳಲ್ಲಿ ಒಂದೇ ಬಗೆಯವರಾದ

ನೂರಾರು ಬಂಗಾಳಿಗಳಲ್ಲಿ ಒಬ್ಬರು ಈ ಸಾಹಿತ್ಯ ಸಾಮ್ರಾಟರಾಗಿದ್ದರು. ಅವರು ನನ್ನನ್ನು ಒಮ್ಮೆ ಮನೆಗೆ ಬರುವಂತೆ ಆಹ್ವಾನಿಸಿದರು.

ತಾರಾಶಂಕರ ಬ್ಯಾನರ್ಜಿಯವರನ್ನು ನಾನು ಮೊದಲು ಕಂಡದ್ದು ಹೀಗೆ.

* * *

ತಾರಾಶಂಕರರು ಹುಟ್ಟಿದ್ದು ೧೮೯೮ರ ಜುಲೈ ೨೩ರಂದು. ಬಂಗಾಳದ ಬೀರಭೂಮ್ ಜಿಲ್ಲೆಯ ಲಭಪುರ ಅವರ ಹುಟ್ಟೂರು. ತಂದೆ ಹರಿದಾಸ ಬ್ಯಾನರ್ಜಿಯವರು ಚಿಕ್ಕ ಜಮೀನ್ದಾರರಾಗಿದ್ದರು. ತಾರಾಶಂಕರರು ಎಂಟು ವರ್ಷದವರಾಗಿದ್ದಾಗಲೇ ತಂದೆಯನ್ನು ಕಳೆದುಕೊಂಡರು. ಮಗನ ಪೋಷಣೆಯಲ್ಲಿಯೇ ತಾಯಿ ಪ್ರಭಾತಿ ದೇವಿಯವರು ಸರ್ವಸುಖಗಳನ್ನೂ ಕಂಡುಕೊಂಡರು. ತಾರಾಶಂಕರರು ಶಾಲೆಯಲ್ಲಿದ್ದಾಗ ಕ್ರಾಂತಿಕಾರಿ ದಳಗಳೂ, ಭಯಾನಕ ಚಳವಳಿಗಳೂ ಅವರನ್ನು ಆಕರ್ಷಿಸಿದವು. ಕಲ್ಕತ್ತೆಯ ಸೇಂಟ್ ಕ್ಸೇವಿಯರ್ ಕಾಲೇಜಿನಲ್ಲಿ ಅವರು ಆರಂಭ ವರ್ಷದ ವಿದ್ಯಾರ್ಥಿಯಾಗಿದ್ದಾಗ, ಭಯಾನಕ ಚಟುವಟಿಕೆಗಳೊಂದಿಗೆ ಸಂಬಂಧವಿಟ್ಟುಕೊಂಡಿದ್ದಾರೆಂಬ ಕಾರಣದಿಂದ, ತಮ್ಮ ಹಳ್ಳಿಯಲ್ಲಿಯೇ ಗ್ರಾಮಬಂಧನಕ್ಕೊಳಗಾಗಿದ್ದರು. ಮೂವತ್ತನೆ ವಯಸ್ಸಿಗಾಗಲೆ ಅವರು ಸ್ಥಳೀಯ ಮುಂದಾಳುಗಳಲ್ಲೊಬ್ಬರಾಗಿ ದೇಶಸೇವೆಗೆ, ಸ್ವಾತಂತ್ರ್ಯ ಹೋರಾಟಕ್ಕೆ ನೇರವಾಗಿ ಧುಮುಕಿದರು. ೧೯೨೯ ರಲ್ಲಿ ಕಾಂಗ್ರೆಸ್ಸಿಗೆ ಸೇರಿದ ತಾರಾಶಂಕರರು ೧೯೩೦ ರಲ್ಲಿ ಸೆರೆಮನೆ ಸೇರಿ ಸರ್ಕಾರದ ಅತಿಥಿಯಾದರು. ಜನಸೇವೆಯಲ್ಲಿ ಮೊದಲಿನಿಂದಲೂ ಅವರಿಗೆ ಆಸಕ್ತಿ. ಕಾಂಗ್ರೆಸ್ ಸ್ವಯಂಸೇವಕರಾಗಿ ಅವರು ಊರೂರುಗಳಲ್ಲಿ ಸುತ್ತಿ, ಕಾಲರಾ, ಛಳಿಜ್ವರ ಮೊದಲಾದ ರೋಗಗಳಿಂದ ನರಳುತ್ತಿದ್ದ ಹಳ್ಳಿಗರನ್ನು ಉಪಚರಿಸುತ್ತಿದ್ದರು. ಅವರು ಗ್ರಾಮಬಂಧನದಲ್ಲಿದ್ದ ಕಾಲದಲ್ಲಿ ಕರ್ಮಯೋಗಿಯಂತೆ ದುಡಿದರು. ೧೯೪೨–೪೩ ರಲ್ಲಿ ಅವರು ಮಾರ್ಕ್ಸ್‌ವಾದಿಯಾಗಿದ್ದರು. ಈಗ ಅವರಿಗೆ ಸಮಾಜವಾದೀ ಮನೋಭಾವದ ಪ್ರಜಾಪ್ರಭುತ್ವದಲ್ಲಿ ಅಚಲವಾದ ನಂಬುಗೆಯಿದೆ. ತಾರಾಶಂಕರರು ಕೆಲವು ಕಾಲ ಕಾನ್‌ಪುರದಲ್ಲಿ ಇದ್ದಲು ಅಂಗಡಿಯನ್ನೂ ಇಟ್ಟಿದ್ದರಂತೆ. ಆದರೆ ಅಂಗಡಿಯನ್ನು ಸಮರ್ಥವಾಗಿ

ಲಾಭದಾಯಕವಾಗಿ ನಡೆಸುವುದು ಅವರಿಗೆ ಕಷ್ಟವಾದ್ದರಿಂದ ಬಹುಬೇಗನೆ ಈ ಕೆಲಸದಿಂದ ಬಿಡುಗಡೆ ಪಡೆದರು. ಅವರ ಮಾತಿನಲ್ಲಿಯೇ ಹೇಳುವುದಾದರೆ "ಬಹುಬೇಗನೆ ಕೈಗೆ ಹತ್ತಿದ ಇದ್ದಲ ಮಸಿಯನ್ನು ತೊಳೆದುಕೊಂಡರು." ತಾರಾಶಂಕರರು ಬಂಗಾಲದ ವಿಧಾನ ಪರಿಷತ್ತಿನಲ್ಲಿಯೂ ಭಾರತದ ರಾಜ್ಯ ಸಭೆಯಲ್ಲಿಯೂ ಹಲವು ವರ್ಷ ನಾಮಕರಣ ಸದಸ್ಯರಾಗಿದ್ದರು.

* * *

ಆ ಮುಂಜಾನೆ ಬೆಲಗಾಚಿಯಾ ವಿಸ್ತರಣದ ಅವರ ಮನೆಗೆ ನಾನು ಹೋದಾಗ ತಾರಾಶಂಕರರು ಬೆಳಗಿನ ಪತ್ರಿಕೆಯನ್ನು ಓದುತ್ತಿದ್ದರು. ನನ್ನನ್ನು ನೋಡಿದ ಅವರು ನಗುತ್ತಾ ಹೊರಬಂದರು. ಮುಂದೆ ಸುಮಾರು ಎರಡು ಘಂಟೆ ಹೊತ್ತು ಅವರ ಅಭ್ಯಾಸದ ಕೋಣೆಯಲ್ಲಿ ನಮ್ಮ ಮಾತುಕತೆ ನಡೆಯಿತು. ನಾನಾ ವಿಚಾರಗಳು, ಮುಖ್ಯವಾಗಿ ಅವರ ಜೀವನದ ಕಥೆ, ಬಾಲ್ಯದ ನೆನಪುಗಳು, ರಾಜಕೀಯದಲ್ಲಿ ಅವರ ಅನುಭವಗಳು, ಸಾಹಿತ್ಯ ಕ್ಷೇತ್ರದಲ್ಲಿ ಪಟ್ಟ ಪಾಡು, ಸಮಕಾಲೀನರು ಅವರನ್ನು ನಡೆಸಿಕೊಂಡ ರೀತಿ, ಕಲೆಯ ವಿಷಯದಲ್ಲಿ ಅವರಿಗಿರುವ ನಂಬಿಕೆ, ಭಾರತೀಯ ಸಾಹಿತ್ಯ ನಡೆಯಬೇಕಾದ ದಾರಿ, ಕಲ್ಕತ್ತೆಯ ಸಮ್ಮೇಳನದ ಫಲಶ್ರುತಿ, ಬಂಗಾಳಿ, ಕನ್ನಡ ಸಾಹಿತ್ಯ, ಇಂದಿನ ವಿದ್ಯಾಭ್ಯಾಸ ಒಂದಲ್ಲ ಎರಡಲ್ಲ....ನಮ್ಮ ಮಾತುಕಥೆ ಆರಂಭವಾದ ಸ್ವಲ್ಪ ಹೊತ್ತಿನಲ್ಲೇ ಪಕ್ಕದ ಫೋನು ಸದ್ದುಮಾಡಿತು. ತಾರಾ ಶಂಕರರು ಅದನ್ನೆತ್ತಿಕೊಂಡು ಬಹುಬೇಗನೆ ಮಾತನ್ನು ಮುಗಿಸಿದರು. ತಕ್ಷಣವೇ ಫೋನನ್ನು ಎತ್ತಿ ಕೆಳಗಿಟ್ಟು ನನ್ನ ಕಡೆ ನೋಡಿ ನಗುತ್ತಾ ಹೇಳಿದರು : "ನೋಡಿ, ನಮ್ಮ ಮಾತು ಮುಗಿಯುವ ತನಕ ಹೀಗಿರುವುದೇ ಒಳ್ಳೆಯದು. ಮಾತುಕಥೆಯ ಸಂದರ್ಭದಲ್ಲಿ ನಡುವೆ ಫೋನ್ ಕರೆಯನ್ನು ನಾನು ಸಹಿಸಲಾರೆ. ಇವರೆಲ್ಲ ನನಗೆ ಲೇಖಕನೆಂದು ತೊಂದರೆ ಕೊಡುತ್ತಿದ್ದಾರೆಂದು ಭಾವಿಸುತ್ತೀರಾ? ಖಂಡಿತಾ ಇಲ್ಲ. ರಾಜಕೀಯಕ್ಕೂ ನನಗೂ ಹತ್ತಿರದ ಸಂಬಂಧವಿದೆಯೆಂದೇ ನನ್ನಲ್ಲಿ ಇವರೆಲ್ಲರ ಆಸಕ್ತಿ. ನಾನೀಗ ವಿಧಾನ ಪರಿಷತ್ತಿನ ಸದಸ್ಯನೆಂಬುದು ನಿಮಗೆ ತಿಳಿದಿರಬೇಕು." ಸ್ವಲ್ಪ ಸಮಯ ಸರಿಯಿತು.

"ನೀವು ಕಾಫಿ ಕುಡಿಯುತ್ತೀರಾ ? ಟೀ ತೆಗೆದು ಕೊಳ್ಳುತ್ತೀರಾ ?"

"ಯಾವುದೂ ಆಗಬಹುದು."

"ಹಾಗಲ್ಲ ಮದ್ರಾಸಿಗಳಿಗೆ ಕಾಫಿ ಇಷ್ಟ. ಬಂಗಾಳಿಗಳು ಅದನ್ನು ಚೆನ್ನಾಗಿ ತಯಾರಿಸರು."

ಕಾಫಿಯೇ ಬಂತು ; ಮುಗಿಯಿತು. ಮಾತುಕಥೆ ಮುಗಿಯಲಿಲ್ಲ. ಹೊಸ ಪರಿಚಿತನೊಬ್ಬನ ವಿಷಯದಲ್ಲಿ ತಾರಾಶಂಕರರ ತಾಳ್ಮೆ ನನ್ನನ್ನು ವಿಸ್ಮಯ ಗೊಳಿಸಿತು. ಅವರನ್ನು ಕೇಳಿದೆ: "ನೀವು ಸಾಹಿತ್ಯಕ್ಕೆ ಪ್ರವೇಶಿಸಿದ್ದು ಹೇಗೆ ?"

"ಅದು ದೊಡ್ಡ ಕಥೆ. ಈಚೆಗೆ ನಾನೇ ಎರಡು ಪುಸ್ತಕ ಬರೆದಿದ್ದೇನೆ. ಒಂದು 'ಆಮಾರ್ ಕಾಲೇರ್ ಕಥಾ.' ಇನ್ನೊಂದು 'ಆಮಾರ್ ಸಾಹಿತ್ಯ ಜೀವನ್'. ಎರಡರದೂ ಇದೇ ಕಥೆ."

ಇವುಗಳಲ್ಲಿ ಮೊದಲನೆಯದು ೧೯೫೧ ರಲ್ಲಿಯೂ, ಎರಡನೆಯದು ೧೯೫೩ ರಲ್ಲಿಯೂ ಪ್ರಕಟವಾಗಿವೆ. ಎರಡನೆಯದಕ್ಕೆ ಮೊದಲನೆಯದು ಹಿನ್ನೆಲೆಯ ನ್ನೊದಗಿಸುತ್ತದೆ. ಸ್ವಾರಸ್ಯಪೂರ್ಣವಾದ ಈ ಆತ್ಮ ಕಥಾನಕಗಳಲ್ಲಿ ತಾರಾ ಶಂಕರರ ಸಾಹಿತ್ಯ ಜೀವನ ಅರಳಿದ ಬಗೆಯನ್ನು ನೋಡಬಹುದು. ಕಳೆದು ಹೋದ ಕಾಲದ ಸೊಗಸನ್ನು ಆಸ್ವಾದಿಸಬಹುದು.

ತಾರಾಶಂಕರರು ಬರವಣಿಗೆಗೆ ಆರಂಭಿಸಿದ್ದು ಸುಮಾರು ೧೯೨೯ರ ಹೊತ್ತಿಗೆ. ಅದು ಬಂಗಾಳದಲ್ಲಿ ರವೀಂದ್ರರ (೧೮೬೧-೧೯೪೧) ಹಾಗೂ ಶರತ್‌ಚಂದ್ರರ (೧೮೭೬-೧೯೩೮) ಕಾಲ. ಅವರಿಬ್ಬರೇ ಸಾಹಿತ್ಯಾಕಾಶದ ಸೂರ್ಯಚಂದ್ರರು. ಜೊತೆಗೆ ಶೈಲಜಾನಂದ ಮುಖರ್ಜಿ (೧೯೦೦), ಪ್ರೇಮೇಂದ್ರಮಿತ್ರ (೧೯೦೪), ಅಚಿಂತ್ಯಕುಮಾರ್ ಸೇನ್‌ಗುಪ್ತ (೧೯೦೩) ಬುದ್ಧದೇವ ಬಸು (೧೯೦೮), ಪ್ರಬೋಧ ಕುಮಾರ್ ಸನ್ಯಾಲ್ (೧೯೦೭), ಸರೋಜಕುಮಾರ್ ರಾಯಚೌಧುರಿ (೧೯೦೨) ಮೊದಲಾದವರು ಆಧುನಿಕ ಬಂಗಾಳಿ ಸಾಹಿತ್ಯದ ಆ ಕಾಲದ ಅತಿರಥ ಮಹಾರಥರು. ತಾರಾಶಂಕರರು ೧೯೨೯ ರಲ್ಲಿ 'ರಸಕಲಿ' ಎಂಬ ಚಿಕ್ಕ ಕಥೆಯ ಮೂಲಕ ಸಾಹಿತ್ಯ ರಂಗಕ್ಕೆ ಕಾಲಿರಿಸಿದರು. ಅದೇತಾನೆ ಪ್ರಕಟವಾಗಿದ್ದ ಶೈಲಜಾನಂದ ಹಾಗೂ ಪ್ರೇಮೇಂದ್ರರ ಕಥೆಗಳಿಂದ ಪಡೆದ ಸ್ಫೂರ್ತಿಯ ಫಲವೇ 'ರಸಕಲಿ'. ಅದನ್ನು

ತಾರಾಶಂಕರರು ಕಲ್ಕತ್ತೆಯ ದೊಡ್ಡ ಪತ್ರಿಕೆಯೊಂದಕ್ಕೆ ಕಳಿಸಿದರು. ಆದರೆ ಸಂಪಾದಕರು ಅದನ್ನು ಪ್ರಕಟಿಸುವ ಗೊಡವೆಗೆ ಹೋಗಲಿಲ್ಲ. ತಾರಾ ಶಂಕರರೇ ಹೋಗಿ ಕಥೆಯನ್ನು ಮರಳಿ ತಂದು 'ಕಲ್ಲೋಲ' ಪತ್ರಿಕೆಗೆ ಕಳಿಸಿದರು. ಅಂದಿನ ದಿನಗಳಲ್ಲಿ 'ಪ್ರವಾಸೀ', 'ಭಾರತವರ್ಷ'ಗಳು ಪ್ರಖ್ಯಾತ ವಾದ ಪತ್ರಿಕೆಗಳು. 'ಆನಂದ ಬಜಾರ್ ಪತ್ರಿಕೆ'ಯ ಪೂಜಾ ವಿಶೇಷಾಂಕ ಭೀಮಗಾತ್ರದಲ್ಲಿ ಪ್ರಕಟವಾಗುತ್ತಿತ್ತು. ಆ ವಿಶೇಷಾಂಕಕ್ಕೆ ಬಳಸುತ್ತಿದ್ದ ಕಾಗದವನ್ನು ಕಲ್ಕತ್ತೆಯಿಂದ ಪೆಷಾವರ್‌ವರೆಗಿನ ರಾಜಮಾರ್ಗದ ಉದ್ದಕ್ಕೂ ಹಾಸಬಹುದಾಗಿತ್ತೆಂದು ತಾರಾಶಂಕರರು ನೆನಸಿಕೊಳ್ಳುತ್ತಾರೆ.

೧೯೨೩ ರಲ್ಲಿ ಗೋಕುಲಚಂದ್ರ ನಾಗ್ ಮತ್ತು ದಿನೇಶರಂಜನ ದಾಸ್ ಅವರಿಂದ ಆರಂಭಗೊಂಡ 'ಕಲ್ಲೋಲ' ಹೊಸ ಚಳುವಳಿಯ ಮುಖಪತ್ರ ವಾಗಿತ್ತು. ಪತ್ರಿಕೆ ಅಷ್ಟೇನೂ ಜನಪ್ರಿಯವಾಗಿರಲಿಲ್ಲ. ಬರೆಯುತ್ತಿದ್ದ ಲೇಖಕರು ಬಹುವಾಗಿ ಹೊಸಬರು. ಮೇಲಾಗಿ ಹಳೆಯರ ಗದಾ ಪ್ರಹಾರ ವನ್ನು ಪತ್ರಿಕೆ ಸಹಿಸಿಕೊಂಡು ಬದುಕಬೇಕಾಗಿತ್ತು. 'ರಸಕಲಿ'ಯ ಪ್ರಕಟಣೆ ಯಿಂದ ತಾರಾಶಂಕರರಿಗೆ ಪ್ರೋತ್ಸಾಹ ದೊರೆತಂತಾಯಿತು. ಮತ್ತೊಂದು ಕಥೆ ಬರೆದರು; ಇನ್ನೂ ಹಲವು ಕಥೆ ಬರೆದು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಈ ಪ್ರಕಟಣೆಗಳ ಫಲವಾಗಿ, ಕಾಂಗ್ರೆಸ್ ಸ್ವಯಂಸೇವಕರಾಗಿ ಊರೂರು ಅಲೆಯುತ್ತಿದ್ದ ತಾರಾಶಂಕರರನ್ನು ಜನ 'ಇವನೊಬ್ಬ ಲೇಖಕ' ನೆಂದು ಗುರುತಿಸುವ ಹಾಗಾಯಿತು. ಅವರ ಆರಂಭದ ಪ್ರಖ್ಯಾತ ಕಥೆಗಳೆಲ್ಲ 'ವಂಗಶ್ರೀ' 'ಪ್ರವಾಸೀ' ಪತ್ರಿಕೆಗಳಲ್ಲಿ ಪ್ರಕಟಗೊಂಡವು.

"ನಿಮ್ಮ ಮೊದಲನೆಯ ಪುಸ್ತಕರೂಪದ ಕೃತಿ ಯಾವುದು?"

"ನಾಟಕವೋ, ಕಾದಂಬರಿಯೋ ಇರಬೇಕು........"

ತಾರಾಶಂಕರರು ಸುಮಾರು ಒಂದು ನೂರು ಪುಸ್ತಕ ಬರೆದಿದ್ದಾರೆ. ಅವುಗಳಲ್ಲಿ ನಲವತ್ತು ಕಾದಂಬರಿಗಳು. ಮಿಕ್ಕವು ಕಥೆ, ನಾಟಕ, ಇತ್ಯಾದಿ. ತಮ್ಮ ಬರವಣಿಗೆಯ ಆರಂಭದ ದಿನಗಳಲ್ಲಿಯೇ ಅವರು ಒಂದು ನಾಟಕ ಬರೆದರು. ಆಗ ಬಂಗಾಳಿಯಲ್ಲಿ ಹೆಸರಾಂತ ನಾಟಕಕಾರರೊಬ್ಬರ ಮುಖಾಂತರ ಅದನ್ನು ಕಲ್ಕತ್ತೆಯ ನಾಟ್ಯಸಂಘದ ಸಂಚಾಲಕರಿಗೆ ಕಳಿಸಿಕೊಟ್ಟರು. ಸಂಚಾಲಕರು ನಾಟಕವನ್ನು ಓದುವ ಶ್ರಮವನ್ನು ತೆಗೆದುಕೊಳ್ಳದೆ ಮರಳಿಸಿ

ದರು. ತಾರಾಶಂಕರರು ನಿರಾಶೆ, ಕೋಪಗಳಿಂದ ಹಸ್ತಪ್ರತಿಯನ್ನೇ ಸುಟ್ಟು ಬಿಟ್ಟರು. 'ಚೈತಾಲೀ ಘೂರ್ಣಿ' ಅವರ ಪ್ರಥಮ ಪ್ರಕಟಿತ (೧೯೩೨) ಕಾದಂಬರಿ. ಅವರ ಮುಂದಿನ ಹಲವು ಕೃತಿಗಳಲ್ಲಿ ಕಂಡು ಬರುವ ರೊಮಾಂಟಿಕ್ ಗುಣ ಆರಂಭದ ಈ ಕೃತಿಯಲ್ಲಿ ಸಮೃದ್ಧವಾಗಿ ತುಂಬಿ ಕೊಂಡಿದೆ. ಇದರ ಪ್ರಕಟಣೆಗಾಗಿ ಪ್ರಕಾಶಕರನ್ನು ಆಶ್ರಯಿಸದೆ, ತಮ್ಮ ಪತ್ನಿಯವರ ಮನವೊಲಿಸಿ ಪಿತ್ರಾರ್ಜಿತವಾದ ಹಣವನ್ನು ಉಪಯೋಗಿಸಿ ಕೊಂಡು, ತಾವೇ ಸ್ವಂತವಾಗಿ ಪ್ರಕಟಿಸಿದರು. ಪತ್ರಿಕಾ ಸಂಪಾದಕರ, ನಾಟ್ಯ ಸಂಘದ ಸಂಚಾಲಕರ ನಡವಳಿಕೆ ಅವರ ಮನಸ್ಸಿನ ಮೇಲೆ ತೀವ್ರ ಪರಿಣಾಮ ವನ್ನುಂಟುಮಾಡಿತ್ತು.

ತಾರಾಶಂಕರರಿಗೆ ನಾನು ಅವರ ಕಥೆಯೊಂದನ್ನು ಕನ್ನಡಕ್ಕೆ ಅನುವಾದಿಸಿದ ವಿಚಾರ ತಿಳಿಸಿದೆ. ಮೊದಲೇ ಅವರ ಸಮ್ಮತಿ ಪಡೆಯದಿದ್ದಕ್ಕೆ ವಿಷಾದವನ್ನೂ ವ್ಯಕ್ತಪಡಿಸಿದೆ. "ಎಲ್ಲಿಯತನಕ ಕೃತಿ ನನ್ನದೆಂದು ನೀವು ಹೇಳುತ್ತೀರೋ ಅಲ್ಲಿಯವರೆಗೆ ನೀವು ಸಮ್ಮತಿ ಪಡೆಯದಿದ್ದರೂ ನನಗೆ ದುಃಖವಿಲ್ಲ. ನನ್ನ ಎಷ್ಟೋ ಬರಹಗಳು ಭಾರತದ ಮತ್ತು ಹೊರಗಿನ ಅನೇಕ ಭಾಷೆಗಳಲ್ಲಿ ಅನುವಾದವಾಗಿವೆ. ಈಚೆಗೆ ಸಮಾಜವಾದೀ ರಾಷ್ಟ್ರಗಳಲ್ಲಿ ನನ್ನ ಹಲವು ಕೃತಿಗಳು ಪ್ರಕಟವಾಗಿವೆಯಂತೆ. ಎಷ್ಟೋ ನನಗೆ ಗೊತ್ತಿಲ್ಲ. ನನ್ನ ಕೆಲವು ಕಥೆಗಳ ಚೌರ್ಯವೂ ನಡೆದಿದೆಯೆಂದು ನನ್ನ ಕೆಲವು ಸ್ನೇಹಿತರು ಹೇಳುತ್ತಾರೆ. ನಾನೇನು ಮಾಡಲಿ? ನನ್ನ ಕಥೆ ನನ್ನದೇ. ಅದಕ್ಕಾಗಿ ಕೋರ್ಟಿಗೆ ಹೋಗಲೆ ?" ತಾರಾಶಂಕರರ ನಗುವಿನಲ್ಲಿ ಹಾಸ್ಯಕ್ಕಿಂತ ಹೆಚ್ಚಾಗಿ ನೋವಿನ ಛಾಯೆಯಿತ್ತು.

ಹೊತ್ತು ಏರುತ್ತಾ ಬಂತು. ನಾನು ಹೊರಡಲು ಅವರ ಸಮ್ಮತಿ ಕೇಳಿದೆ. ತಾರಾಶಂಕರರು ತಲೆಯಾಡಿಸುತ್ತಾ ಹೇಳಿದರು : "ನಿಮ್ಮ ಜೊತೆ ಮಾತಾಡು ತ್ತಿದ್ದುದ್ದು ನನಗೆ ಸಂತೋಷ. ಸಮಯವಾದಾಗ ಬರುತ್ತಿರಿ. ನಮ್ಮ ಭೇಟಿಯ ನೆನಪಿಗಾಗಿ ನಾನು ನಿಮಗೆ ಒಂದು ಪುಸ್ತಕ ಕೊಡುತ್ತೇನೆ. ಯಾವುದರ ಪ್ರತಿ ನನ್ನ ಬಳಿ ಈಗ ಇದೆಯೋ ತಿಳಿಯದು, ನೋಡೋಣ. ನಿಮಗೆ ಯಾವುದು ಬೇಕು ?"

"'ಆರೋಗ್ಯ ನಿಕೇತನ' ಕೊಡಿ. ಮೊನ್ನೆಯಷ್ಟೆ ನಾನು ನಾಟಕ ನೋಡಿದೆ"

"ನಾಟಕ ಆವೃತ್ತಿ ಇಲ್ಲ. ಕಾದಂಬರಿ ಕೊಡಲೆ?"

"ಆಗಬಹುದು." ತಾರಾಶಂಕರರು ಎದ್ದು ಒಳಗೆ ಹೋದರು. ನಾನು ಅವರ ಅಭ್ಯಾಸದ ಕೋಣೆಯ ಸುತ್ತ ಕಣ್ಣಾಡಿಸಿದೆ. ನಿರಾಡಂಬರದ, ಅಷ್ಟೇನೂ ದೊಡ್ಡದಲ್ಲದ ಕೋಣೆ. ಮೇಜಿಲ್ಲ, ಕುರ್ಚಿಯಿಲ್ಲ. ಕೋಣೆಯಗಲಕ್ಕೂ ಹಾಸಿದ ರತ್ನಗಂಬಳಿ. ಬರೆಯಲು ಒಂದು ಇಳಿಜಾರು ಮೇಜು. ಒಂದು ಪಕ್ಕಕ್ಕೆ ಟೆಲಿಫೋನ್. ಇನ್ನೊಂದು ಪಕ್ಕಕ್ಕೆ ನಟರಾಜ ವಿಗ್ರಹ. ಎಲ್ಲ ಕಡೆಯೂ ಅಸ್ತವ್ಯಸ್ತವಾಗಿ ಹರಡಿದ ಕಾಗದ, ಪುಸ್ತಕ, ಪತ್ರಿಕೆಗಳು. ಶಾಸನ ಸಭೆ ಕಲಾಪದ ವರದಿಗಳು....

ಕೈಯಲ್ಲಿ ಎರಡು ಪುಸ್ತಕ ಹಿಡಿದುಕೊಂಡು ತಾರಾಶಂಕರರು ಒಳಗಿನಿಂದ ಬಂದರು. ನಾನು ಕಣ್ಣರಳಿಸಿಕೊಂಡು ಕೈಯಲ್ಲಿದ್ದ ಪುಸ್ತಕಗಳ ಕಡೆಯೇ ನೋಡಿದೆ. ತಮ್ಮ ಜಾಗದಲ್ಲಿ ಕುಳಿತುಕೊಳ್ಳುತ್ತಾ ಹೇಳಿದರು: "ನೋಡಿ. 'ಆರೋಗ್ಯ ನಿಕೇತನ'ದ ಬಂಗಾಳಿ ಪ್ರತಿಗಳು ಮುಗಿದು ಹೋಗಿವೆ. ಇದು ಹಿಂದೀ ಪ್ರತಿ. ಇದನ್ನು ಸಾಹಿತ್ಯ ಅಕೆಡೆಮಿಯವರು ಇತರ ಭಾರತೀಯ ಭಾಷೆಗಳಿಗೆ ಅನುವಾದಿಸಲು ಯೋಜಿಸಿದ್ದಾರೆ. ಈಚೆಗಷ್ಟೇ ಹಿಂದೀ ಅನುವಾದ ಪ್ರಕಟವಾಗಿದೆ. ಇನ್ನೊಂದು 'ನ್ಯಾಯಾಧೀಶ.' ಇದೂ ನನ್ನ ಬಂಗಾಳಿ 'ವಿಚಾರಕ'ದ ಹಿಂದೀ ಅನುವಾದ." ಕೈಗೆ ಪೆನ್ನು ತೆಗೆದುಕೊಂಡು ನನ್ನ ಹೆಸರು ಬರೆದರು. ತಡೆದರು. ಮುಂದೆ ಏನು ಬರೆಯಬೇಕೆಂದು ಯೋಚಿಸಿದರು. "ಏನೆಂದು ಬರೆಯಲಿ?" ನನ್ನನ್ನೇ ಅವರು ಕೇಳಿದರು.

"ಆಶೀರ್ವಾದ ಪೂರ್ವಕ ಎಂದು ಬರೆಯಿರಿ."

"ಇಲ್ಲ, ಇಲ್ಲ." ಅವರು ಮುಂದೆ ಬರೆದರು: "*With my best love.*"

ಪುಸ್ತಕಗಳನ್ನು ಹಿಡಿದುಕೊಂಡು ಹೊರಟೆ. ತಾರಾಶಂಕರರು ಮುಂಬಾಗಿಲ ವರೆಗೂ ಬಂದು ನನ್ನನ್ನು ಬೀಳ್ಕೊಟ್ಟರು. ಆಮೇಲೆ ಮುಂದಿನ ಒಂದು ವರ್ಷದ ಅವಧಿಯಲ್ಲಿ ನಾನು ನಾಲ್ಕಾರು ಬಾರಿ ಅವರನ್ನು ಭೇಟಿಯಾಗುವ ಅವಕಾಶ ಕಲ್ಪಿಸಿಕೊಂಡೆ. ಒಂದೆರಡು ಸಲ—ಅನಿರೀಕ್ಷಿತವಾಗಿ, ಟ್ರಾಮಿನಲ್ಲಿ, ಬಸ್ಸಿನಲ್ಲಿ. ಅವರು ಒಮ್ಮೆ ನಮ್ಮ ಮನೆಗೆ ಬಂದು ದಕ್ಷಿಣ ಭಾರತದ ಊಟವನ್ನು ರುಚಿ ನೋಡಬೇಕೆಂದೂ ತೀರ್ಮಾನವಾಗಿತ್ತು. ಆದರೆ ಕಾರಣಾಂತರದಿಂದ ಆ ಕಾರ್ಯಕ್ರಮ ನಡೆಯಲೇ ಇಲ್ಲ.

* * *

ತಾರಾಶಂಕರರು ಮುಖ್ಯವಾಗಿ ಕಾದಂಬರಿಕಾರರು; ಕಥೆಗಾರರು. 'ಛಲನಾಮಯೀ', 'ಜಲಸಾಘರ್,' 'ರಸಕಲಿ', 'ಪ್ರಸಾದಮಾಲಾ' ಮೊದಲಾದ ಅವರ ಅನೇಕ ಕಥಾ ಸಂಕಲನಗಳು ಪ್ರಕಟವಾಗಿವೆ. ಈಚೆಗೆ ಆರಿಸಿದ ಐವತ್ತು ಕಥೆಗಳ ಪ್ರಾತಿನಿಧಿಕ ಸಂಗ್ರಹವೊಂದು ಪ್ರಕಟವಾಗಿದೆ. ಈ ಶತಮಾನದ ಮೂರು ನಾಲ್ಕನೆಯ ದಶಕಗಳ ಬಂಗಾಳಿ ಸಾಹಿತ್ಯದಲ್ಲಿ 'ಬ್ಯಾನರ್ಜಿತ್ರಯ'ರ ಸಾಧನೆ ಸಿದ್ಧಿಗಳು ಅನ್ಯಾದೃಶವಾಗಿವೆ. ಬಿಭೂತಿ ಭೂಷಣ ಬ್ಯಾನರ್ಜಿ (೧೮೯೯-೧೯೫೦), ಮಣಿಕ ಬ್ಯಾನರ್ಜಿ (೧೯೦೮-೧೯೫೬) ಮತ್ತು ತಾರಾಶಂಕರರೇ ಈ ಮೂವರಾಗಿದ್ದಾರೆ. ತಾರಾಶಂಕರರ ಕಲಾವಂತಿಕೆಯ ಹಿರಿಮೆಯನ್ನು ಕುರಿತು ಏಕಾಭಿಪ್ರಾಯವಿಲ್ಲ. ಅವರದು ಎರಡನೆಯ ದರ್ಜೆಯ ಪ್ರತಿಭೆಯೆಂದು ಹೇಳುವವರೂ ಇಲ್ಲದಿಲ್ಲ. ಆದರೆ ತಾರಾಶಂಕರರ ಕಾರ್ಯನಿಷ್ಠೆ, ಜನಪ್ರಿಯತೆಗಳ ಬಗೆಗೆ ಮಾತ್ರ ಎರಡು ಅಭಿಪ್ರಾಯಗಳಿಲ್ಲ.

ಹೊಸ ಬಾಳಿನಲ್ಲಿ ಜಾಗೃತಿಯುಂಟುಮಾಡಲು ತಾರಾಶಂಕರರು ರಾಜಕಾರಣದ ಬದಲು ಸಾಹಿತ್ಯವನ್ನು ಆರಿಸಿಕೊಂಡರು. ಆದರೆ ಅವರ ಮೂಲ ಪ್ರೀತಿಯಾದ ರಾಜಕಾರಣ, ಅದಕ್ಕೆ ಅಡಿಪಾಯವಾಗಿದ್ದ ದೇಶಪ್ರೇಮ, ಸ್ವಾತಂತ್ರ್ಯ ಕಾತರ ಮೊದಲಾದ ಕಾರಣಗಳು ತಾರಾಶಂಕರರ ಸಾಹಿತ್ಯದ ಸ್ಫೂರ್ತಿ ಚಿಲುಮೆಯಾಗಿವೆ. ಸ್ವಾತಂತ್ರ್ಯದ ಹೋರಾಟ ಅವರ ಕಲೆಗಾರಿಕೆಯ ಕ್ರತು ಶಕ್ತಿಯಾಗಿದೆ. ೧೯೩೦ ರಲ್ಲಿ ಸೆರೆಮನೆಯಲ್ಲಿದ್ದಾಗಲೇ ತಾರಾಶಂಕರರು ಸಾಹಿತ್ಯವನ್ನು ತಮ್ಮ ಕ್ಷೇತ್ರವನ್ನಾಗಿ ಆರಿಸಿಕೊಳ್ಳಲು ನಿರ್ಧರಿಸಿದರು. ತಮ್ಮ ಜೊತೆಯಲ್ಲಿದ್ದ ಸ್ವಯಂಸೇವಕರ ಸಣ್ಣತನಗಳಿಂದ ತಾರಾಶಂಕರರು ಜುಗುಪ್ಸೆಗೊಂಡರು.ರಾಜಕಾರಣದ ಋಜುತ್ವದಬಗೆಗೆ ಅವರ ಭ್ರಮೆ ನಿರಸನವಾಯಿತು. ಆದರೆ ಅದಮ್ಯವಾದ ಅಭೀಪ್ಸೆಗೆ ಅವರು ಅಭಿವ್ಯಕ್ತಿಯನ್ನು ಕೊಡಲೇ ಬೇಕಾಗಿತ್ತು. ಆದ್ದರಿಂದಲೇ ಅವರ ಪ್ರಖ್ಯಾತ ಕಾದಂಬರಿಗಳಲ್ಲಿ ರಾಷ್ಟ್ರೀಯ ಆಂದೋಲನದ ಚಿತ್ರಣವೇ ಪ್ರಥಮ, ಪ್ರಧಾನ. ಈ ದೃಷ್ಟಿಯಿಂದ ನೋಡಿದರೆ ತಾರಾಶಂಕರರ 'ಧಾತ್ರಿದೇವತಾ' (೧೯೩೯) ಮತ್ತು 'ಕಾಲಿಂದೀ' (೧೯೪೦) ಕಾದಂಬರಿಗಳು ಅವರ ಕಲೆಗಾರಿಕೆಯ ಒಂದು ಮಜಲನ್ನೂ, 'ಗಣದೇವತಾ'

(೧೯೪೨) ಮತ್ತು 'ಪಂಚಗ್ರಾಮ' (೧೯೪೩) ಕಾದಂಬರಿಗಳು ಇನ್ನೊಂದು ಮಜಲನ್ನೂ ಸೂಚಿಸುತ್ತವೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡು ತಾಯಿಯ ಪೋಷಣೆಯಲ್ಲಿ ಬೆಳೆದ ತಾರಾಶಂಕರರ ಕೃತಿಗಳಲ್ಲಿ ತಾಯಿಯ ಹೃದಯದ ಮೊರೆ ಸ್ಪಷ್ಟವಾಗಿ ಕೇಳಿಸುತ್ತದೆ. ತಾಯಿ-ಮಕ್ಕಳ ಪಾತ್ರ ಚಿತ್ರಣ, ಮಾನಸಿಕ ಹೋರಾಟ, ಆದರ್ಶಗಳ ಘರ್ಷಣೆ ಒಟ್ಟಾಗಿ ಸೇರಿ ಕೇಂದ್ರ ಬಿಂದುವಾಗುತ್ತವೆ. ತಾಯಿಯ ಅಚ್ಚಳಿಯದ ವ್ಯಕ್ತಿತ್ವ ತಾನೇ ತಾನಾಗಿ ಹರಡಿಕೊಂಡು ನಿಲ್ಲುತ್ತದೆ.

ಮೊದಲಿನ ಕೃತಿಗಳಲ್ಲಿ, ರಾಷ್ಟ್ರೀಯ ಚಳವಳಿಯಲ್ಲಿ ಮಗನ ಉತ್ಕಟಾಸಕ್ತಿ, ಮಗನಿಗಾಗಿ ತಾಯಿಯ ತೀವ್ರತರ ಪ್ರೇಮ-ಇವುಗಳ ನಡುವಣ ಘರ್ಷಣೆ ವಸ್ತುವಾಗುತ್ತದೆ. ತಾಯಿ-ಮಕ್ಕಳ ನಡುವಣ ಸಹಜ ಸಂಬಂಧವನ್ನು ಸರಳಗೊಳಿಸದೆ, ಅದನ್ನು ಸಂಕೀರ್ಣ ಸ್ವರೂಪದ ಮಾನಸಿಕ ಪ್ರಶ್ನೆಯನ್ನಾಗಿ ಎತ್ತಿಕೊಂಡಿರುವುದೇ, ಅವರಿಬ್ಬರ ಪರಸ್ಪರ ಅರಿವಿಗೆ ಪ್ರಯತ್ನಿಸಿರುವುದೇ ಇಲ್ಲಿ ಮುಖ್ಯವಾಗಿದೆ. ಆದರೆ ಆಮೇಲಿನ ಕಾದಂಬರಿಗಳಲ್ಲಿ ವ್ಯಕ್ತಿಗತವಾದ ಹೋರಾಟ ನಿಂತು, ಹೋರಾಟ ರಾಷ್ಟ್ರವ್ಯಾಪಕವಾಗುತ್ತದೆ. ಮೊದಲ ನಾಯಕ ಮಧ್ಯಮ ವರ್ಗದ ಜಮೀನ್ದಾರನ ಮಗನಾದರೆ ಈಗಿನ ನಾಯಕ ಹಳ್ಳಿ ಶಾಲೆಯ ಅಧ್ಯಾಪಕ. ಈ ಅಧ್ಯಾಪಕ ರಾಷ್ಟ್ರೀಯ ಹೋರಾಟದತ್ತ ಆಕರ್ಷಣೆಗೊಂಡ ಚಿತ್ರಣ ಇಡೀ ಬಂಗಾಳೀ ಸಾಹಿತ್ಯದಲ್ಲಿಯೇ ಅತ್ಯಂತ ಮೋಹಕವಾದ ಪ್ರಸಂಗವೆಂದು ಒಬ್ಬ ವಿಮರ್ಶಕರು ಹೇಳಿದ್ದಾರೆ. ಈ ಅಧ್ಯಾಪಕ ಸ್ಥಳೀಯವಾದ ಚಿಕ್ಕ ಪುಟ್ಟ ಅನ್ಯಾಯಗಳನ್ನು ಎದುರಿಸಿ, ಜನ ಬೆಂಬಲವನ್ನೂ ಪ್ರೀತಿಯನ್ನೂ ಸಂಪಾದಿಸಿ ಗ್ರಾಮ ಮುಖಂಡನಾಗುತ್ತಾನೆ. ಗ್ರಾಮ ಕಲಹಗಳಲ್ಲಿ ಅವನು ಮುಂದಾಳ್ತನ ವಹಿಸುತ್ತಾನೆ. ಹಾಗೆಯೇ ರಾಷ್ಟ್ರೀಯ ಹೋರಾಟದಲ್ಲಿ ಧುಮುಕುತ್ತಾನೆ. ರಾಷ್ಟ್ರ ಗ್ರಾಮವನ್ನು ನುಂಗುತ್ತದೆ. ದೊಡ್ಡ ಸಮಸ್ಯೆಗಳ ಎದುರು ಚಿಕ್ಕವು ಮರೆಯಾಗುತ್ತವೆ.

೧೯೩೫-೧೯೬೫ ರ ಅವಧಿಯಲ್ಲಿ ಪ್ರಕಟವಾದ ಶ್ರೇಷ್ಠ ಭಾರತೀಯ ಕೃತಿಯೆಂದು 'ಗಣದೇವತಾ' ಭಾರತೀಯ ಜ್ಞಾನಪೀಠದ ಲಕ್ಷ ರೂಪಾಯಿಗಳ ಬಹುಮಾನವನ್ನು ಗಳಿಸಿದೆ. ತಾರಾಶಂಕರರ ಕ್ರಾಂತಿಕಾರೀ ಮನೋಧರ್ಮ, ಮಾನವೀಯ ಮೌಲ್ಯಗಳಲ್ಲಿನ ದೃಢವಾದ ನಂಬುಗೆ ಅತ್ಯಂತ ಪರಿಣತ ರೀತಿ

ಯಲ್ಲಿ ರೂಪುಗೊಂಡು, ಅದರ ನಾಯಕ ಸಂಕೇತ ಪುರುಷನಾಗಿ ನಿಂತಿದ್ದಾನೆಂದು ಬಂಗಾಳಿ ಸಾಹಿತ್ಯವನ್ನು ಬಲ್ಲವರು ಹೇಳುತ್ತಾರೆ. ಸಾಮಾನ್ಯ ಜನ ನಿಧಾನವಾಗಿ ಎಚ್ಚರಗೊಳ್ಳುವ ಪರಿ ಈ ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಮಾರ್ಮಿಕವಾಗಿ ಚಿತ್ರಿತವಾಗಿದೆಯಂತೆ. ಜಮೀನ್ದಾರೀ ತಲೆಮಾರಿನ ಅವನತಿಯನ್ನು ನಿರೂಪಿಸುವ ಈ ಕಾದಂಬರಿಯಲ್ಲಿ ದೇವರು ಸಾಮಾನ್ಯ ಜನದಲ್ಲಿ ನೆಲೆಯಾಗಿದ್ದಾನಲ್ಲದೆ ಶ್ರೀಮಂತರಲ್ಲಲ್ಲ ಎಂಬುದೇ ಘೋಷಣೆ.

* * *

ಒಂದು ಸಲ ತಾರಾಶಂಕರರನ್ನು ಅವರು ತಮ್ಮ ಹಳ್ಳಿಯನ್ನು ಬಿಟ್ಟು ಕಲ್ಕತ್ತೆಗೆ ಬಂದ ಸಂದರ್ಭವನ್ನು ಕುರಿತು ವಿಚಾರಿಸಿದೆ. ತಾರಾಶಂಕರರು ಒಂದು ನಿಮಿಷ ತಡೆದು ಹೇಳಿದರು: "ಅದೊಂದು ವ್ಯಥೆಯ ಸನ್ನಿವೇಶ." ಆರಂಭದ ವರ್ಷಗಳಲ್ಲಿ ೧೯೨೯-೩೦ ರ ಹೊತ್ತಿಗೆ ಅವರ ಪ್ರೀತಿಯ ಮಗಳು ತೀರಿಕೊಂಡಳು. ಆ ದುಃಖ ಒಂದು ಚಿಕ್ಕ ಕಥೆಯಾಗಿ ಹೊರಹೊಮ್ಮಿತು. ಹೊಸದಾದ ಪತ್ರಿಕೆ 'ವಂಗಶ್ರೀ'ಗೆ ಅದನ್ನು ಪ್ರಕಟಣೆಗಾಗಿ ಕಳಿಸಿದರು. ಸಂಪಾದಕರಿಗೆ ತೀರಿಹೋದ ಹುಡುಗಿಯ ಪರಿಚಯವಿತ್ತು. ಕಥೆಯನ್ನು ಒಡನೆಯೇ ಪ್ರಕಟಿಸಿದರು. ಮಾತ್ರವಲ್ಲ ಹದಿನೈದು ರೂಪಾಯಿ ಗೌರವ ಧನವನ್ನೂ ಕೊಟ್ಟರು.

"ನನ್ನ ಬರಹಕ್ಕೆ ನಾನು ಪಡೆದ ಮೊದಲ ಪ್ರತಿಫಲ ಇದು. ಬರವಣಿಗೆಯಿಂದಲೇ ಜೀವಿಸಬಾರದೇಕೆ ಎನ್ನಿಸಿತು. ಹಾಗೇ ತೀರ್ಮಾನಿಸಿದೆ. ಆದರೆ ಅದಕ್ಕೆ ಕಲ್ಕತ್ತೆಗೆ ಬರುವುದು ಅನಿವಾರ್ಯವಾಗಿತ್ತು."

ಕಲ್ಕತ್ತೆಯ ಅವರ ಜೀವನ ಕಷ್ಟಕರವಾಗಿತ್ತು. ತಿಂಗಳಿಗೆ ನಾಲ್ಕೈದು ರೂಪಾಯಿ ಬಾಡಿಗೆಯ ಬಸ್ತಿ ಮನೆಯೊಂದನ್ನು ಹಿಡಿದರು. ಆಗಿನ ದಿನಗಳಲ್ಲಿ ಐದಾಣೆಗೆ ಎರಡು ಊಟ ದೊರೆಯುತಿತ್ತು. ಕಾಫಿ, ತಿಂಡಿ, ಟ್ರಾಮು ಬಸ್ಸುಗಳಿಗಾಗಿ ತಿಂಗಳಿಗೆ ಎಂಟು ಹತ್ತು ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತಿತ್ತು. ಒಟ್ಟಿಗೆ ತಿಂಗಳಿನ ಬಡ್ಜೆಟ್ಟು ೨೫-೩೦ ರೂಪಾಯಿಗಳು. ಆದರೆ ಅಷ್ಟನ್ನೂ ಬರವಣಿಗೆಯಿಂದ ಗಳಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಕೈಯಲ್ಲಿ ಕಾಸಿಲ್ಲದೆ ಅವರು ಎಷ್ಟೋ ದಿನ ಕಲ್ಕತ್ತೆಯ ಬೀದಿಗಳಲ್ಲಿ

ಅಲೆಯಬೇಕಾಗುತ್ತಿತ್ತು. ಹದಿನೈದು ದಿನಕ್ಕೊ, ತಿಂಗಳಿಗೋ ಹಣ ಜೋಡಿಸಲು ತಮ್ಮ ಹಳ್ಳಿಗೆ ಹೋಗುತ್ತಿದ್ದರು. ಈ ದಿನಗಳಲ್ಲಿ ಅವರ ಮನಸ್ಸಿನ ದ್ವಂದ್ವ ಉತ್ಕಟವಾಗಿತ್ತು. ಒಂದು ಕಥೆಗೆ ಐದು ರೂಪಾಯಿ ಸಂಭಾವನೆ ಕೊಡುವ ಪತ್ರಿಕೆಯೊಂದು ಕಲ್ಕತ್ತೆಯಲ್ಲಿತ್ತು. ಒಂದು ದಿನ ತಾರಾಶಂಕರರು ಅದರ ಸಂಪಾದಕನಿಗಾಗಿ ದಿನವೆಲ್ಲ ಕಾಯ್ದು, ನಿರಾಶರಾಗಿ, ಜಡಿಮಳೆಯಲ್ಲಿ ನೆನೆದುಕೊಂಡು ಮನೆಗೆ ನಡೆದು ಹೋದರು. ಹೋಗುವಾಗ ದಾರಿಯಲ್ಲಿ, ಅಕಸ್ಮಾತ್ ತಾವೇನಾದರೂ ನ್ಯುಮೋನಿಯಾ ಪೀಡಿತರಾಗಿ ಸತ್ತು ಹೋದರೆ ಒಂದೆರಡಾದರೂ ಚಿಕ್ಕ ಪುಟ್ಟ ಸಂತಾಪ ಸೂಚಕ ಸಭೆಗಳು ನಡೆಯಬಹುದೇನೋ ಎನ್ನಿಸುತ್ತಿತ್ತಂತೆ!

"ನಿಮಗೆ ಠಾಕೂರರ ಪರಿಚಯವಿತ್ತೆ?"

"ಓ! ಇಲ್ಲದೆ ಏನು? ಚೆನ್ನಾಗಿ ಗೊತ್ತು. ಒಂದು ವಿಧವಾಗಿ ನೋಡಿದರೆ ಸಾಹಿತ್ಯ ಕ್ಷೇತ್ರದಲ್ಲಿ ನಾನು ಸ್ಥಿರವಾಗಿ ನಿಲ್ಲಲು ಠಾಕೂರರೂ ಕಾರಣ. ನನ್ನ 'ರಾಯಕಮಲ' ನೀಳ್ಗತೆ 'ಛಲನ್ಮಯೀ' ಕಥಾ ಸಂಗ್ರಹ ಪ್ರಕಟವಾದಾಗ ಅವರು ಮೆಚ್ಚುಗೆ ಸೂಚಿಸಿ ಪತ್ರ ಬರೆದರು. ಈ ಮೆಚ್ಚುಗೆ ನನ್ನಲ್ಲಿ ಒಂದು ವಿಧವಾದ ಹೊಸ ಆಸೆಯನ್ನೂ ಭರವಸೆಯನ್ನೂ ಮೂಡಿಸಿತು. ಅವರು 'ರಾಯಕಮಲ'ವನ್ನು ಎಷ್ಟು ಮೆಚ್ಚಿಕೊಂಡಿದ್ದರೆಂದರೆ ನಾಟ್ಯ ನಿರ್ಮಾಪಕರೊಬ್ಬರಿಗೆ ಅದನ್ನು ರಂಗದ ಮೇಲೆ ತರಬೇಕೆಂದೂ ಹೇಳಿದ್ದರಂತೆ. ಅವರು ನನ್ನನ್ನು ಶಾಂತಿನಿಕೇತನಕ್ಕೂ ಆಹ್ವಾನಿಸಿದ್ದರು. ಬಹು ದೊಡ್ಡ ಜೀವ."

* * *

ತಾರಾಶಂಕರರು ಹಲವು ಪ್ರಖ್ಯಾತ ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳಲ್ಲಿ 'ಮನ್ವಂತರ', 'ಹಾಂಸೂಲಿ ಬಾಂಕೇರ್ ಉಪಕಥಾ', 'ಆರೋಗ್ಯ ನಿಕೇತನ', 'ನಾಗಿನೀ ಕನ್ಯಾರ್ ಕಾಹಿನಿ', 'ಕವಿ', 'ಸಪ್ತಪದಿ', 'ರಾಧಾ'—ಮುಂತಾದುವನ್ನು ಹೆಸರಿಸಬಹುದು. 'ಮನ್ವಂತರ' ೧೯೪೩ರ ಬಂಗಾಳದ ಕ್ಷಾಮವನ್ನು ಕುರಿತದ್ದು. ತಾರಾಶಂಕರರು ಆ ವೇಳೆಗೆ ಮಾರ್ಕ್ಸ್‌ವಾದಿಯಾಗಿದ್ದರು. ಅಂತೆಯೇ ಕಾದಂಬರಿಯ ನಾಯಕ-ನಾಯಕಿಯರು ಕೂಡ. ಮಹಾಯುದ್ಧದ

ಹಿನ್ನೆಲೆ, ಕಲ್ಕತ್ತೆಯ ನಗರ ಜೀವನ ಈ ಕೃತಿಯ ಹಾಸು. ವಾಸ್ತವವಾಗಿ ಗ್ರಾಮ ಜೀವನವನ್ನು ಬಿಟ್ಟು ನಗರ ಜೀವನದತ್ತ ತಾರಾಶಂಕರರ ಲೇಖಣಿ ಹರಿದದ್ದೇ ಇಲ್ಲಿ ಮೊದಲ ಬಾರಿಗೆ. ಸಮೃದ್ಧವಾದ ಗ್ರಾಮ ಜೀವನದ ವರ್ಣವೈಭವವನ್ನು ತುಂಬಿಕೊಂಡ 'ಹಾಂಸೂಲಿ ಬಾಂಕೇರ್ ಉಪಕಥಾ' ಮತ್ತು 'ನಾಗಿನೀ ಕನ್ಯಾರ್ ಕಾಹಿನಿ'ಗಳಲ್ಲಿ ಹಳ್ಳಿಯ ಹಾವಾಡಿಗರ ಗುಂಪಿನ ಜೀವನ, ಅವರ ದಿನ ನಿತ್ಯದ ಬವಣೆ ಚಿತ್ರಿತವಾಗಿವೆ. ನಗರಗಳು ಹಳ್ಳಿಗಳನ್ನು ನುಂಗಿಹಾಕುತ್ತವೆ; ಹೊಸ ಕಾಲದ ಜನ ಹಳೆಯದಕ್ಕೆಲ್ಲ ಎದುರಾಗಿ ನಿಲ್ಲುತ್ತಾರೆ; ವಂಚಕರ ಎದುರು ಉಗ್ರಹೋರಾಟ ನಡೆಯುತ್ತದೆ. ಪ್ರಾದೇಶಿಕತೆ ಈ ಕೃತಿಗಳಲ್ಲಿ ಅತ್ಯಂತ ಸಮರ್ಥವಾಗಿ ಮೈದೋರಿದೆ. ಕಾಡು ಕುಸುಮಗಳ ಸೌರಭವೂ, ಕಾಡುಹಕ್ಕಿಗಳ ನಾದವೂ, ಕೊಳೆತ ಎಲೆಗಳ ವಾಸನೆಯೂ ಇಲ್ಲಿ ಕಲೆಗಾರಿಕೆಗೆ ಜೀವತಂದಿವೆ. ಅಲೆಮಾರಿಗಳ ಮುಗ್ಧತೆ ನಮ್ಮನ್ನು ಮೋಹಿಸುತ್ತದೆ. ವಿಶಿಷ್ಟವಾದ ಬಂಗಾಳೀ ಆಡುನುಡಿಯನ್ನು ಈ ಕೃತಿಗಳಲ್ಲಿ ಬಳಸಲಾಗಿದ್ದು ಇದು ಅನುವಾದಕರಿಗೆ ದೊಡ್ಡ ತೊಂದರೆಗೆ ಕಾರಣವಾಗಿದೆ. 'ಕವಿ'ಯಲ್ಲಿ ಕವಿ ನಾಯಕನಾದರೆ, 'ಆರೋಗ್ಯ ನಿಕೇತನ' ದಲ್ಲಿ ಕವಿರಾಜ ನಾಯಕ. ಅವರ ಹಲವು ನಾಟಕಗಳು ರಂಗಭೂಮಿಯ ಮೇಲೆ ಅಪಾರ ಯಶಸ್ಸು ಗಳಿಸಿವೆ. ಒಂದು ಕಾಲದಲ್ಲಿ ಚಲನಚಿತ್ರ ಪ್ರಪಂಚ ದಲ್ಲಿ ಪ್ರತಿಯೊಬ್ಬರಿಗೂ ತಾರಾಶಂಕರರ ಕಥೆ ಬೇಕಾಗುತ್ತಿತ್ತು. ಅವರ 'ಕವಿ' ಅಪೂರ್ವ ಪ್ರಸಿದ್ಧಿ ಪಡೆಯಿತು. ಅದರ ಹಾಡನ್ನು ಗುನುಗದ ಬಂಗಾಳಿಯೇ ಇಲ್ಲವೇನೊ! ಇದರ ಫಲವಾಗಿ ಮುಂದೆ ತಾರಾಶಂಕರರು ಚಲನ ಚಿತ್ರಗಳ ಮೇಲೆ ಆಸಕ್ತರಾಗಿ ಸಿನಿಮಾಯ ಕಥೆಗಳನ್ನು ಬರೆದರೆಂದೂ ಒಂದು ಆಪಾದನೆಯಿದೆ.

ಜ್ಞಾನಪೀಠದ ಪ್ರಶಸ್ತಿ ತಾರಾಶಂಕರರನ್ನು ಅಖಿಲಭಾರತಕ್ಕೆ ಪರಿಚಯ ಮಾಡಿಕೊಟ್ಟಿದೆಯಾದರೂ ಬಹುಮಾನ ಪ್ರಶಸ್ತಿಗಳು ಅವರಿಗೆ ಹೊಸವಲ್ಲ. ೧೯೪೭ ರಲ್ಲಿ ಅವರ 'ಹಾಂಸೂಲಿ ಬಾಂಕೇರ್ ಉಪಕಥಾ' ಶರಶ್ಚಂದ್ರ ಸ್ಮಾರಕ ಪಾರಿತೋಷಕ ಪಡೆಯಿತು. 'ಆರೋಗ್ಯ ನಿಕೇತನ' ರವೀಂದ್ರ ಪ್ರಶಸ್ತಿಯನ್ನೂ, ಅಕೆಡೆಮಿ ಬಹುಮಾನವನ್ನೂ ಪಡೆದಿದೆ. ಕಲ್ಕತ್ತಾ ವಿಶ್ವವಿದ್ಯಾನಿಲಯ ಅವರಿಗೆ ಜಗತ್ತಾರಿಣೀ ಪದಕವನ್ನು ಗೌರವಿಸಿದೆ. ಅವರಿಗೆ

ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಲು ಅದೇ ವಿಶ್ವವಿದ್ಯಾನಿಲಯ ಈಚೆಗೆ ನಿರ್ಧರಿಸಿದೆ. ರಷ್ಯಾ, ಚೀನಾಗಳಲ್ಲಿ ಓಡಾಡಿರುವ ತಾರಾಶಂಕರರು ೧೯೫೫ರಲ್ಲಿ ಮದ್ರಾಸಿನಲ್ಲಿ ಕೂಡಿದ ಅಖಿಲ ಭಾರತ ಲೇಖಕರ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಆಫ್ರೋ ಏಷಿಯನ್ ಲೇಖಕರ ಸಂಘಟನೆಗಾಗಿಯೂ ಅವರು ಪ್ರಯತ್ನಿಸಿದರು. ೧೯೫೮ ರಲ್ಲಿ ತಾಷ್ಕೆಂಟಿನಲ್ಲಿ ಸೇರಿದ್ದ ಆಫ್ರೋ ಏಷಿಯನ್ ಲೇಖಕರ ಸಮ್ಮೇಳನದಲ್ಲಿ ಭಾರತೀಯ ನಿಯೋಗದ ನಾಯಕರಾಗಿ ಅವರು ಭಾಗವಹಿಸಿದ್ದರು. ಆಫ್ರೋ ಏಷಿಯನ್ ದೇಶಗಳನ್ನು ನುಂಗಿ ನೊಣೆಯುವ ಚೀನಾದ ಹೊಂಚನ್ನು ತಾರಾಶಂಕರರು ಈ ಸಮ್ಮೇಳನದಲ್ಲಿ ವಿಫಲಗೊಳಿಸಿ, ಪ್ರಬಲವಾಗಿ ವಿರೋಧಿಸಿದರು. ಸಮ್ಮೇಳನ 'ಹೌದಪ್ಪ'ಗಳ ಉತ್ಸವವಾಗದಂತೆ ತಾರಾಶಂಕರರು ನೋಡಿಕೊಂಡರು.

ಎಪ್ಪತ್ತು ತುಂಬಿದ ತಾರಾಶಂಕರರ ಆರೋಗ್ಯ ಅಷ್ಟೇನೂ ಚೆನ್ನಾಗಿಲ್ಲ. ಜೈಲಿನಿಂದ ಹೊರಬರುವಾಗಲೇ ಅವರ ಜೀರ್ಣಶಕ್ತಿ ಕುಂದಿತ್ತು. ಆರಂಭದ ದಿನಗಳಲ್ಲಿ ಹೋಟೆಲಿನ ಅಗ್ಗದ ಊಟ, ಬಿಡುವಿಲ್ಲದ ಶ್ರಮ, ಬೀಡಿ ಸೀಗರೇಟು—ಇನ್ನಷ್ಟು ತೊಂದರೆಕೊಟ್ಟು ಅವರ ಹೊಟ್ಟೆ ನೋವನ್ನು ಜಾಸ್ತಿ ಮಾಡಿವೆ. ಆದರೂ ಅವರ ಕ್ರಿಯಾಶಕ್ತಿ ಕುಂದಿಲ್ಲ. ಸತತವಾದ ಬರವಣಿಗೆಯ ಜೊತೆಗೆ ಈಗ ಅವರು ಚಿತ್ರಗಳನ್ನು ಬರೆಯುತ್ತಿದ್ದಾರೆ; ಮರದಲ್ಲಿ ಕೆತ್ತನೆ ಕೆಲಸ ಮಾಡುತ್ತಿದ್ದಾರೆ; ಶಿಲ್ಪದಲ್ಲಿ ಆಸಕ್ತರಾಗಿದ್ದಾರೆ.

ಬಂಗಾಳದ ಬೀರಭೂಮ್ ಜಿಲ್ಲೆಯ ಕರಿಯ ಮಣ್ಣಿಗೆ ಉಸಿರು ತುಂಬಿ, ಆಡುಮಾತಿಗೆ ಮಾಧುರ್ಯದ ಜೇನು ಹರಿಸಿರುವ ತಾರಾಶಂಕರರಿಗೆ ಜನತೆಯ ಪ್ರೀತಿ, ವಿಶ್ವಾಸ, ಆದರಗಳೇ ಸ್ಫೂರ್ತಿ, ಶಕ್ತಿ. ಅವರೇ ಒಂದುಕಡೆ ಹೇಳಿಕೊಂಡಿದ್ದಾರೆ: "ನಾನು ಸತ್ತಾಗ ನನ್ನ ದೇಶಬಾಂಧವರ ಕಣ್ಣುಗಳು ಹನಿಗೂಡಬೇಕು ಎಂಬುದೇ ನನ್ನ ಮಹದಾಶೆ."

# ಇಬ್ಬರು ಐರೋಪ್ಯ ಕಲಾವಿದರು

## ಗಿಯೊಟ್ಟೊ

ಇಟಲಿಯ ಗುಡ್ಡಗಾಡುಗಳ ದಾರಿಯೊಂದರಲ್ಲಿ ಕಲಾವಿದನೊಬ್ಬನು ಪಾದಚಾರಿಯಾಗಿ ಅಲೆಯುತ್ತಿರುವಾಗ, ಚಪ್ಪಟೆಯಾದ ದೊಡ್ಡ ಬಂಡೆಯೊಂದರ ಮೇಲೆ ಕಾಲು ಚಾಚಿ ಬಿದ್ದುಕೊಂಡಿದ್ದ ಕುರುಬ ಹುಡುಗನೊಬ್ಬನ ಬಳಿಸಾರಿದನು. ಆ ಹುಡುಗನು ಬಂಡೆಯ ಮೇಲೆ ಇದ್ದಲು ಚೂರಿನಿಂದ ಚಿತ್ರವನ್ನು ಬರೆಯುತ್ತಿದ್ದನು. ಕಲಾವಿದನು ಹುಡುಗನು ಬರೆಯುತ್ತಿದ್ದ ಚಿತ್ರದ ಕಡೆ ದೃಷ್ಟಿ ಹೊರಳಿಸಿ ತನ್ನ ಕಣ್ಣನ್ನು ತಾನೇ ನಂಬದಾದನು. ತಾನು ಕಂಡದ್ದರಲ್ಲೆಲ್ಲ ಅದು ಅತ್ಯಂತ ಸಹಜವಾದ ಕುರಿಯ ಪ್ರತಿರೂಪವಾಗಿತ್ತು.

'ನೀನು ಯಾರು ?' ಹುಡುಗನನ್ನು ಅವನು ಪ್ರಶ್ನಿಸಿದನು.

'ನನ್ನ ಹೆಸರು ಗಿಯೊಟ್ಟೊ' ಬಾಲಕ ಹೇಳಿದ: 'ನನ್ನ ತಂದೆ ಒಬ್ಬ ರೈತನಾಗಿದ್ದಾನೆ. ನಾನು ಅವನ ಮಂದೆಯ ಕಾವಲುಗಾರನಾಗಿದ್ದೇನೆ. ನಾವು ಅಲ್ಲಿ ವಾಸಮಾಡುತ್ತಿದ್ದೇವೆ.'

ಆ ಹುಡುಗನೂ ಕಲಾವಿದನೂ ಹೊಲದ ಮನೆಗೆ ಹೋದರು. ಕಲಾವಿದನು ಹುಡುಗನ ತಂದೆಯ ಬಳಿ ತುಂಬ ಹೊತ್ತು ಮಾತಾಡಿದನು; ಗಿಯೊಟ್ಟೊ ಅಸಮಾನ್ಯವಾದ ಕೌಶಲವನ್ನು ಹೊಂದಿದ್ದಾನೆಂದೂ, ಅವನಿಗೆ ಸರಿಯಾದ ಶಿಕ್ಷಣವನ್ನು ಕೊಡಬೇಕೆಂದೂ ಹೇಳಿದನು. ಕೊನೆಯಲ್ಲಿ, ಇಟಲಿ ದೇಶದ ಆ ಕಾಲದ ಅತ್ಯಂತ ಪ್ರಸಿದ್ಧ ಚಿತ್ರಕಾರನಾದ, ಆ ಕಲಾವಿದ ಸಿಮಾಬ್ಯೂ, ಗಿಯೊಟ್ಟೊವನ್ನು ತನ್ನ ಬಳಿ ಇಟ್ಟುಕೊಳ್ಳುವುದಾಗಿಯೂ ಹೇಳಿದ. ಹೇಗೆ ಚಿತ್ರಗಳನ್ನು ಬರೆಯಬೇಕೆಂದು ಕಲಿಯುತ್ತಿರುವಾಗ ಆ ಹುಡುಗನು ಬಣ್ಣಗಳನ್ನು ಅರೆಯುವುದು, ಕಲಸುವುದು, ಕುಂಚವನ್ನು ತೊಳೆಯುವುದು ಇವೇ ಮುಂತಾದ ಕೆಲಸಗಳನ್ನು ಮಾಡುತ್ತಿದ್ದನು.

ಜೀವಂತ ಪ್ರತಿರೂಪಗಳನ್ನು ಚಿತ್ರಿಸುವ ಆ ಹುಡುಗನ ಕಲಾಕೌಶಲ ಕಲೆಯ ಇತಿಹಾಸವನ್ನೇ ಬದಲಿಸುವುದಾಯಿತು. ಏಕೆಂದರೆ ಒರಟಾದ ಹಾಗೂ ನೀರಸವಾದ ಬೈಜಂಟೈನ್ ಕಲಾಸಂಪ್ರದಾಯದಿಂದ ವಾಸ್ತವವಾದ

ಮತ್ತು ನೈಜವಾದ ಮಾರ್ಗಕ್ಕೆ ಬಂದು, ಹದಿಮೂರನೆ ಶತಮಾನದ ಕೊನೆಯ ಭಾಗದಲ್ಲಿ ಮತ್ತು ಹದಿನಾಲ್ಕನೆ ಶತಮಾನದ ಮೊದಲ ಭಾಗದಲ್ಲಿ ನೂತನ ಕಲಾಪಂಥವನ್ನೇ ನಿರ್ಮಿಸಿದವನು— ಗಿಯೊಟ್ಟೊ.

ಅವನು ತಾನು ಏನನ್ನು ಕಂಡನೋ ಅದರ ಮೇಲೆ ತನ್ನ ಚಿತ್ರಗಳನ್ನು ಅವಲಂಬಿಸಿದ. ಅವನು ಒಂದು ಮರವನ್ನು ಚಿತ್ರಿಸಿದರೆ ಉದ್ದ ಅಗಲ ದಪ್ಪಗಳ ಆಯಕಟ್ಟಿನಲ್ಲಿ ಅದು ಮರದಂತೆಯೇ ತೋರುತ್ತಿತ್ತು. ಅವನು ಚಿತ್ರಿಸಿದ ಮನುಷ್ಯವ್ಯಕ್ತಿಗಳು ಸಹಜವಾಗಿ ತೋರುತ್ತಿದ್ದರು. ಅವರು ಯಾವ ವರ್ಗದ ಜನರೆಂಬುದನ್ನು ನೀವು ಅವರ ಮುಖಗಳಲ್ಲಿಯೇ ಗುರುತಿಸಬಹುದಾಗಿತ್ತು. ಅಲ್ಲದೆ ಅವರ ರಾಗಭಾವಗಳನ್ನು ಕೂಡ ನೀವು ಗಮನಿಸಬಹುದಾಗಿತ್ತು: ಭಯ, ದುಃಖ, ಸಂತೋಷ, ಪ್ರೇಮ. ಗಿಯೊಟ್ಟೊವಿನ ಚಿತ್ರಗಳು ಕಣ್ಣಿಗೆ ಬೀಳಲಾರಂಭವಾದ ದಿನದಿಂದ ಉಳಿದ ಕಲಾವಿದರು ಅವನನ್ನು ಅನುಕರಿಸಿದರು. ಮುಂದಿನ ಕಾಲದ ಅಪ್ರತಿಮ ಕಲಾವಿದರಾದ ರ‍್ಯಾಫೆಲ್, ಲಿಯೋನಾರ್ಡೊಡಾ ವಿಂಚಿ, ಮೈಕೆಲ್‌ಏಂಜಲೋ-ಇವರೆಲ್ಲ ಚಿತ್ರಕಲಾ ಮಾರ್ಗದಲ್ಲಿನ ಅವನ ನವೀನ ಮಾರ್ಗಕ್ಕೆ ತಾವು ಋಣಿಗಳಾದುದನ್ನು ಒಪ್ಪಿಕೊಂಡರು.

ತನ್ನ ಸಮಕಾಲೀನರಾದ ಬಹು ಜನರಂತೆ ಗಿಯೊಟ್ಟೊ ದೃಢ ಧಾರ್ಮಿಕ ವ್ಯಕ್ತಿಯಾಗಿದ್ದನು. ಧಾರ್ಮಿಕ ಪ್ರವಾಹವೊಂದು ಯೂರೋಪನ್ನು ಆವರಿಸಿತ್ತು. ಸಹಸ್ರಾರು ಸ್ತ್ರೀಪುರುಷರು ಧರ್ಮಶ್ರದ್ಧೆಯ ಪವಿತ್ರ ರಹಸ್ಯಗಳಿಗೆ ಮಾರುಹೋಗಿದ್ದರು. ಗಿಯೊಟ್ಟೊ ಹುಟ್ಟುವುದಕ್ಕಿಂತ ಹೆಚ್ಚು ಕಡಮೆ ಅರ್ಧ ಶತಮಾನದ ಮೊದಲೇ ತೀರಿಹೋಗಿದ್ದ ಅಸ್ಸಿಸಿಯ ಫ್ರಾನ್ಸಿಸನ ಪ್ರಭಾವವೇ ಇದಕ್ಕೆ ಬಹುಮಟ್ಟಿಗೆ ಕಾರಣವಾಗಿದ್ದಿತು. ಫ್ರಾನ್ಸಿಸನು ಒಬ್ಬ ಶ್ರೀಮಂತ ವರ್ತಕನ ಮಗನಾಗಿದ್ದನು. ಅವನು ತನ್ನ ಪಾಲಿಗಿದ್ದುದನ್ನೆಲ್ಲ ದಾನಮಾಡಿ ಮುಂದಕ್ಕೆ ಸರಳ ಉಡುಗೆಯಲ್ಲಿ, ಬರಿ ಕಾಲಿನಲ್ಲಿ ಸಂಚರಿಸಿ ಬಾಳಿದನು.

ಬೇರೆಯವರಿಗೆ ಸಹಾಯಮಾಡುವುದರಲ್ಲಿ—ಅದರಲ್ಲೂ ಅತ್ಯಂತ ದುಃಖಿಗಳಾದ, ನಿರ್ಗತಿಕರು, ಅಸ್ಪೃಶ್ಯರು, ಕುಷ್ಠರೋಗಿಗಳು ಇವರಿಗೆ ನೆರವು ನೀಡುವುದರಲ್ಲಿ ನಿರತನಾದನು. ಪ್ರೇಮವೇ ದೇವರೆಂಬುದನ್ನು ಅವನು ತನ್ನ ಸ್ವಂತ ಉದಾಹರಣೆಯಿಂದ ತೋರಬಯಸಿದನು. ಹಾಗೆ ಮಾಡುವುದರಲ್ಲಿ ತಾನೇ

ಆ ಕಾಲದ ಅತ್ಯಂತ ಪ್ರಿಯವ್ಯಕ್ತಿಯಾಗಿ ಪರಿಣಮಿಸಿದನು. ಅವನು, ತೀರಿ ಕೊಂಡ ಎರಡು ವರ್ಷಗಳಲ್ಲಿ, ಧರ್ಮಗ್ರಂಥಗಳಲ್ಲಿ ಅನುಶಾಸನಗೊಂಡನು.

ಅಸ್ಸಿಸಿಯಲ್ಲಿ ಒಂದು ಚರ್ಚನ್ನು ಕಟ್ಟಿ ಅದಕ್ಕೆ ಈ ಸಂತನ ಹೆಸರಿಡಲಾಯಿತು. ಅದರ ನಿರ್ಮಾಣ ಮುಗಿದ ಮೇಲೆ ಒಳಗಿನ ಗೋಡೆಗಳಲ್ಲಿ ಸಂತ ಫ್ರಾನ್ಸಿಸನ ಜೀವನದ ಕಥೆಯನ್ನು ಚಿತ್ರಿಸಲು ಸಹಾಯಮಾಡುವಂತೆ ಗಿಯೊಟ್ಟೊವಿಗೆ ಕರೆ ಬಂತು. ವಿವಿಧ ವರ್ಣಗಳಲ್ಲಿ ನಿರ್ಮಾಣವಾಗಬೇಕಾದದ್ದು ಫ್ರಾನ್ಸಿಸನ ಜೀವನದ ಇಪ್ಪತ್ತೆಂಟು ದೃಶ್ಯಗಳು. ಆ ಗೋಡೆಯ ಚಿತ್ರಗಳ ಅನಾವರಣವಾದೊಡನೆಯೇ, ಮೂರ್ತಿವತ್ತಾದ ಆ ಚಿತ್ರಗಳನ್ನು ಜನ ಬಾಯಿಬಿಟ್ಟು ನೋಡಿದರು; ವಿಸ್ಮಯ ಮೂಕರಾದರು. ಅಂಥ ಚಿತ್ರಗಳನ್ನು ಹಿಂದೆಂದೂ ಕಂಡಿರಲಿಲ್ಲ. ಆರು ಶತಮಾನಗಳ ಅನಂತರ, ಲೋಕದ ವಿವಿಧ ಭಾಗಗಳಿಂದ ಪ್ರಯಾಣಿಕರು ಇಂದಿಗೂ ಚರ್ಚಿನೊಳಕ್ಕೆ ನುಗ್ಗಿ ಆ ಚಿತ್ರಗಳೆದುರು ನಿಂತು ಚಕಿತರಾಗಿ, ಗೌರವದಿಂದ ನೋಡುತ್ತಾರೆ.

ಇಪ್ಪತ್ತೆಂಟು ಚಿತ್ರಗಳಲ್ಲಿ ತುಂಬ ಪ್ರಸಿದ್ಧವಾಗಿರುವುದು, ಸಂತ ಫ್ರಾನ್ಸಿಸನು ಪಕ್ಷಿಗಳಿಗೆ ಉಪದೇಶಿಸುತ್ತಿರುವುದು! 'ನನ್ನ ಸೋದರರಾದ ಪಕ್ಷಿಗಳೇ' ಎಂದು ಫ್ರಾನ್ಸಿಸನು ಸಂಬೋಧಿಸಿದನೆಂದೂ, ಪಕ್ಷಿಗಳು ತಮಗೆ ಆಲೋಚನಾ ಶಕ್ತಿ ಇರುವ ಹಾಗೆ ವರ್ತಿಸಿ ಅವನನ್ನು ಸ್ವಾಗತಿಸಿ ಅವನ ಉಪದೇಶವನ್ನು ಕೇಳಿದವೆಂದೂ ಹೇಳಲಾಗಿದೆ. ಸಂತ ಫ್ರಾನ್ಸಿಸನ ಪುರಾಣಕಥೆಯಲ್ಲಿ ವ್ಯಕ್ತವಾಗಿರುವ ವಿಶ್ವಪ್ರೇಮವನ್ನು ಈ ಚಿತ್ರ ಅಸದೃಶವಾಗಿ ಸಾರುತ್ತದೆ.

ಗಿಯೊಟ್ಟೊವಿನ ಅದ್ಭುತವಾದ ಹೃದಯ-ಬುದ್ಧಿಗಳ ಸಂಗಮವು ಅವನನ್ನು ತನ್ನ ಕಾಲದ ಅದ್ವಿತೀಯ ಕಲಾವಿದನನ್ನಾಗಿ ಮಾಡಿತು. ಕೀರ್ತಿ, ಹೊಗಳಿಕೆ, ಮೆಚ್ಚುಗೆಗಳು ಅವನೆಡೆಗೆ ಹರಿದುಬಂದುವು. ರಾಜ ಮಹಾರಾಜರು ಅವನನ್ನು ತಮ್ಮ ಅರಮನೆಗೆ ಆಹ್ವಾನಿಸಿದರು; ಸಂಪತ್ತಿನ ಆಶೆ ತೋರಿದರು; ಕೆಲಸ ಹೇಳಿದರು. ಗಿಯೊಟ್ಟೊ ಚಂಚಲಿತನಾಗಲಿಲ್ಲ. ಅವರಿಗಾಗಿ ಚಿತ್ರಿಸಿದನು. ತನ್ನ ಹೆಂಡತಿ ಮತ್ತು ಆರು ಜನ ಮಕ್ಕಳನ್ನು ಸುಖವಾಗಿರಿಸಲು ಬೇಕಾದಷ್ಟು ಹಣವನ್ನು ಸ್ವೀಕರಿಸಿದನು. ಆದರೆ ಅವನು ತನ್ನ ಗಾಂಭೀರ್ಯವನ್ನೆಂದಿಗೂ ಕಳೆದುಕೊಳ್ಳಲಿಲ್ಲ. ಇತರ ಕಲಾವಿದರು ಅವನನ್ನು ಗುರುವೆಂದು ಕರೆಯಲು ಯತ್ನಿಸಿದಾಗ ಅವನು ಅದಕ್ಕೆಂದಿಗೂ ಆಸ್ಪದ ಕೊಡಲಿಲ್ಲ.

ಚಿತ್ರಕಲೆಯಲ್ಲಿ ಗಿಯೊಟ್ಟೊ ಅಸಮಾನವಾದ ಮಹತ್ತನ್ನು ಗಳಿಸಿದರೂ, ಇನ್ನಿತರಕಲೆಗಳಲ್ಲಿ ಅವನು ಪರಿಣತನಾಗಿದ್ದನು. ಅವನು ಶಿಲ್ಪಿಯಾಗಿದ್ದನು, ಸಂಗೀತಿಯಾಗಿದ್ದನು, ಕವಿಯಾಗಿದ್ದನು, ಅವನಿಗೆ ಸಂದ ಗೌರವಗಳಲ್ಲೆಲ್ಲ ಬಹುಶಃ ಅತಿಮಹತ್ವದ್ದೆಂದರೆ ಫ್ಲಾರೆನ್ಸಿನ ಪುರಪಿತೃಗಳು ಮಾಡಿದ ನಿರ್ಣಯ ವೆಂದು ತೋರುತ್ತದೆ. ಅವನು ತಮ್ಮಲ್ಲಿ ಬಂದಿರಬೇಕೆಂದೂ, ಅದರಿಂದ ಅವನ ಅಪಾರ ಜ್ಞಾನದ ಉಪಯೋಗ ತಮ್ಮ ಜನರಿಗಾಗುತ್ತದೆಂದೂ ಆ ನಿರ್ಣಯದಲ್ಲಿ ಅವನನ್ನು ಆಹ್ವಾನಿಸಲಾಗಿತ್ತು. ಈ ಆಹ್ವಾನವನ್ನು ಅವನು ಒಪ್ಪಿಕೊಂಡಾಗ ಫ್ಲಾರೆನ್ಸ್ ಅವನಿಗೆ 'ಪುರಶಿಲ್ಪಿ' ಎಂಬ ಬಿರುದನ್ನು ನೀಡಿ, ಗೋಪುರ ನಿರ್ಮಾಣದ ಕೆಲಸವೊಂದನ್ನು ಅವನಿಗೆ ಒಪ್ಪಿಸಿತು. ಅದು ಇಂದಿಗೂ ಜಗತ್ತಿನ ಅತ್ಯಂತ ಪ್ರಮುಖ ಘಂಟಾಗೋಪುರಗಳಲ್ಲಿ ಒಂದಾಗಿದೆ.

ತನ್ನ ಜೀವನದ ಏಳನೆಯ ದಶಕದಲ್ಲಿ ಗಿಯೊಟ್ಟೊ ತೀರಿಕೊಂಡಾಗ ಕಲಾ ವಿಮರ್ಶಕರಿಂದ ಹೇಗೋ ಹಾಗೆಯೇ ಸಾಮಾನ್ಯ ಜನರಿಂದಲೂ ಗೌರವ ಗೊಂಡನು. ಕುರುಬ ಹುಡುಗನಾಗಿದ್ದರೂ, ಕಲೆಯ ಇತಿಹಾಸವನ್ನೇ ಬದಲಿ ಸಿದ ಈ ಪ್ರಸಿದ್ಧ ಕಲಾವಿದನ ಪವಿತ್ರ ಸಮಾಧಿಯಮೇಲೆ ಈ ಮಾತುಗಳನ್ನು ಕೆತ್ತಲಾಗಿದೆ:

"....ಯಾರ ಬಲಗೈಗೆ ಸರ್ವವೂ ಸಾಧ್ಯವಾಗಿತ್ತೋ, ಸತ್ತ ಚಿತ್ರಕಲೆ ಯಾರಿಂದ ಜೀವಂತವಾಯಿತೋ; ಯಾರಿಂದ ಕಲೆ ನಿಸರ್ಗದಲ್ಲಿ ಒಂದಾ ಯಿತೋ, ಆ ನಾನು—ಗಿಯೊಟ್ಟೊ."

## ಚೊಪಿನ್

ರಾತ್ರಿಯ ವೇಳೆ. ತೇಲುಮೋಡಗಳ ನಡುವಿನಿಂದ ಬೆಳುದಿಂಗಳು ಇಣುಕುತ್ತಿದೆ. ಪೋಲೆಂಡಿನ ಗೌರ್ನರನಾದ ಗ್ರಾಂಡ್ ಡ್ಯೂಕ್ ಕಾನ್ ಸ್ಟಾಂಟೆನ್ನನ ಶ್ರೀಮಂತಗೃಹದ ಅಂಗಳದೊಳಗೆ ಏದುಸಿರು ಬಿಡುತ್ತಿದ್ದ ನಾಲ್ಕುಕುದುರೆಗಳಿಂದ ಎಳೆಯಲ್ಪಡುವ ಗಾಡಿಯೊಂದು ದಡಬಡನೆ ಬಂದಿತು.

ಸಪ್ಪೆ ಮುಖದೊಳಗಿನ ದೊಡ್ಡ ಕಣ್ಣುಗಳ, ಸಣಕಲಾದ ಹತ್ತು ವರ್ಷಗಳ ಹುಡುಗನೊಬ್ಬ ಹೊರಬಿದ್ದು ಮನೆಯ ಒಳಗೆ ಧಾವಿಸಿ, ಸಣ್ಣ ಚೌಕಿಯ ಮಾರ್ಗವಾಗಿ ಮಂದ ಬೆಳಕಿನ ಕೋಣೆಯೊಂದಕ್ಕೆ ಹೋದನು.

ಅಲ್ಲಿ ಡ್ಯೂಕನು ಅಗ್ಗಿಸ್ಟಿಕೆಯ ಮಗ್ಗುಲಿಗೆ ಕುಳಿತಿದ್ದನು. ಅವನು ಯಾವುದೋ ಕಾಯಿಲೆಯಿಂದ ನರಳುತ್ತಿದ್ದನು. ಆ ಕಾಯಿಲೆ ವಿಷಮ ಗೊಂಡ ಸಂದರ್ಭಗಳಲ್ಲಿ ಹುಚ್ಚನ ಪಾಶವೀ ಪ್ರವೃತ್ತಿಯನ್ನೂ ಪಿಶಾಚಿಯ ಕೋಪವನ್ನೂ ಹೊಮ್ಮಿಸುತ್ತಿತ್ತು. ಈಗ ಅವನ ಕಣ್ಣುಗಳು ತೀವ್ರಾಭಿಲಾಷೆ ಯಿಂದ ದಿಟ್ಟಿಸುತ್ತಿದ್ದವು; ಕೈಗಳು ಕುರ್ಚಿಯನ್ನು ಅಮುಕಿದ್ದವು. ಬಾಲಕನು ತುದಿಗಾಲಿನಮೇಲೆ ಪಿಯಾನೋದತ್ತ ನಡೆದನು.

ಒಂದೇ ಕ್ಷಣದಲ್ಲಿ ನವುರಾದ, ಮಧುರ ಸಂಗೀತದ ಅಲೆಗಳು ಹರಡಿ ಕೊಂಡವು; ಆಕರ್ಷಕವಾದ ಹಳೆಯ ರಾಗವಿನ್ಯಾಸಗಳು; ಸೂಕ್ಷ್ಮ ಆಲಾಪನೆ; ಗೆಜ್ಜೆಯ ನಿನಾದದಂತೆ ಮನೋಜ್ಞವಾದ ಸ್ವರಮೇಳ. ನಿಮಿಷ ಗಳುರುಳಿದುವು. ಡ್ಯೂಕನಲ್ಲಿ ಅಮೋಘವಾದ ಪರಿವರ್ತನೆ ತೋರಿಬಂದಿತು. ದೃಷ್ಟಿ ಬದಲಾಯಿತು; ಕೈಗಳ ಹಿಡಿತ ಸಡಿಲಾಯಿತು. ಪಿಯಾನೋ ಸಂಗೀತದಿಂದ ಮಾತ್ರ ಈ ಯಕ್ಷಿಣಿ ನಡೆಯಿತು; ಅದೇ ಅವನನ್ನು ರೋಗದ ವಿಷಮತೆಯಿಂದ ರಕ್ಷಿಸಲು ಸಾಧ್ಯ. ಬಾಲಕ ಫ್ರೆಡ್ರಿಕ್ ಚೊಪಿನ್ನನೇ ಪಿಯಾನೋ ವಾದ್ಯ ಬಾರಿಸಬೇಕು. ಭೂತಹಿಡಿದ ಪ್ರಾಣಿಯನ್ನು ಸಾಂತ್ವನ ಗೊಳಿಸಲು ಚಿಕ್ಕ ಬಾಲಕನನ್ನು ಆಗಿಂದಾಗ್ಗೆ ಕರೆಸಲಾಗುತ್ತಿತ್ತು.

ಫ್ರೆಡ್ರಿಕ್ ಫ್ರಾನ್‌ಸ್ವಾ ಚೊಪಿನ್ನನ ಜೀವನವ ಹಲವಾರು ಕಾವ್ಯಮಯ ಪುಟಗಳಲ್ಲಿ ಈ ಕಥೆಯು ಕೇವಲ ಒಂದು, ಅಷ್ಟೆ. ಚೊಪಿನ್ನನ ಹೆಸರು ಅನುಪಮ ಸಂಗೀತದ ಸಂಕೇತವಾಗಿದೆ; ಈ ಸಂಗೀತ ನೂರು ವರ್ಷಗಳ ಹಿಂದೆ ಅವನು ಸೃಜಿಸಿದಾಗ ಇದ್ದಂತೆಯೇ ಇಂದೂ ಸ್ಫೂರ್ತಿಯುತವಾಗಿದೆ. ಹೊಚ್ಚಹೊಸತಾಗಿದೆ.

ವಾರ್ಸಾದ ಸಮೀಪದಲ್ಲಿನ ಜಹಗೀರಿ ಮನೆಯೊಂದರಲ್ಲಿ ಚೊಪಿನ್ ೧೮೧೦ ರ ಫೆಬ್ರವರಿ ೨೨ ರಂದು ಹುಟ್ಟಿದನು. ಅವನ ತಂದೆ, ನಿಕೊಲಾಸ್ ಚೊಪಿನ್, ತನ್ನ ಅದೃಷ್ಟವನ್ನು ಅರಸಿಕೊಂಡು ಲೊರೈನ್‌ನಿಂದ ಬಂದಿದ್ದನು. ಪೋಲೆಂಡಿನಲ್ಲಿ ಅವನಿಗೆ ಶಿಕ್ಷಕನ ಕೆಲಸವೊಂದು ದೊರೆಯಿತು.

ಗೌರವ ಮನೆತನದ ನೀಲಿಕಣ್ಣುಗಳ ಸುಂದರ ತಲೆಗೂದಲಿನ ಚೆಲುವೆಯೊಬ್ಬಳನ್ನು ಅವನು ಸಂಧಿಸಿದನು. ಅವಳು ಪಿಯಾನೋ ನುಡಿಸಿದಳು; ಅವನು ಕೊಳಲು ಬಾರಿಸಿದನು. ನಾಲ್ಕು ವರ್ಷಗಳ ಪ್ರಣಯದ ನಂತರ ಅವರಿಬ್ಬರೂ ಮದುವೆಯಾದರು.

ಅವರಿಗೆ ನಾಲ್ಕುಜನ ಮಕ್ಕಳಿದ್ದರು. ಫ್ರೆಡ್ರಿಕ್ ಎರಡನೆಯವನು. ತಮ್ಮ ಮಗನಲ್ಲಿ ಸಂಗೀತದ ಅಭಿರುಚಿ ಅರಳುತ್ತಿರುವುದನ್ನು ಕಂಡು ತಂದೆತಾಯಿಗಳು ಸಂತೋಷಿಸಿದರು. ತನ್ನ ಆರನೆಯ ವರ್ಷದ ವೇಳೆಗೆ ಫ್ರೆಡ್ರಿಕ್ ಚಿಕ್ಕ ಕೃತಿಗಳನ್ನು ರಚಿಸಿದ್ದನು; ಎಂಟನೆಯ ವರ್ಷಕ್ಕೆ ಸಾರ್ವಜನಿಕ ಕಛೇರಿಯೊಂದರಲ್ಲಿ ಪಿಯಾನೋ ನುಡಿಸಿದನು.

ಅವನ ಪಿಯಾನೋ ಶಿಕ್ಷಕ ಸಂಗೀತ ರಚನೆಗೆ ಪ್ರೋತ್ಸಾಹ ಕೊಟ್ಟನು. ಪೊಲನಾಜ್[1] ಮತ್ತು ಮಜೂರ್ಕ[2]ಗಳು ತನ್ನ ತಾಯ್ನಾಡಿನ ರೈತಾಪಿ ಜನರ ನೃತ್ಯಗಳ ಹಾಗೂ ವಾಲ್ಟ್ಸ್[3] ಮತ್ತು ಮಿನುಯೆಟ್[4] ಮಾದರಿಯನ್ನನುಸರಿಸಿದವು. ಮುಂದೆ ಚೊಪಿನ್ನನು ವಾರ್ಸಾದ ಸಂಗೀತ ಕಲಾಶಾಲೆಯಲ್ಲಿ ಅಧ್ಯಯನ ಮಾಡುತ್ತಿದ್ದಾಗ, ಅವನ ಪ್ರಾಧ್ಯಾಪಕರೊಬ್ಬರು ಗೀತರೂಪಕಗಳನ್ನು ರಚಿಸುವಂತೆ ಮನವೊಲಿಸಲು ಪ್ರಯತ್ನಿಸಿದರು. ವಾದ್ಯಮೇಳಗಳಿಗಾಗಿ, ಕಥನನಿರೂಪಣೆಗಾಗಿ, ಚತುರ್ವಾದ್ಯದ ಜೊತೆಗಾಗಿ ರಚಿಸಲೂ ಕೂಡ ಪ್ರೋತ್ಸಾಹಿಸಿದರು. ಆದರೆ ಚೊಪಿನ್ನನಿಗೆ 'ಸ್ಫೂರ್ತಿ' ಬರಲಿಲ್ಲ. ಅವನ ಸಂಗೀತಾಭಿವ್ಯಕ್ತಿಗಾಗಿ ಪಿಯಾನೊ ಇತ್ತು; ಅದೇ ಮುಂದೆಯೂ ಉಳಿಯಿತು.

ಯಶಸ್ಸು ಆರಂಭದಲ್ಲಿಯೇ ದೊರೆಯಿತು. ಉದಿತೋದಿತ ಪಿಯಾನೋ ವಾದಕನಾಗಿ ಚೊಪಿನ್ ತನ್ನ ಶ್ರಾವಕರನ್ನು ಭಾವೋದ್ರೇಕಗೊಳಿಸಿ, ಹೂಮಳೆಗರೆಯುವಂತೆ, ಪ್ರಶಂಸೆಯನ್ನು ಸುರಿಸುವಂತೆ ಮಾಡಿದನು. ಹದಿನೈದನೆ ವಯಸ್ಸಿಗಾಗಲೆ ಅವನು ಪ್ರಸಿದ್ಧಿಗೆ ಬಂದ ರಚಕನಾಗಿದ್ದು,

---

1. ಪೊಲನಾಜ್: ಹೆಚ್ಚುಕಡಮೆ ಮೆರವಣಿಗೆ ರೂಪದಲ್ಲಿರುವ ಪೋಲೆಂಡಿನ ರಾಷ್ಟ್ರೀಯ ನೃತ್ಯ; 2. ಮಜೂರ್ಕ: ಇನ್ನೊಂದು ಬಗೆಯ ಪೋಲೆಂಡಿನ ನೃತ್ಯ; 3. ವಾಲ್ಟ್ಸ್: ದಂಪತಿಗಳ ನರ್ತನಶಾಲೆಯ ನೃತ್ಯ: 4. ಮಿನುಯೆಟ್; ಫ್ರಾನ್ಸ್‌ನಲ್ಲಿ ೧೭ನೇ ಶತಮಾನದಲ್ಲಿ ಪ್ರಚಾರಕ್ಕೆ ಬಂದ ದಂಪತಿಮೇಳನೃತ್ಯ.

ವಾರ್ಸಾವ ಉಚ್ಚವರ್ಗದಲ್ಲೆಲ್ಲ ಅಚ್ಚುಮೆಚ್ಚಾಗಿದ್ದನು. ಆದರೆ ಬೇಗನೆ ವಾರ್ಸಾ ಅವನಿಗೆ ಸೀಮಿತಗೊಳ್ಳಲು ತೊಡಗಿತು. ಚೊಪಿನ್ ತನ್ನೊಬ್ಬ ಸ್ನೇಹಿತನೊಡನೆ ಬರ್ಲಿನ್ನಿನಲ್ಲಿ ಕೆಲವು ದಿನಗಳನ್ನು ಕಳೆದು ಬಂದಿದ್ದು, ಅಲ್ಲಿ ಹೆಚ್ಚು ಮೋಹಕವಾದ ಸಂಗೀತ ಜೀವನದ ರುಚಿ ಕಂಡಿದ್ದನು.

ಮರುವರ್ಷ ೧೮೨೯ ರಲ್ಲಿ ಅವನು ವಿಯೆನ್ನಾಕ್ಕೆ ಭೇಟಿಕೊಟ್ಟಾಗ ಎರಡು ಕಛೇರಿಗಳನ್ನು ನಡೆಸಿದನು. ಈ ಕಛೇರಿಗಳನ್ನು ನಾಜೂಕಿನ ಆದರೆ ಅಷ್ಟೇನು ಅನುಕೂಲವಿಲ್ಲದ ಸದ್ಗೃಹಸ್ಥ ವೆನ್‌ಜೆಲ್ ವೊನ್ ಗ್ಯಾಲಿನ್ ಬರ್ಗ್ ಎಂಬಾತನು ವ್ಯವಸ್ಥೆಗೊಳಿಸಿದ್ದನು. ಅವನು ಚೊಪಿನ್ನನನ್ನು ಕಾಸಿಲ್ಲದೆ ಕಛೇರಿ ನಡೆಸುವಂತೆ ಮನವೊಲಿಸಿದ್ದನು. ಶ್ರಾವಕರಂತೂ 'ಭಯಂಕರ ಹರ್ಷೋದ್ಗಾರ' ಮಾಡಿದರು. ಶೋಭಾಯಮಾನವಾದ ಬದುಕಿಗೆ ಬಾಗಿಲುಗಳು ತೆರೆಯುವಂತೆ ತೋರಿತು. ಊರಿಗೆ ಹಿಂದಿರುಗಿ ಬರುವಾಗ ಚೊಪಿನ್ ಉತ್ಸಾಹದಿಂದ ತುಂಬಿ ತುಳುಕುತ್ತಿದ್ದನು.

ಅವನು ವಾರ್ಸಾದಲ್ಲಿ ಮನೆಮಾತಾಗಿದ್ದನು. ಆದರೆ ಅವನಿಗೆ ಬರ್ಲಿನ್ನಿನಲ್ಲಿ, ವಿಯೆನ್ನಾದಲ್ಲಿ, ಎಲ್ಲಕ್ಕೂ ಮಿಗಿಲೆಂದರೆ ಪ್ಯಾರಿಸ್ಸಿನಲ್ಲಿ ಮನೆಮಾತಾಗುವುದು ಬೇಕಿತ್ತು. ಅವನು ವಿಯೆನ್ನಾಕ್ಕೆ ಇನ್ನೊಮ್ಮೆ ಭೇಟಿ ಕೊಡಬೇಕೆಂದು ನಿರ್ಧಾರವಾಯಿತು. ವಾರ್ಸಾವನ್ನೂ, ತನ್ನ ಕುಟುಂಬದವರನ್ನೂ ಬಿಡಬೇಕಾಗಿ ಬಂದಾಗ, ತನ್ನ ಬಯಕೆಗಾಗಿ, ಚೊಪಿನ್ ದುಃಖಗೊಂಡು ಹತಾಶನಾದನು. "ನಾನು ಸಾಯಲು ಹೋಗುತ್ತಿದ್ದೇನೇನೋ ಎಂದು ನನಗೆ ಭಾಸವಾಗುತ್ತಿದೆ" ಎಂಬುದಾಗಿ ಅವನು ಬರೆದಿದ್ದಾನೆ.

೧೮೩೦ ರ ನವಂಬರ್ ೧ ರಂದು ಅವನು ನಗರದಿಂದ, ಕಣ್ಣೀರು ಸುರಿಸುತ್ತಾ, ಹೊರಹೊರಟಾಗ ಗಾಯಕಗೆಳೆಯರ ಒಂದು ಮೇಳವೂ, ನಗರವಾಸಿಗಳೂ ಅವನನ್ನು ಹಿಂಬಾಲಿಸಿದರು. ತನ್ನ ತಾಯ್ನಾಡಿಗೆ ಅವನು ಮತ್ತೆ ಹಿಂದಿರುಗಲೇ ಇಲ್ಲ.

ವಿಯೆನ್ನಾ, ಅವನು ಆಶಿಸಿದ್ದ ಸ್ವರ್ಗವಾಗಿರಲಿಲ್ಲ. ಸದ್ಗೃಹಸ್ಥ ಗ್ಯಾಲಿನ್ ಬರ್ಗನು ಈಗ ದಿವಾಳಿಯಾಗಿದ್ದು, ಚೊಪಿನ್ನನಿಗೆ ಸಹಾಯ ಮಾಡುವಂತಿರಲಿಲ್ಲ. ಕಾಗದಗಳಲ್ಲಿ ಉತ್ತೇಜಕರಾಗಿದ್ದ ಪ್ರಕಾಶಕರನ್ನು ಮುಖತಃ ಕಂಡಾಗ ಅವರು ತಣ್ಣಗಾಗಿದ್ದರು. ರಷ್ಯನ್ ಭೂಮಾಲಿಕರ ವಿರುದ್ಧ

ಪೋಲಿಷ್ ಜನತೆ ದಂಗೆ ಎದ್ದ ವಾರ್ತೆಯೂ ಊರಿನಿಂದ ಬಂದಿತ್ತು.

ರಷ್ಯನ್ನರಿಗೆ ಎದುರಾಗಿ ಹೋರಾಡಲು ಚೊಪಿನ್ ಅಪೇಕ್ಷಿಸಿದನು. ಆದರೆ ಅವನ ತಂದೆ ಈ ಹೋರಾಟಕ್ಕೆ ಅವನು ತೀರ ದುರ್ಬಲನೆಂದು ತಿಳಿಸಿ ಪ್ಯಾರಿಸ್ಸಿಗೆ ಹೋಗಲು ಸಾಧ್ಯವಾಗುವಂತೆ ಹಣ ಕಳಿಸಿಕೊಟ್ಟನು. ವಾರ್ಸಾ ಪತನದ ಸುದ್ದಿ ಬರುವುದಕ್ಕೆ ಕೆಲವೇ ದಿನಗಳ ಮೊದಲು ಹಣ ಕೈಸೇರಿತು. ಈ ಸೋಲು ಸಹಿಸಲಸದಳವಾದ ಪೆಟ್ಟಾಗಿದ್ದು, ಈಗ ನಾವು 'ಕ್ರಾಂತಿಕಾರಿ' ಎಂದು ಕರೆಯುತ್ತಿರುವ ಸಂಗೀತ ರಚನೆಗೆ ಕಾರಣವಾಗಿರಬಹುದು.

೧೮೩೧ ರ ಪ್ಯಾರಿಸ್, ಸೃಷ್ಟ್ಯಾತ್ಮಕ ಕೇಂದ್ರಗಳಲ್ಲೆಲ್ಲ ಅತ್ಯಂತ ಉತ್ತೇಜಕವಾದುದಾಗಿತ್ತು. ಅಂದಿನ ಸಂಗೀತಕ್ಷೇತ್ರದ ಪ್ರಸಿದ್ಧರನ್ನೆಲ್ಲ—ಇಟಾಲಿಯನ್ ಗೀತರೂಪಕಗಳ ಆಕರ್ಷಣೆಯಾದ ರೋಸಿನಿ, ಸಂಗೀತ ಕಲಾಶಾಲೆಯ ಮುಖ್ಯಸ್ಥನಾದ ಶೆರುಬಿನಿ ಹಾಗೂ ಲಿಜ್‌ಟ್—ಚೊಪಿನ್ ಭೇಟಿಯಾದ. ಅವನು ಮತ್ತು ಲಿಜ್‌ಟ್ ಗೆಳೆಯರಾದರು. ಅವರು ಹೆಚ್ಚು ಕಡಮೆ ಸಮಾನ ವಯಸ್ಕರು; ಸಂಗೀತದ ಬಗೆಗೆ ಇಬ್ಬರಿಗೂ ತೀವ್ರವಾದ ಆಸಕ್ತಿ; ಕ್ರಿಯಾತ್ಮಕರಾದ ಇಬ್ಬರೂ ಚೆಲುವರು; ಗಣ್ಯರ ಜೊತೆಯ ಜೀವನವನ್ನು ಬಯಸುತ್ತಿದ್ದವರು.

ಈ ಹೊಸ ಜೀವನದಲ್ಲಿ ಎದ್ದು ಕಾಣುವ ಒಂದು ಕೊರತೆ ಇತ್ತು. ಚೊಪಿನ್ನನ ಬಳಿ ಇದ್ದ ಹಣ ಅಲ್ಪ; ಪ್ಯಾರಿಸ್ ಆದರೋ ಬಹು ದುಬಾರಿ. ಕಛೇರಿಗಳನ್ನು ಏರ್ಪಡಿಸುವುದು ಸುಲಭವಾಗಿರಲಿಲ್ಲ; ರಚನೆಗಳನ್ನು ಮಾರುವುದು ಸಾಧ್ಯವಾಗುತ್ತಿರಲಿಲ್ಲ. ಪ್ಯಾರಿಸ್‌ನಲ್ಲಿ ಆಗಲೇ ಹಲವು ಉತ್ತಮ ಪಿಯಾನೊವಿದರಿದ್ದರು. ಲಂಡನ್ನಿಗಾಗಲಿ ಇಲ್ಲವೆ ಸಂಯುಕ್ತ ಸಂಸ್ಥಾನಗಳಿಗಾಗಲಿ ಹೊರಟುಹೋಗಬೇಕೆನ್ನುವಷ್ಟರ ಮಟ್ಟಿಗೆ ಚೊಪಿನ್ ನಿರಾಶನಾದನು.

ಆಮೇಲೆ ಒಂದು ದಿನ ಅವನಿಗೆ ವಾರ್ಸಾದ ಹಳೆಯ ಗೆಳೆಯನೊಬ್ಬನ ಸೋದರ, ರಾಜಕುಮಾರ ವ್ಯಾಲಂಟಿನ್‌ನ ಭೇಟಿಯಾಯಿತು. ರಾಜಮಾನ್ಯ ರೋಥ್‌ಶೀಲ್ಡನ ಮನೆಯ ಸಾಯಂಕಾಲದ ಕೂಟವೊಂದಕ್ಕೆ ರಜಿವಿಲ್ ಚೊಪಿನ್ನನನ್ನೂ ಜೊತೆಗೆ ಬರುವಂತೆ ಆಹ್ವಾನಿಸಿದನು. ಆ ಸಂಜೆಯ ಕೂಟ ಚೊಪಿನ್ನನ ಜೀವನಗತಿಯನ್ನೇ ಬದಲಾಯಿಸಿತು. ಬೆಳಕು ಹರಿಯುವ

ಮುನ್ನ ಅವನು ವಿಖ್ಯಾತನಾದನು. ಸಮಾಜ ಅವನನ್ನು ಒಪ್ಪಿಕೊಂಡಿತು. ರಾಜಮಾನ್ಯ ರೋಥ್‌ಶೀಲ್ಡ್‌ನ ಹೆಂಡತಿ ಅವನ ಶಿಷ್ಯೆಯಾಗಬಯಸಿದಳು. ಶ್ರೀಮಂತ ಗೃಹಿಣಿಯರ ತಂಡವೇ ಅವಳೊಂದಿಗೆ ಅವನನ್ನು ಮುತ್ತಿ ಕೊಂಡಿತು.

ಇದೇ ವೇಳೆಗೆ ರಾಬರ್ಟ್ ಷೂಮನ್ ಎಂಬ ರಚಕನೂ ವಿಮರ್ಶಕನೂ ಮೊಜಾರ್ಟನ ರಚನೆಯೊಂದರ ವ್ಯತ್ಯಯಗಳಾದ ಚೊಪಿನ್ನನ ಪ್ರಾರಂಭಿಕ ರಚನೆಗಳ ಬಗೆಗೆ ಒಂದು ವಿಮರ್ಶೆಯನ್ನು ಪ್ರಕಟಿಸಿದನು. "ಪ್ರಣಾಮಗಳು ಮಹನೀಯರೇ, ಇಲ್ಲೊಬ್ಬ ಪ್ರತಿಭಾವಂತ" ಎಂದು ಆ ವಿಮರ್ಶೆ ಆರಂಭ ವಾಗಿತ್ತು. ಒಡನೆಯೇ ಪ್ಯಾರಿಸ್‌ನ ಎಲ್ಲ ಪ್ರಕಾಶಕರೂ ಅವನ ಹೊಸಹೊಸ ರಚನೆಗಳನ್ನು ಕೇಳಲಾರಂಭಿಸಿದರು.

ಹಣದ ಹೊಳೆ ಹರಿಯಿತು. ಚೊಪಿನ್ ಒಂದು ಗಾಡಿಯನ್ನು ಕೊಂಡು ಕೊಂಡ; ಸೇವಕರನ್ನು ಇಟ್ಟುಕೊಂಡ. ಬಗೆ ಬಗೆ ಬಣ್ಣದ ಉಡುಗೆಗಳನ್ನು ಹೊಲಿಸಿದ. ಅವನ ಟೋಪಿಗೆ ಶೃಂಗಾರದ ಎಳೆಗಳು ತುಂಬಿಕೊಂಡವು. ಧನವಂತರು, ಕಲಾವಿದರು, ರಾಜಮನೆತನದವರು, ಹಳೆಯ ಮನೆತನಗಳ ಜಂಭಗಾರರು—ಅವನಿಗೆ ಎಲ್ಲರೂ ತಿಳಿದಿದ್ದರು. ಪ್ಯಾರಿಸ್‌ನ ತರುಣರಲ್ಲೆಲ್ಲ ಅವನೇ ಎಲ್ಲರಿಗೂ ಬೇಕಾದವನಾಗಿದ್ದನು. ಮುಂದಿನ ಹತ್ತು ವರ್ಷಗಳಲ್ಲಿ ಅದೃಷ್ಟವೂ ಸಮಾಜದಲ್ಲಿ ಸಿಕ್ಕಿದ ಯಶಸ್ಸೂ, ಅವನಿಗೆ ಎಲ್ಲ ಕಾಲವನ್ನೂ ಭೋಗದಲ್ಲಿಯೇ ಕಳೆಯುವಂತೆ ಮಾಡಬಹುದಾಗಿತ್ತು. ಆದರೆ ಚೊಪಿನ್ ಸಂಗೀತದ ರಚನೆಯನ್ನು ಮುಂದುವರಿಸಿದ. ಆ ಸಂಗೀತವಾದರೊ ದೇವತೆ ಗಳ ಸಂಗೀತ; ಪ್ರತಿಯೊಂದು ನುಡಿಯೂ ಪರಿಪೂರ್ಣವಾಗಿ ಮಿನುಗುತ್ತಿತ್ತು; ಪ್ರತಿಯೊಂದು ಸ್ವರವೂ ಅಪರಂಜಿಯಾಗಿತ್ತು.

ಚೊಪಿನ್ನನಿಗೆ ೨೭ ವರ್ಷಗಳಾಗಿದ್ದಾಗ ಅವನ ಜೀವನದಲ್ಲಿ ಜಾರ್ಜ್ ಸ್ಯಾಂಡ್ ಪ್ರವೇಶಿಸಿದಳು. ಜಾರ್ಜ್ ಸ್ಯಾಂಡ್ ಎಂಬುದು ಶ್ರೀಮತಿ ಅರೋರ್ ಡುಡೆವಾಂಳ ಗುಪ್ತನಾಮವಾಗಿತ್ತು. ಅವಳು ಇಜಾರವನ್ನು ಧರಿಸುತ್ತಿದ್ದಳು. ಸಿಗರೇಟು ಸೇದುತ್ತಿದ್ದಳು ಮತ್ತು ಕಾದಂಬರಿಗಳನ್ನು ಬರೆಯುತ್ತಿದ್ದಳು. ಚೊಪಿನ್ ಮೊದಲ ಬಾರಿಗೆ ಅವಳನ್ನು ಭೇಟಿಯಾದಾಗ ಹೀಗೆಂದು ಬರೆದ: "ಈ ಮಹಿಳೆ ಸ್ಯಾಂಡ್ ಎಷ್ಟು ಅನಾಕರ್ಷಕವಾಗಿ

ದ್ದಾಳೆ!" ಅವಳಾದರೊ ಈ ಸೆಣಕಲು ಯುವಕ ಸಂಗೀತಗಾರನೆಂದರೆ ಗೀಳುಗೊಂಡಿದ್ದಳು. ಚೊಪಿನ್ ಅಪಾಯಕಾರೀ ಕ್ಷಯರೋಗದ ಚಿಹ್ನೆಗಳನ್ನು ತೋರುತ್ತಿದ್ದನು. ಜಾರ್ಜ್‌ಸ್ಯಾಂಡಳೇ ಒಪ್ಪಿಕೊಂಡ ಹಾಗೆ "ನಾನು ಬೇರೊಬ್ಬರಿಗಾಗಿ ನರಳಬೇಕಾಗಿತ್ತು."

ಕೆಣಕು ಸ್ವಭಾವದ, ಉತ್ಸಾಹಶಾಲಿಯಾದ ಈ ಮಹಿಳೆಯ ಬಗೆಗೆ ಚೊಪಿನ್ನನ ಆದರ ಶೀಘ್ರವಾಗಿ ಬೆಳೆಯಿತು. "ತನ್ನ ಶಕ್ತಿಗುಂದಿದವನ"ನ್ನು ಪೋಷಿಸುವ ದೃಢನಿರ್ಧಾರವೇ ಸ್ಯಾಂಡಳಿಗೆ ಲೋಕದಲ್ಲಿ ಅತಿ ಮಹತ್ವದ ವಿಷಯವಾಯಿತು. ಇದೇ ಕಾರಣದಿಂದ ಮಜೋರ್ಕಾದಲ್ಲಿ ದೀರ್ಘಕಾಲ ವಿಶ್ರಾಂತಿ ಪಡೆಯುವ ಯೋಚನೆ ಅವಳಿಗೆ ಹೊಳೆಯಿತು. ಮೆಡಿಟರೇನಿಯನ್ ತೀರದ ಸೂರ್ಯನು ಪವಾಡಗಳನ್ನೆಸಗುತ್ತಾನೆ.

ಇದಕ್ಕೆ ಬದಲಾಗಿ ಮಜೋರ್ಕ ಚೊಪಿನ್ನನನ್ನು ಹೆಚ್ಚು ಕಡಮೆ ಕೊಂದೇ ಬಿಟ್ಟಿತು. ಅವರಿಗೆ ಉಳಿದುಕೊಳ್ಳಲು ವಸತಿಗೃಹಗಳಿರಲಿಲ್ಲ; ಆದ್ದರಿಂದ ಅವರು ಸೌಧವೊಂದನ್ನು ಬಾಡಿಗೆಗೆ ತೆಗೆದುಕೊಂಡರು. ಚೆನ್ನಾಗಿಲ್ಲದ, ಹೊಗೆಗೂಡಿಲ್ಲದ ಈ ಸೌಧವನ್ನು ಅವರು ಸೇರುತ್ತಲೇ ಧಾರಾಕಾರವಾದ ಮಳೆ ಸುರಿಯಲಾರಂಭಿಸಿತು. ಚೊಪಿನ್ನನ ಕಾಯಿಲೆ ತೀವ್ರವಾಯಿತು. ಬಂದರಿನಿಂದ ಹೊರಡುವ ಮೊದಲ ದೋಣಿಯನ್ನು ಹಿಡಿಯುವುದೇ ಉಳಿದ ಮಾರ್ಗವಾಗಿತ್ತು.

ಅವರು ಮಾರ್ಸೆಲ್ಸನ್ನು ತಲಪಿದರು. ಅಲ್ಲಿಂದ ಚೊಪಿನ್ನನನ್ನು, ಮಧ್ಯ ಫ್ರಾನ್ಸಿನಲ್ಲಿನ ಜಾರ್ಜ್ ಸ್ಯಾಂಡಳ ಹಳ್ಳಿಯ ಮನೆಗೆ ಒಯ್ಯಲಾಯಿತು. ಮುಂದಿನ ಆರೇಳು ವರ್ಷಗಳಲ್ಲಿ ಆಗಾಗ ಸ್ವಲ್ಪಕಾಲ ಚೊಪಿನ್ನನ ಆರೋಗ್ಯ ಸುಧಾರಿಸಿರುತ್ತಿತ್ತು. ಕೆಲವು ತಿಂಗಳುಗಳು ಪ್ಯಾರಿಸ್‌ನಲ್ಲಿ ಕಳೆಯುತ್ತಿದ್ದುವು. ಮಧ್ಯೆ ಮಧ್ಯೆ ಕೆಲವು ಸಾರ್ವಜನಿಕ ಕಛೇರಿಗಳೂ ನಡೆಯುತ್ತಿದ್ದುವು. ರಚನೆಯ ಕೆಲಸ ಒಂದೇ ಸಮನೆ ನಡೆದಿತ್ತು; ಅದರಲ್ಲಿ ಪ್ರತಿಭೆಗೇನೂ ಕೊರತೆ ಇರಲಿಲ್ಲ. ಕೇವಲ ಮನಸ್ಸಿನ ಶಕ್ತಿಯಿಂದ ರೋಗಿಯನ್ನು ಗುಣಪಡಿಸುವುದು ಸಾಧ್ಯವಿಲ್ಲವೆಂದು ಸ್ಪಷ್ಟವಾಗುವ ತನಕವೂ ಜಾರ್ಜ್‌ಸ್ಯಾಂಡ್ ಚೊಪಿನ್ನನನ್ನು ದಾದಿಯಂತೆಯೇ ಉಪಚರಿಸಿದಳು. ಆಮೇಲೆ ಅವಳು ಚೊಪಿನ್ನನನ್ನು ದೂರಮಾಡಿದಳು. ತನ್ನ ಎರಡು ಮಕ್ಕಳ ವಿಚಾರದಲ್ಲಿ

ಇಬ್ಬರಿಗೂ ಪದೇಪದೆ ನಡೆಯುತ್ತಿದ್ದ ಜಗಳವೇ ಇದಕ್ಕೆ ಕಾರಣವೆಂದು ಅವಳು ಹೇಳಿದಳು.

ಜಾರ್ಜ್‌ಸ್ಯಾಂಡ್ ದೂರಾದಳು; ಪ್ಯಾರಿಸ್ ೧೮೪೮ರ ಕ್ರಾಂತಿಯ ಕ್ಷೋಭೆಯಲ್ಲಿ ಸಿಕ್ಕಿಕೊಂಡಿತ್ತು. ಹೀಗಾಗಿ ತನ್ನೊಬ್ಬ ಹಳೆಯ ಶಿಷ್ಯನ ಆಹ್ವಾನದಂತೆ ಷೊಪಿನ್ ಬ್ರಿಟನ್ನಿಗೆ ಭೇಟಿಕೊಡಲು ಒಪ್ಪಿಕೊಂಡನು. ಅಲ್ಲಿ ಅವನು ವಿಕ್ಟೋರಿಯಾ ರಾಣಿಯ ಸಮ್ಮುಖದಲ್ಲಿ ಕಛೇರಿ ಮಾಡಿದನು. ಡಿಕನ್ಸ್, ಕಾರ್ಲೈಲ್, ಶ್ರೀಮತಿ ಬೈರನ್ ಮೊದಲಾದವರ ಪರಿಚಯವಾಯಿತು. ಆದರೆ ಬ್ರಿಟನ್ನಿನ ಹವಾ ಅವನಿಗೆ ವಿನಾಶಕಾರಿಯಾಯಿತು.

೧೮೪೮ರ ನವೆಂಬರಿನಲ್ಲಿ ಅವನ ಸ್ನೇಹಿತರು ಅವನನ್ನು ಪ್ಯಾರಿಸ್ಸಿಗೆ ಮರಳಿ ಕರೆದುಕೊಂಡು ಹೋದರು. ಆದರೆ ಷೊಪಿನ್ನನ ಶಕ್ತಿ ಇನ್ನೂ ಕುಗ್ಗುತ್ತಲೇ ಹೋಯಿತು. ಒಂದು ದಿನ, ಪೋಲೆಂಡಿನಿಂದ ಬಂದ ಹಳೆಯ ಗೆಳತಿ ಕೌಂಟೆಸ್ ಡಲ್‌ಫಿನ್ ಪೊಟೊಕ ಅವನೊಂದಿಗಿದ್ದಳು. ಒಂದೋ ಎರಡೋ ಹಾಡುಗಳನ್ನು ಹೇಳುವಂತೆ ಅವನು ಅವಳನ್ನು ಕೇಳಿಕೊಂಡನು. ಆಗ ಅವನ ಕೆಮ್ಮು ಎಷ್ಟು ಉಲ್ಬಣವಾಗಿತ್ತೆಂದರೆ ಅವನಿಗೆ ಎರಡನೆಯ ಹಾಡನ್ನು ಕೇಳುವುದೇ ಸಾಧ್ಯವಾಗಲಿಲ್ಲ. ಅವಳು ಕಣ್ಣಲ್ಲಿ ನೀರು ಸುರಿಸುತ್ತ ಹಾಡಿದಳು. ಎರಡು ದಿನಗಳ ನಂತರ, ಅಕ್ಟೋಬರ್ ೧೭, ೧೮೪೯ ರಂದು ಅವನು ತೀರಿಕೊಂಡ.

ಅವನಿಗೆ ಆಗ ಕೇವಲ ೩೯ ವರ್ಷಗಳು; ಆದರೆ ಅವನು ಜಗತ್ತನ್ನೇ ಮಾರ್ಪಡಿಸಿದ. ಸಂಗೀತ ಮತ್ತೆ ಅದೇ ಬಗೆಯದಾಗಿ ಇರುವುದಿಲ್ಲ. ರಾಗ ಮಾಧುರ್ಯಗಳಿಗೆ ಅವನು ಮೋಹಕವಾದ ಹೊಸ ಬಣ್ಣ ತೊಡಿಸಿದನು. ತನ್ನ ಪರಿಶುದ್ಧವಾದ ಅಭಿರುಚಿ, ಸಂಗೀತವನ್ನು ಕುರಿತಂತೆ ಸಮಂಜಸವಾದ ತಿಳಿವಳಿಕೆ ಇವುಗಳಿಂದ ಅವನು ಶಿಸ್ತಿನೊಳಗೇ ಸ್ವಾತಂತ್ರ್ಯವನ್ನು ಸೃಷ್ಟಿಸಿದನು.

ತನ್ನ ಹೃದಯದಿಂದಲೇ ಫ್ರೆಡ್ರಿಕ್ ಷೊಪಿನ್ ಕಾವ್ಯವನ್ನು ರಚಿಸಿದನು. ಈ ಕಾವ್ಯವಾದರೊ ಎಂದಿಗೂ ಹೊಸದು; ಸದಾ ಜೀವಂತ.

# ಸಿಕ್ ಜನಾಂಗದ ಧರ್ಮ, ದೇವರು

ಸಾಮಾನ್ಯವಾಗಿ ಅಂಗೀಕೃತವಾದ ಮಹತ್ವ ವಿಚಾರಗಳನ್ನೇ ಪ್ರಶ್ನೆ ಮಾಡುವ ಹೊತ್ತು ಪ್ರತಿಯೊಂದು ರಾಷ್ಟ್ರದ ಜೀವನದಲ್ಲಿಯೂ ಒಮ್ಮೆ ಬರುತ್ತದೆ. ಮೊದಲು ಅಂಗೀಕೃತವಾದ ಮಹತ್ವ ವಿಚಾರಗಳೊಡನೆ ಅದೇ ಯೋಗ್ಯತೆಯ ವಿಚಾರಗಳು ಬಂದು ಅವುಗಳಲ್ಲಿ ಭಿನ್ನತೆಯುಂಟಾದಾಗ ಈ ಸ್ಪರ್ಧೆ ಆರಂಭವಾಗುತ್ತದೆ. ಈ ವಿವಾದ ಕೊನೆಯಲ್ಲಿ ಸಂಧಾನವಾಗಿ, ಹೊಸದಾಗಿ ಹುಟ್ಟುವ ಜೀವನದ ರೀತಿನೀತಿಗಳ ನ್ಯಾಯಸೂತ್ರಗಳು ಒಂದಾಗಿ, ಎರಡು ಕಡೆಗೂ ಸಮಾನವಾಗಿ ಪರಿಣಮಿಸಬಹುದು. ಕೆಲವು ವೇಳೆ ಈ ಹೊಸ ನ್ಯಾಯಸೂತ್ರಗಳು, ತಮ್ಮ ಮೂಲನಂಬುಗೆಯಿಂದ ಸಿಡಿದುಹೋಗುವವರ, ಹೊಸ ಬಾಳಿನ ರೀತಿಯನ್ನು ಅವಲಂಬಿಸುವುದರಲ್ಲಿ ನಿಷ್ಠೆಯುಳ್ಳವರ ಪಾಲಿಗೆ ಅಂಟಿಕೊಳ್ಳಬಹುದು. ಹೊಸ ಮಾದರಿಯ ಸಮಾಜವನ್ನು ಕಟ್ಟಬೇಕು ಎಂಬ ಧರ್ಮ ಜಾಗೃತಿಯಿಂದ ಹೊಸ ಜನಾಂಗವೇ ಸೃಷ್ಟಿಯಾದುದಕ್ಕೆ ಸಿಕ್ಕರು ಒಂದು ಉದಾಹರಣೆ.

ಅನೇಕ ಶತಮಾನಗಳ ಕಾಲ ಭಾರತೀಯರು ಹಿಂದೂ ಧರ್ಮವನ್ನು ವಿಧಿಪೂರ್ವಕವಾಗಿ, ಯಾವ ವಿಧದ ಮಾರ್ಪಾಡೂ ಇಲ್ಲದೆ ಸ್ವೀಕರಿಸಿಕೊಂಡಿದ್ದರು. ಕ್ರಿ. ಶ. ೭೮೦ ರಿಂದ ಉತ್ತರ ಭಾಗದಿಂದ ಮುಸ್ಲಿಮರ ದಂಡಯಾತ್ರೆಗೆ ಆರಂಭವಾಯಿತು. ಹಿಂದೂ ಧರ್ಮ ಏನು ಹೇಳಿದರೂ ಅದಕ್ಕೆ ವಿರೋಧವಾಗಿರುವುದೇ ಈ ಆಕ್ರಮಣಕಾರರ ಧರ್ಮ ಮತ್ತು ಜೀವನಮಾರ್ಗವಾಯಿತು. ಅವರ ಧರ್ಮ ಕೇವಲ ಮಾಡಬೇಕು, ಮಾಡಬಾರದು ಎಂಬುದರ ಪಟ್ಟಿಯಾಯಿತು. ಅದರಲ್ಲಿಯೂ ಬಹುಪಾಲು ದೈನಂದಿನ ಜೀವನದ ವಿಚಾರಗಳಲ್ಲಿ ನೇರವಾದ ಸಂಬಂಧವನ್ನಿಟ್ಟುಕೊಂಡವು. ಕೊರಾನಿನ ಬಹುಭಾಗದ ತುಂಬ ಮನುಷ್ಯ ಏನನ್ನು ತಿನ್ನಬೇಕು, ಏನನ್ನು ತಿನ್ನಬಾರದು, ಏನನ್ನು ಕುಡಿಯಬಹುದು, ಏನನ್ನು ಕುಡಿಯಬಾರದು, ಅವನು ಎಷ್ಟು ಜನ ಸ್ತ್ರೀಯರನ್ನು ಮದುವೆಯಾಗಬಹುದು, ಅವರೊಂದಿಗೆ ಹೇಗೆ ನಡೆದುಕೊಳ್ಳಬೇಕು,

ಹೇಗೆ ವಿಚ್ಛೇದನ ಪಡೆಯಬೇಕು ಎಂಬ ವಿಚಾರಗಳೇ ತುಂಬಿಹೋಗಿವೆ. ದೇವರೊಬ್ಬನಿದ್ದಾನೆ; ಅವನನ್ನು ಅರಿತವನು ಮುಹಮ್ಮದ್ ಎಂಬ ನಂಬುಗೆಯೇ ಬಹಳ ಸರಳವಾಗಿ, ಸಣ್ಣದಾಗಿಹೋಯಿತು. ಕೊರಾನು ದೈವವಾಣಿಯಾಯಿತು. ಅದರಲ್ಲಿ ಹೇಳಿರುವುದೇ ಮಾನವಕುಲಕ್ಕೆ ಕಾನೂನಾಯಿತು. ಹಿಂದೂಗಳ ಸರ್ವ ದೇವರ ಆರಾಧನೆಗೆ ಇದಿರಾಗಿ ಕೊರಾನ್ ದೇವರ ಏಕತೆಯನ್ನು ಒತ್ತಾಯಪಡಿಸಿತು; ಅದು ವಿಗ್ರಹವನ್ನು ಪೂಜಿಸುವ ದೇಶದಲ್ಲಿ ಅದನ್ನು ಖಂಡಿಸಿತು; ಜಾತಿ ಭೇದಗಳಿದ್ದ ನಾಡಿನಲ್ಲಿ ಅದು ಸರ್ವಸಮಾನತೆಯ ಪರವಾಯಿತು; ವಿರಕ್ತಿಯ ಆದರ್ಶವನ್ನು ಬೋಧಿಸಿದ ದೇಶದಲ್ಲಿ ಅದು ದೈಹಿಕ ಸುಖವನ್ನು ಅಲಕ್ಷಿಸಲಿಲ್ಲ.

ಏಳು ಶತಮಾನಗಳ ತನಕ ಇಸ್ಲಾಂ ಧರ್ಮ ಮತ್ತು ಹಿಂದೂ ಧರ್ಮ ತಮ್ಮ ಶ್ರೇಷ್ಠತೆಗಾಗಿ ಹೊಡೆದಾಡಿದುವು. ಸ್ವಭಾವಿಕವಾಗಿ ತಾಳ್ಮೆಯಿಲ್ಲದ ಕೆಲವು ಮುಸ್ಲಿಮರು ಕೈಯಲ್ಲಿ ಕತ್ತಿ ಹಿಡಿದು ವಾದಿಸುತ್ತಿದ್ದ ಕಾಲವೂ ಇತ್ತು. ಆಗಲೇ ಹಿಂದುಗಳೂ ತಮ್ಮ ಸ್ವಭಾವಕ್ಕನುಗುಣವಾಗಿ, ತಮಗೆ ಕಿರುಕುಳಕೊಡುತ್ತಿದ್ದ ಮುಸ್ಲಿಮರ ಖಡ್ಗದ ತುದಿಗೆ ದೂರವಾಗಿದ್ದು ಶಕ್ತಿಯುತರಾಗಿದ್ದರು. ಹದಿನೈದನೆಯ ಶತಮಾನದ ಸುಮಾರಿಗೆ ಭಾರತದಲ್ಲಿ ಲಕ್ಷಾಂತರ ಜನ ಮುಸ್ಲಿಮರಿದ್ದರು. ಆದರೆ ಆ ಹೊತ್ತಿಗಾಗಲೇ ಮುಸ್ಲಿಮರು ಜಾತಿ ಭೇದಗಳ ಕಡೆ ದೃಷ್ಟಿ ಹಾಯಿಸಿದ್ದರು. ಹಿಂದೂ ದೇವಾಲಯಗಳಿಗೆ ಹೋಗಿ ಬರುತ್ತ, ಸಾಮಾನ್ಯವಾಗಿ ಹಿಂದೂ ಸಂಪ್ರದಾಯ, ಕಟ್ಟುಕಟ್ಟಳೆಗಳನ್ನು ಸ್ವೀಕರಿಸಲಾರಂಭಿಸಿದ್ದರು. ಇದೆಲ್ಲಕ್ಕಿಂತ ಮಿಗಿಲಾಗಿ ಅವರು ಮತ ಸಹಿಷ್ಣುತೆಯ ನೀತಿಯನ್ನು ಒಪ್ಪಿಕೊಂಡಿದ್ದರು. ಇನ್ನೊಂದು ಕಡೆ ಹಿಂದೂಗಳು ದೈವಿಕತೆಯ ಕಲ್ಪನೆಯನ್ನು ತಾವೇ ನಿರ್ಧರಿಸಿಕೊಂಡಿದ್ದರು. ಅವರಲ್ಲೇ ವರ್ಣಾಶ್ರಮ ಭೇದಗಳಿದ್ದುವು. ಜೊತೆಗೆ ಮಹತ್ವವಲ್ಲದ ಸಾಮಾಜಿಕ ಕಟ್ಟುಕಟ್ಟಳೆಗಳು ತುಂಬಿಕೊಂಡಿದ್ದುವು. ಅಂಥ ಕಾಲದಲ್ಲಿ ಹಿಂದೂ, ಮುಸ್ಲಿಮರಿಬ್ಬರಿಗೂ ಸಮಾನವಾದ ರೀತಿ, ನೀತಿಗಳ ನೆಲೆಯ ಮೇಲೆ ಧರ್ಮದ ಒಕ್ಕೂಟವೊಂದನ್ನು ಸ್ಥಾಪಿಸಿ, ಪ್ರಚಾರಮಾಡುವ ಪಂಥವೊಂದರ ಆವಶ್ಯಕತೆಯಿತ್ತು; ಅದೇ ಭಕ್ತಿಪಂಥ.

ಯೂರೋಪಿನಲ್ಲುಂಟಾದ ಧರ್ಮಜಾಗೃತಿಯಂತೆಯೇ ಭಾರತದಲ್ಲೂ

ವಿಚಾರಕ್ಕೆಡೆಗೊಡದ ಸಿದ್ಧಾಂತ, ಮತವಿಚಾರ, ಅಸಹಿಷ್ಣುತೆಗಳಿಗೆ ಇದಿರಾಗಿ ಭಕ್ತಿಪಂಥದ ಚಳುವಳಿ ಆರಂಭವಾಯಿತು. ಸ್ವಂತ ನೈತಿಕ ನಿಯಮಗಳೆ ಧರ್ಮದ ತಿರುಳು ; ಪೂಜೆಯ ಜಾಗ, ರೀತಿ ಇವು ಅಲ್ಪ ; ವಸ್ತುಶಃ ಹಿಂದೂ ಮತ್ತು ಮುಸ್ಲಿಂ ಧರ್ಮಗಳ ತಿರುಳು ಒಂದೇ ; ಹೆಸರು ಬೇರೆ ಎಂಬುದಾಗಿ ಭಕ್ತಿಪಂಥದ ಮೊದಲಿಗರಾದ ರಮಾನಂದ, ಗೋರಕನಾಥ, ಚೈತನ್ಯ, ಕಬೀರ್, ತುಳಸೀದಾಸ್, ವಲ್ಲಭ ಮತ್ತು ನಾಮದೇವರು ಬೋಧಿಸಿದರು. ಹಿಂದೂ ಮತ್ತು ಮುಸ್ಲಿಂ ಎರಡು ಧರ್ಮಗ್ರಂಥಗಳಿಂದಲೂ ಧಾರಾಳವಾಗಿ ಶಬ್ದ ಸಂಪತ್ತನ್ನುಪಯೋಗಿಸಿಕೊಂಡು ಅವರು ಒಂದು ವಿಧವಾದ ಧರ್ಮಗೀತೆ ಯನ್ನು ಕಟ್ಟಿ ಹಾಡಿದರು. ಸಹಜವಾಗಿ, ಸ್ವಾಭಾವಿಕವಾಗಿ ಅದು ಜನ ಸಾಮಾನ್ಯರ ಮೇಲೆ ಪರಿಣಾಮವನ್ನುಂಟುಮಾಡಿತು. ವೈಯಕ್ತಿಕ ಮುಂದಾಳುತನ ಮತ್ತು ಮಾರ್ಗದರ್ಶನ ಇವೆರಡೇ ಆ ಚಳುವಳಿಗೆ ಕಡಮೆ ಯಾಗಿದ್ದುವು. ಸಿಕ್ ಧರ್ಮದ ಮೂಲಪುರುಷನಾದ ಗುರುನಾನಕ್ [೧೪೬೯-೧೫೩೯] ಈ ಕೊರತೆಯನ್ನು ತುಂಬಿಕೊಟ್ಟನು.

ಭಕ್ತಿಪಂಥದ ಎಲ್ಲರಂತೆ ನಾನಕ್ ಕೂಡ ಹೊಸ ಮತವೊಂದನ್ನು ಸ್ಥಾಪಿಸು ವುದಕ್ಕಿಂತ ಮುಖ್ಯವಾಗಿ, ಮತಸಹಿಷ್ಣುತೆಯನ್ನು ಹರಡುವುದಕ್ಕೇ ಗಮನ ಕೊಟ್ಟನು. ಅವನ ಬೋಧೆ ಪಂಜಾಬಿನ ಜನಸಮುದಾಯವನ್ನು ಹೊಡೆದೆಬ್ಬಿ ಸಿತು. ಮತ್ತು ಅವನ ಜೀವಿತಕಾಲದಲ್ಲಿಯೇ ಬಹುಸಂಖ್ಯೆಯ ಅನುಯಾಯಿ ಗಳು ಅವನನ್ನು ಮುತ್ತಿದರು. ಅವರೆಲ್ಲರೂ ಮೊದಲು ಬರಿದೆ ಅವನ 'ಶಿಷ್ಯ' ರಾಗಿದ್ದರು. ಕೆಲವು ಕಾಲದನಂತರ ಈ ಶಿಷ್ಯರದು ನಾನಕ್ಕನ ಬೋಧೆ ಯಷ್ಟನ್ನೇ ಗಮನಿಸುವವರ ಗುಂಪಾಯಿತು. ಈ ಶಿಷ್ಯರೇ 'ಸಿಕ್ಕ' (ಸಂಸ್ಕೃತ 'ಶಿಷ್ಯ'ದ ಅಪಭ್ರಂಶ)ರಾದರು.

ಗುರುನಾನಕ್ ಒಬ್ಬ ಬೋಧಕನಾಗಿ ತೃಪ್ತನಾದ. ತಾನು ಪ್ರವಾದಿ ಯೆಂದು, ಪುಣ್ಯಪುರುಷನೆಂದು ಅವನು ನಂಬಿರಲಿಲ್ಲ. ತನ್ನ ಬರವಣಿಗೆಯನ್ನು ಭವಿಷ್ಯವಾದಿಯ ಉಡುಗೆಯಿಂದ ಮುಚ್ಚಲಿಲ್ಲ. ತನ್ನ ಮಾತಿಗೆ ಸಂದೇಶದ ಪವಿತ್ರತೆಯ ಸೋಗು ಬಡಿಯಲಿಲ್ಲ. ಅವನ ಬೋಧನೆ ಧರ್ಮದಲ್ಲಿ ತುಂಬಿದ್ದ ಅಹಂಕಾರ ಮತ್ತು ಕೊಳಕಿನ ಎದುರು ಹೂಡಿದ ಧರ್ಮಯುದ್ಧ ! ಅವನ ಬದುಕು ಅವನ ಬೋಧನೆಗೆ ಮಾದರಿಯಾಗಿತ್ತು. ಅವನು ಹೇಳಿದ್ದನ್ನು

ಚೆನ್ನಾಗಿ ಹೇಳಿದ; ಮಾಡಿದ್ದನ್ನು ಚೆನ್ನಾಗಿ ಮಾಡಿದ. ಆದ್ದರಿಂದಲೇ ಅವನ ಪದ್ಯಗಳು ಪಂಜಾಬಿ ಸಾಹಿತ್ಯದಲ್ಲಿ ಅತ್ಯುತ್ತಮವಾದುವು. ಅವನ ಜೀವನ ಅವನ ಧರ್ಮಕ್ಕೆ ಆದರ್ಶವಾಯಿತು.

ಅವನು ಜಾತಿ, ಮತಗಳ ಭೇದಭಾವವನ್ನು ಕಡೆಗಾಣಿಸಿದ. ಮಹಮ್ಮದೀಯ ಸಂಗೀತಗಾರನೊಬ್ಬನನ್ನೂ, ಹಿಂದೂಗಳಲ್ಲಿನ ಹೀನಕುಲದವನೊಬ್ಬನನ್ನೂ ತನ್ನ ಸಹಾಯಕರನ್ನಾಗಿ ತೆಗೆದುಕೊಂಡ. 'ಪವಿತ್ರ' ನದಿಯಲ್ಲಿ ಸ್ನಾನಮಾಡುವುದು, 'ಪವಿತ್ರ'ದಾರ ಕಟ್ಟಿಕೊಳ್ಳುವುದು, ಸತ್ತವರಿಗೆ ನಿವೇದಿಸುವುದು ಇವೇ ಮೊದಲಾದ ಹಿಂದೂ ಪದ್ಧತಿಗಳನ್ನು ಅವನು ಗೇಲಿಮಾಡಿದ. ಸ್ವತಃ ಅಂಥ ಜಾಗಗಳಿಗೆ ಹೋಗಿ ಭಕ್ತಕೋಟಿಗೆ ಅವರ ಹುಚ್ಚುತನದ ಬಗ್ಗೆ ತಿಳಿಯ ಹೇಳಿದ. ಹಾಗೆಯೇ ಮುಸ್ಲಿಮರ ಪುಣ್ಯಸ್ಥಳಗಳಿಗೂ ಹೋಗಿ, ಧರ್ಮಾಧಿಕಾರಿಗಳಿಗೆ ಅವರು ಕೊರಾನಿನ ವಚನವನ್ನು ಉಲ್ಲಂಘಿಸುತ್ತಿರುವುದನ್ನು ಗಮನಕ್ಕೆ ತಂದು, ಧರ್ಮದ ವ್ಯಾಪಾರವನ್ನು ಖಂಡಿಸಿದ. ಅವನ ಈ ಗೆಲವು ಹಿಂದೂ ಮುಸ್ಲಿಮರನ್ನು ವೈಯಕ್ತಿಕವಾಗಿ ಒಂದಾಗಿಸಿತು. ಎರಡು ಮತಸ್ಥರಿಂದಲೂ ಅವನು ಗೌರವಿಸಲ್ಪಟ್ಟ. ಅವನು ತೀರಿಕೊಂಡಾಗ ಅವನ ದೇಹವನ್ನು ಹುಗಿಯಬೇಕೆಂದು ಮುಸ್ಲಿಮರೂ, ಸುಡಬೇಕೆಂದು ಹಿಂದೂಗಳೂ ತಮ್ಮತಮ್ಮಲ್ಲಿ ಕಚ್ಚಾಡಿಕೊಂಡರು. ಇಂದಿಗೂ ಕೂಡ ಪಂಜಾಬಿನಲ್ಲಿ ನಾನಕ್ ಹಿಂದೂ, ಮುಸ್ಲಿಮರ ಸೌಹಾರ್ದದ ಪ್ರತೀಕವಾಗಿ ಗೌರವಿಸಲ್ಪಡುತ್ತಿದ್ದಾನೆ. ಜನಪ್ರಿಯವಾದ ಪದ್ಯವೊಂದು ಅವನನ್ನು ಹೀಗೆ ವರ್ಣಿಸುತ್ತದೆ:

ಗುರುನಾನಕ್, ಸಂತರ ದೊರೆ
ಹಿಂದೂಗಳ ಗುರು; ಮುಸ್ಲಿಮರ ಪೀರ್.

ತನ್ನ ಐವತ್ತು ವರ್ಷಗಳ ಸಂಚಾರ ಮತ್ತು ಬೋಧೆಯಿಂದ, ಗುರುನಾನಕ್ ಹಿಂದೂ ಮುಸ್ಲಿಂ ಎರಡು ಧರ್ಮಗಳಿಂದಲೂ ಹೊರಬಂದ ಜನರನ್ನು ಆಕರ್ಷಿಸಿ, ಒಂದಾಗಿಸಿದ. ಆ ಜನರನ್ನು ತನ್ನದೇ ಆದ ಒಂದು ಭಾಷೆ, ಸಾಹಿತ್ಯ, ಧಾರ್ಮಿಕ ನಂಬುಗೆ, ಸಂಪ್ರದಾಯಗಳಿಂದ ಒಂದು ಜನಾಂಗವನ್ನಾಗಿ ಮಾರ್ಪಡಿಸುವುದು ಅವನ ಅನಂತರ ಬರುವವರ ಪಾಲಿಗುಳಿಯಿತು.

ನಾನಕ್ಕನ ಸ್ಥಾನದಲ್ಲಿ ಮುಂದೆ ಒಂಬತ್ತು ಜನ ಗುರುಗಳು ಬಂದರು. ಅವನು ಬಿಟ್ಟುಹೋಗಿದ್ದ ಧಾರ್ಮಿಕ ಪರಂಪರೆಯ ಬೆಳವಣಿಗೆ ಮತ್ತು ರಕ್ಷಣೆಗೆ ಸಮರ್ಥರಾದ ಬೋಧಕರೊಬ್ಬರನ್ನು ಆರಿಸುವುದರಿಂದ ಆ ಸ್ಥಾನ ತುಂಬು ತ್ತಿತ್ತು. ಹೀಗೆ ಎರಡು ಶತಮಾನಗಳ ತನಕ ನಾಯಕರನ್ನು ಆರಿಸುವ ಕೆಲಸ ಯಶಸ್ವಿಯಾಗಿ ನಡೆಯಿತು. ಈ ಅವಧಿಯಲ್ಲಿ ಸಿಕ್‌ಧರ್ಮ ಪರಿಪೂರ್ಣ ವಾಯಿತು. ಹಿಂದೂಧರ್ಮ ರಾಜಕೀಯದ ಕಡೆ ಮೆಲ್ಲನೆ ವಾಲುತ್ತಿರುವು ದನ್ನು ಗಮನಿಸಿದ ಸಿಕ್ ಗುರುಗಳು ಸಿಕ್ ರಾಜ್ಯವೊಂದನ್ನು ಕಟ್ಟುವ ತಳ ಪಾಯ ಹಾಕಿದರು. ಸಿಕ್ ಜನರಲ್ಲಿ ಮತೀಯ ಭಾವನೆಯನ್ನು ಬೆಳಸಿ, ಅವರನ್ನೇ ಒಂದು ಪ್ರತ್ಯೇಕ ಪಂಗಡವನ್ನಾಗಿ ಮಾಡುವುದಕ್ಕೆ, ಹತ್ತು ಜನ ಗುರುಗಳಲ್ಲಿ ಎರಡನೆಯ, ನಾಲ್ಕನೆಯ, ಐದನೆಯ, ಆರನೆಯ ಮತ್ತು ಹತ್ತ ನೆಯ ಗುರುಗಳು ಮುಖ್ಯ ಕಾರಣರಾದರು.

೧೬೯೯ ರಲ್ಲಿ ಹಿಂದೂಗಳ ಹೊಸ ವರುಷದ ದಿನ ಹತ್ತನೆಯ ಗುರು, ಗೋವಿಂದಸಿಂಗನು ತನ್ನ ಅನುಯಾಯಿಗಳನ್ನೆಲ್ಲ ಸೇರಿಸಿ 'ಖಳಸ' (ಶುದ್ಧ) ಎಂಬ ಹೊಸ ಭ್ರಾತೃಸಂಘವೊಂದನ್ನು ಸ್ಥಾಪಿಸಿ, ಅದರ ಸಲುವಾಗಿ ಪುಂಜ ಪಿಯರರೆಂಬ ಐವರನ್ನು ನಿಯಮಿಸಿದನು. ಈ ಐವರಲ್ಲಿ ಒಬ್ಬ ಬ್ರಾಹ್ಮಣ, ಇನ್ನೊಬ್ಬ ಕ್ಷತ್ರಿಯ, ಮಿಕ್ಕವರು ಕೀಳುಜಾತಿಯವರು. ಇವರಲ್ಲಿ ವಿಶೇಷತೆ ಎಂದರೆ ತಮ್ಮ ಹೊಸ ಹೆಸರಿನ ಮುಂದೆ ಸಿಂಗ್ (ಸಿಂಹ) ಎಂಬ ಪ್ರತ್ಯಯ ವೊಂದನ್ನು ಸೇರಿಸಿಕೊಳ್ಳುವುದಲ್ಲದೆ, ಐದು ಮುಖ್ಯ ವಿಧಿಗಳನ್ನು (ಪಂಚ'ಕ' ಗಳು) ನಡಸುವುದಾಗಿ ಅವರು ಪ್ರಮಾಣವಚನ ಕೈಗೊಳ್ಳಬೇಕಾಯಿತು. ಗಡ್ಡ ತೆಗೆಸದಿರುವುದು (ಕೇಶ) ; ತಲೆಯಲ್ಲಿ ಜುಟ್ಟು ಬಿಡುವುದು (ಕುಂಘ) ; ವಿಶಿಷ್ಟವಾದ ಉಡಿಗೆ ಧರಿಸುವುದು (ಕುಚ್ಚ) ; ಬಲಗೈಯಲ್ಲಿ ಉಕ್ಕಿನ ಬಳೆ ಧರಿಸುವುದು (ಕರ) ಜೊತೆಯಲ್ಲಿ ಒಂದು ಖಡ್ಗವನ್ನು ಇಟ್ಟುಕೊಂಡಿರುವುದು (ಕೃಪಾಣ). ಇವೈದರ ಜೊತೆಗೆ ಖಳಸರು ಇನ್ನು ನಾಲ್ಕು ನಿಯಮಗಳನ್ನು ನಡೆಸಬೇಕಾಯಿತು. ಕೂದಲು ಕತ್ತರಿಸಬಾರದು, ತಂಬಾಕು, ಮಾದಕ ಪಾನೀಯ ಸೇವಿಸಬಾರದು, ಮಾಂಸ ತಿನ್ನಬಾರದು, ಮುಸ್ಲಿಮರೊಡನೆ ದೇಹಸಂಬಂಧ ಬೆಳಸಬಾರದು. ಅಲ್ಲಿಂದ ಮುಂದೆ ಪ್ರತಿಯೊಬ್ಬ ಸಿಕ್ ತರುಣನೂ ವಯಸ್ಕನಾದೊಡನೆಯೇ ಖಡ್ಗ ಧರಿಸಿ ತನ್ನ ಹೆಸರಿಗೆ ಸಿಂಗ್ ಪ್ರತ್ಯಯ

ಜೋಡಿಸಿಕೊಂಡು ಖಳಸದೀಕ್ಷೆ ವಹಿಸುತ್ತಾನೆ. ಆಮೇಲೆ ಖಳಸದ ಭ್ರಾತೃ ಭಾವವೊಂದನ್ನುಳಿದು ಅವನಿಗೆ ಬೇರೆ ಕುಲವಿಲ್ಲ.

ಈ ರೀತಿ ನಿಯಮಾವಳಿಯನ್ನು ಜಾರಿಗೆ ತರುವಂತೆ ಗುರು ಗೋವಿಂದ ಸಿಂಗನನ್ನು ಪ್ರಚೋದಿಸಿದ ಕಾರಣ ಏನೆಂಬುದು ಸರಿಯಾಗಿ ತಿಳಿದಿಲ್ಲ. ಅವನಾಗಲೀ, ಅವನ ಸಮಕಾಲೀನರಾಗಲೀ ತಮ್ಮ ಬರವಣಿಗೆಗಳಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿಲ್ಲ. ಅವರಲ್ಲಿ ಹಲವರು ಚಾರಿತ್ರಿಕ ಹಿನ್ನೆಲೆಯನ್ನು ಗ್ರಹಿಸಲು ಸಮರ್ಥರಾಗಿದ್ದರು.

ಗುರು ಗೋವಿಂದಸಿಂಗನು ಸಿಕ್ಕರ ಮತವಿಚಾರಗಳಿಗೆ ಒಂದು ರೂಪವನ್ನು ಕೊಟ್ಟ. ಯಾರಿಗೂ ತೊಂದರೆ ಮಾಡದೆ, ಸಮಾಧಾನಚಿತ್ತರಾದ ಜನರನ್ನು ಅವನು ಕತ್ತಿಹಿಡಿದ ಧರ್ಮಯುದ್ಧದ ಯೋಧರನ್ನಾಗಿ ಮಾಡಿದ. ಅವನು ಹೇಳಿದ ನೀತಿನಿಯಮಗಳನ್ನು ಅನುಸರಿಸಿದವರು ಇಂದೂ ಸಿಕ್ಕರಾಗಿಯೆ ಉಳಿದಿದ್ದಾರೆ. ಅವರು ಸಹಜಧಾರಿಗಳು, ಎಂದರೆ ತಾಳ್ಮೆಯಿಂದ ನಡೆಯುವವರು. ಗುರು ಗೋವಿಂದಸಿಂಗನು ಮುಸ್ಲಿಂ ದೊರೆಗಳಿಗೆ ಇದಿರಾಗಿ ನಡಸಿದ ಹೋರಾಟದಲ್ಲಿ ತನ್ನ ನಾಲ್ಕು ಜನ ಮಕ್ಕಳನ್ನೂ ಕಳೆದುಕೊಂಡು, ಗುರು ಪರಂಪರೆಯ ಕೊನೆಯನ್ನು ಸಾರಿದ. ಸಿಕ್ಕರು ಧರ್ಮವಿಚಾರಗಳಿಗಾಗಿ ಆದಿ ಗ್ರಂಥವನ್ನು ನೋಡುತ್ತಿದ್ದರು. ಅದೇ ಅಲ್ಲಿಂದ ಮುಂದೆ ಹತ್ತು ಜನ ಗುರುಗಳ ಪ್ರತಿನಿಧಿಯಾಯಿತು. ಹಿಂದೂಗಳಲ್ಲಿ ಪ್ರಚಲಿತವಾಗಿದ್ದ ಸಾಮಾಜಿಕ ಕಟ್ಟು ಕಟ್ಟಳೆಗಳು ಬೇರೆಯಾದುವು. ಹೀಗೆ ಒಂದು ಸ್ವತಂತ್ರ ಅಸ್ತಿತ್ವದಿಂದ ಸಿಕ್ಕರು ಹೊಸ ಜನಾಂಗವಾಗಿ ಬದಲಾದರು.

'ಸಿಕ್' ಎಂದರೆ ಹತ್ತು ಗುರುಗಳಲ್ಲಿ ಮತ್ತು 'ಗ್ರಂಥ ಸಾಹಿಬಾ'ದಲ್ಲಿ ನಂಬಿಕೆಯುಳ್ಳವನು ಎಂದು ರಾಜ್ಯಾಂಗದಲ್ಲಿ ವರ್ಣಿಸಲಾಗಿದೆ. ಆದರೆ ಈ ವಿವರಣೆ ಸಮಗ್ರವಾದುದಲ್ಲ. ಹತ್ತು ಜನ ಗುರುಗಳಲ್ಲಿ ನಂಬುಗೆಯಿಡದೆಯೇ ತಮ್ಮನ್ನು ಸಿಕ್ಕರೆಂದು ಕರೆದುಕೊಳ್ಳುವ ಜನರೂ ಇದ್ದಾರೆ. ಹತ್ತೂ ಜನ ಗುರುಗಳ ಪರಂಪರೆ ಮುಂದುವರಿದಿದೆಯೆಂದು ಹೇಳುವವರಿದ್ದಾರೆ. 'ಗ್ರಂಥ ಸಾಹಿಬಾ'ದಲ್ಲಿ ಬರೆದುದೆಲ್ಲವನ್ನೂ ಮೆಚ್ಚಿ, ಒಪ್ಪುವರಿದ್ದರೆ, ಅದರ ಕೆಲವು ಭಾಗಗಳಲ್ಲಿ ಶಂಕೆತೋರಿ ಪ್ರಶ್ನೆಮಾಡುವವರೂ ಇದ್ದಾರೆ. ಬೇರೆ ಬೇರೆ ಗುರುಗಳಿಗೆ ತೋರಿಸುವ ನಿಷ್ಠೆಯಿಂದಾಗಿ, ಗುರುಗಳನ್ನು ಆರಿಸುವುದರಲ್ಲಿ ಶಕ್ತರು ಕಡೆಗಣಿಸಲ್ಪಟ್ಟಿದ್ದಾರೆ.

ಎಂದು ವಾದಿಸುವುದರಿಂದಾಗಿ ಬೇಕಾದಷ್ಟು ಉಪಜಾತಿಗಳಾಗಿವೆ. ಈ ಎಲ್ಲ ಚಿಕ್ಕ ಪುಟ್ಟ ಕಾರಣಗಳನ್ನು ಕಡೆಗಾಣಿಸಿ, ಹತ್ತು ಜನ ಗುರುಗಳಲ್ಲಿ, ಅಧಿಕಾರ ಯುತವಾದ 'ಗ್ರಂಥಸಾಹಿಬಾ'ದಲ್ಲಿ ನಂಬುಗೆಯಿಡುವುದನ್ನು ಸಿಕ್‌ಧರ್ಮದ ಮೂಲಗುರುತುಗಳೆನ್ನಬಹುದು. ಬಹುಸಂಖ್ಯಾತರು ಈ ಎರಡು ಗುರುತು ಗಳಿಗೇ ಒಳಗಾಗುತ್ತಾರೆ. ಸಿಕ್ಕರಲ್ಲಿ ಸಹಜವಾಗಿರುವ, ಸ್ವಾಭಾವಿಕವಾಗಿರುವ ವಿಭಾಗಗಳು ಎರಡು : ಒಂದು — ಸಂಪ್ರದಾಯಶೀಲ ಖಳಸರು ; ಇನ್ನೊಂದು — ಕೂದಲು ತೆಗೆಯಿಸಿಕೊಂಡ ಸಹಜಧಾರಿಗಳು.

ಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾಗಿರುವಂತೆ ಸಿಕ್‌ಧರ್ಮ ಮುಸ್ಲಿಮರ ಮತ್ತು ಹಿಂದೂಗಳ ಆಧ್ಯಾತ್ಮಿಕ ತತ್ತ್ವಗಳ ಮಿಶ್ರಣ. ದೇವರ ಐಕ್ಯತೆಯಲ್ಲಿನ ನಂಬುಗೆಯನ್ನು, ಸತ್ಯವೆಂಬುದೇ ಹರನೆಂಬುದನ್ನೂ ಅದು ಒತ್ತಿ ಹೇಳುತ್ತದೆ. ಮತೀಯವಾದ ಎಲ್ಲ ಸಮಾರಂಭಗಳಲ್ಲೂ ಮೊದಲು ಹಾಡುವ ಪ್ರಾರ್ಥನೆ ಮತ್ತು ಮುಂಜಾನೆಯ ಪ್ರಾರ್ಥನೆಯಾದ 'ಜುಪ್ಜಿ'*ಯ ಪ್ರಸ್ತಾವನೆ ಈ ವಿಚಾರದಲ್ಲಿ ಹೀಗೆ ಹೇಳುತ್ತವೆ :

ಇರುವವನು ಒಬ್ಬನೇ ದೇವರು.
ಅವನೆ ಪರಮಸತ್ಯ.
ಅವನು ಸೃಷ್ಟಿಕರ್ತ, ಭಯದ್ವೇಷರಹಿತ
ಅವನು ಸರ್ವವ್ಯಾಪಕ ; ವಿಶ್ವವ್ಯಾಪಕ.
ಅವನಿಗೆ ಹುಟ್ಟಿಲ್ಲ ; ಮತ್ತೆ ಹುಟ್ಟಲು ಸಾಯುವುದಿಲ್ಲ !

---

*'ಜುಪ್ಜಿ' ಪ್ರಾತಃಕಾಲದ ಪ್ರಾರ್ಥನೆ-ಸಿಕ್ ಮತ ಗ್ರಂಥ 'ಗ್ರಂಥಸಾಹಿಬಾ'ದ ಮೊದಲ ಅಧ್ಯಾಯ. ಇದನ್ನು ರಚಿಸಿದವನು ಗುರುನಾನಕ್. ಅದೆಲ್ಲ ಒಮ್ಮೆಗೇ ಬರೆದು ಮುಗಿಸಿದು ದಲ್ಲ. ಪದ್ಯಗಳ ಉದ್ದ, ಪ್ರಾಸ, ಮನೋಧರ್ಮ ಎಲ್ಲ ವಿವಿಧವಾಗಿವೆ. ಪದ್ಯಗಳೆಲ್ಲ ಧ್ಯಾನ ಮಂತ್ರಗಳ ಸ್ವರೂಪದಲ್ಲಿದ್ದು, ಸಿಕ್‌ಧರ್ಮದ ಮೂಲಭೂತವಿಚಾರಗಳಾದ ದೇವರ ಕಲ್ಪನೆ, ಗುರುವಿನ ಸ್ಥಾನ, ಪ್ರಾರ್ಥನೆಯ ಅವಶ್ಯಕತೆ, ಪುನರ್ಜನ್ಮ, ಮುಕ್ತಿಗಳ ನಂಬುಗೆ ಇವನ್ನೆಲ್ಲ ಒಳಗೊಂಡಿದೆ. ಜುಪ್ಜಿಯನ್ನು ಸೂರ್ಯೋದಯದ ಮುನ್ನ ಪಠಿಸ ಬೇಕು. 'ಗ್ರಂಥಸಾಹಿಬಾ'ದ ಇನ್ನಿತರ ಭಾಗಗಳಂತೆ ಇದನ್ನು ಹಾಡಲು ಬರೆದಿಲ್ಲ. ಎಂದೂ ಹಾಡಿಲ್ಲ.

ಜುಪ್ಜಿಯ ಭಾಷೆ ಹದಿನೈದನೆ ಶತಮಾನದ ಪಂಜಾಬಿ. ಅನುವಾದ ಮಾಡುವುದು ಅತಿ ಕಷ್ಟ. ಅದರ ಇಂಗ್ಲಿಷ್ ಅನುವಾದ ಬಂದಿವೆ.

ಕಾಲಕ್ಕಿಂತ ಅನಾದಿಯಾದುದು ಸತ್ಯ.
ಓಡುವ ಕಾಲದೊಡನೆ ಸತ್ಯವೂ ಬೆಳೆಯಿತು.
ಇಂದಿಗೂ ಅದೇ ಸತ್ಯ.
ಎಂದಿಗೂ ಅದು ನಿತ್ಯ!

ಹತ್ತನೆಯ ಗುರು, ಗೋವಿಂದಸಿಂಗನು ತತ್ತ್ವಚಿಂತನೆಯಲ್ಲಿ ಇನ್ನೂ ಮುಂದೆ ಹೋಗಿ ದೇವರನ್ನು ಕಾಲಾತೀತನೆಂದು ವರ್ಣಿಸಿದ:

ಕಾಲವೊಂದೆ ಸತ್ಯ; ಅದೆ ಆದಿ, ಅದೆ ಅಂತ್ಯ.
ಅವ ಸೃಷ್ಟಿ-ಲಯಕಾರ. ಮಾತೆಂತು ಬಣ್ಣಿಸಿತೋ, ದೇವರ?

ದೇವರು ಒಂದು ವಸ್ತುವಲ್ಲ; ಒಂದು ಆಕಾರವಲ್ಲ. ಅವನು ನಿರಾಕಾರ. ಅವನು ಮಾನವನ ಗ್ರಹಿಕೆಗೆ ಮೀರಿದವನಾದರೂ ಋಜುಜೀವನ ಮಾರ್ಗದಿಂದ ಅವನ ಅನುಗ್ರಹವನ್ನು ಬೇಡಬಹುದು.

ಮುಂಜಾನೆಯ ಪ್ರಾರ್ಥನೆಯ ಮೊದಲ ಪದ್ಯದಲ್ಲಿ ಗುರುನಾನಕ್ ಹೇಳಿದ್ದಾನೆ:

ನೂರು ಸಹಸ್ರ ಯೋಚನೆ, ಇಲ್ಲ ಜ್ಞಾನ ಒಂದನ್ನೆ
ನಂಬಿ ಅವನ ತಿಳಿಯಲಾರೆವು!
ಗಂಭೀರ ಮೌನ, ದೀರ್ಘ ಚಿಂತನೆಗಳಿಂದಲೂ ಆಗದು.
ಉಪವಾಸ ಕೊಟ್ಟೀತು-ಕೋಟಿ ಗುಣಗಳ ಫಲವ.
ಆದರೆ, ತಣಿಸಲಾರದದು ಸತ್ಯವೆಂಬ ಹಸಿವ.
ಇಲ್ಲ. ಇದೋ ದರಿಂದಲು ಅಲ್ಲ!
ಇಂಥ ನೂರು ಸಾಸಿರ ಚಿತ್ತವೃತ್ತಿಗಳಿಂದ ದೇವರು ತಿಳಿಯಲೊಲ್ಲ.
ಹಾಗಾದರೆಂತು ತಿಳಿವುದು ಸತ್ಯ?
ಬಗೆಹರಿವುದೆಂತು ಮಿಥ್ಯ?
ಓ! ನಾನಕ್, ಹೀಗೆ ಹೇಳುತ್ತಿದೆ ಭಕ್ತಿ, ಶಾಸ್ತ್ರ–
ಋಜುಮಾರ್ಗ ನಿನ್ನದಾಗಿರಲಿ.

ಸಿಕ್‌ಧರ್ಮ ವಿಗ್ರಹಪೂಜೆಯನ್ನು ನಿಷೇಧಿಸುತ್ತದೆ. ಮೂರನೆಯ ಗುರು ಅಮರದಾಸ್ ಹೇಳುತ್ತಾನೆ:

ಅವರು ವಿಚಿತ್ರ ದೇವರುಗಳನ್ನು ಪ್ರಾರ್ಥಿಸುವರು.
ಧರ್ಮಯುದ್ಧವೆ ಅವರ ಬಾಳು–ಬದುಕೆನ್ನುವರು.

ಅವರುಣ್ಣುವನ್ನ, ಅವರುಡುವ ಬಟ್ಟೆ, ಎಲ್ಲ ವಿಷ !
ಬಾಳು ಅವರ ಪಾಲಿಗೆ ದುಃಖ.
ಅಲ್ಲಿಂದ ಮುಂದಕದು ನರಕ.

ಇದನ್ನೇ ಗುರು ಗೋವಿಂದಸಿಂಗ್ ಹೇಳಿದ್ದಾನೆ :

ತಲೆಯ ಮೇಲೆ ಕಲ್ಲು ಹೊತ್ತು ಅದ ಪೂಜಿಸುವರು ಕೆಲರು.
ಕೊರಳಲ್ಲಿ ಲಿಂಗಧರಿಸಿ ಅದ ಪೂಜಿಸುವರು ಹಲರು.
ಕೆಲವರ ದೇವರು ತೆಂಕಲಲಿರುವನು
ಮಿಕ್ಕವರು ತಲೆಬಾಗುವುದು ಪಡುವಲ ದೇವರಿಗೆ !
ಮತ್ತೆ ಕೆಲವರ ಭಕ್ತಿ ಗೊಂಬೆಗಳಿಗೆ
ಸತ್ತವರ ಆರಾಧನೆ ಮಿಕ್ಕವರಿಗೆ.
ಸುಳ್ಳು ಸಂಸ್ಕಾರಗಳಲ್ಲಿ ಜಗ ಬಂಧಿತವಾಗಿದೆ !
ದೇವರ ರಹಸ್ಯ ಇನ್ನೂ ತಿಳಿಯದಂತಿದೆ.

ಗುರುನಾನಕ್, ಸಂಜೆ ಹಿಂದೂ ದೇವಾಲಯಗಳಿಗೆ ಸೇವೆ ಸಲ್ಲಿಸಲು ಹೋದಾಗ, ಹರಿವಾಣದ ತುಂಬ ಮಿನುಗುತ್ತಿದ್ದ ಹಣತೆ, ಉರಿಯುತ್ತಿದ್ದ ಧೂಪ, ಕತ್ತಲ ಮುನ್ನ ವಿಗ್ರಹದೆದುರು ಹೊತ್ತಿಸಿದ ದೀಪಸಾಲು ಇವನ್ನೆಲ್ಲ ನೋಡಿ ಬರೆದ :

ಆಗಸ, ನಿನ್ನ ಹರಿವಾಣ.
ಸೂರ್ಯ ಚಂದ್ರರು ನಿನ್ನ ದೀಪಗಳು.
ಮಿನುಗುತಿಹ ತಾರೆಗಳು — ಚೆಲ್ಲಿರುವ ಮುತ್ತುಗಳು !
ಶ್ರೀಗಂಧ ನಿನ್ನ ಧೂಪ.
ಕಾಡುಗಳೆ ಪುಷ್ಪ.
ಆದರಿದೆಂಥ ಭಕ್ತಿ ?
ಓ ! ಭಯನಿವಾರಕನೆ ?

ದೇವರು ಮೂರ್ತಸ್ವರೂಪನಾಗಿರದೆ, ಭಾವಗ್ರಹಿತನಾಗಿದ್ದಾನೆ. ಆದ್ದರಿಂದ ದೈವಿಕತೆ ಒಬ್ಬ ಮನುಷ್ಯ ಅಥವಾ ವಸ್ತುವಿನಿಂದ ಸಂಪಾದಿಸಲ್ಪಡುವ ವಿಚಾರವಾಗಿರದೆ ಅದೊಂದು ಗುಣವೇ ಎಂದು ನಿರ್ಧರಿಸಲಾಗಿದೆ. ದೈವಿಕತೆ ಅಥವಾ ಮೋಕ್ಷವನ್ನು ಸಂಪಾದಿಸಲು ದೇವರ ಮನನೋಯದಂತೆ ನಡೆಯುವುದೊಂದೇ ದಾರಿ. ದೇವರ ಮನಸ್ಸನ್ನು ಗೊತ್ತುಹಚ್ಚುವ ಮಾರ್ಗವು, ಇತರ ಧರ್ಮ

ಶಾಸ್ತ್ರಗಳಂತೆ, ಅಪರಿಮಿತಿ. ಅದು ಮಾನವನ ಚಿಂತನೆಗೆ ಒಳಗಾದುದೇ. ಮುಖ್ಯವಾಗಿ ಅದು ಮಾನವ ಸಮಾಜದ ಮೂಲವಾದ ನೈತಿಕ ನಿಯಮಗಳ ದ್ದಾಗಿದೆ. ಮಾರ್ಗದರ್ಶನಕ್ಕಾಗಿ ಧಾರ್ಮಿಕ ವ್ಯಕ್ತಿಗಳ ಸಂಪರ್ಕ ಬೆಳಸು ವಂತೆ ಸಿಕ್‌ಧರ್ಮ ಹೇಳುತ್ತದೆ. ಗುರುಗಳನ್ನು, ಮಠಗಳನ್ನು ಅನುಸರಿಸುವ ಮುಖ್ಯಕಾರಣ ಇದೇ.

ಸಿಕ್ಕರು ಮಾನವಪ್ರಾಣಿಯನ್ನು ದೇವರ ಅವತಾರವೆಂದು ಪೂಜಿಸುವು ದಿಲ್ಲ. ತಾವು ಎಲ್ಲರಂತೆ ಸಾಧಾರಣ ಮನುಷ್ಯರೆಂದೂ, ತಮ್ಮನ್ನು ಯಾವ ಕಾರಣದಿಂದಲೂ ಪೂಜಿಸಬೇಕಾದುದಿಲ್ಲವೆಂದೂ ಗುರುಗಳು ತಾವೇ ಒತ್ತಿ ಒತ್ತಿ ಹೇಳಿದ್ದಾರೆ. ತಾನು ದೇವರ ಸೇವಕ, ಗುಲಾಮ ಎಂದು ಗುರುನಾನಕ್ ತನ್ನನ್ನು ಕುರಿತು ಹೇಳಿಕೊಂಡಿದ್ದಾನೆ. ಸಿಕ್ಕರ ಬಹುಪಾಲು ಧರ್ಮಶಾಸ್ತ್ರ ವನ್ನು ರಚಿಸಿದ ಗುರುಗೋವಿಂದಸಿಂಗನು, ಮುಂದೆ ತನಗೆ ತನ್ನ ಅನು ಯಾಯಿಗಳಿಂದ ದೇವರ ಅವತಾರ ಎಂಬ ಹೆಸರು ಹೊರಿಸಲ್ಪಡಬಹುದೆಂಬ ಕಳವಳ ತೋರಿಸಿದ್ದಾನೆ. ಅವನೇ ತನ್ನ ಜೀವನ ಧರ್ಮವನ್ನು ವಿವರಿಸಿದ್ದಾನೆ:

ಸರ್ವಶಕ್ತ ದೇವರ ಪಾದಾರವಿಂದಗಳಲ್ಲಿ
ಸಲ್ಲಿಸಿದ ಪ್ರಾರ್ಥನೆ ನನ್ನದು ;
ಹೊಸ ಮತವೊಂದನ್ನು ರಚಿಸಿ ಅದರ ನಿಯಮ
ರಚಿಸಿದ ಪುರೋಹಿತ ನಾನು.
ನನ್ನನ್ನೆ ದೇವರೆಂದು ಗೌರವಿಸುವವರು
ಹಾಳಾಗಿ, ನಾಶವಾಗುವರು.
ನಾನು ಎಲ್ಲರಂತೆ ದೇವರ ಸೇವಕ— ಸಂಶಯವಿಲ್ಲ.
ಸೃಷ್ಟಿಯ ಅದ್ಭುತಗಳನ್ನು ಕಣ್ಣಿಟ್ಟು ಕಂಡವ ನಾನು !

ಇನ್ನೊಂದು ಪದ್ಯದಲ್ಲಿ ದೈವತ್ವದ ಹಕ್ಕು ಸಾಧಿಸುವ ವಿಚಾರವನ್ನೂ, ಬೇರೆಯವರಿಂದ ಹಾಗೆ ಮಾಡಲ್ಪಟ್ಟುದನ್ನೂ ಅವನು ಖಂಡಿಸುತ್ತಾನೆ:

ದೇವರಿಗೆ ಶತ್ರು-ಮಿತ್ರರಿಲ್ಲ ;
ಕೀರ್ತನೆಗೆ ಕಿವಿಯೊಡ್ಡುವವನಲ್ಲ
ದೂಷಣೆಗೆ ಮನತೆರುವವನಲ್ಲ
ಹುಟ್ಟಿ-ಸಾಯುವವರ ನಡುವೆ ಹೇಗೆ ಮನದೋರುವನವನು ?

ದೈವತ್ವವು ಮಾನವ ಪ್ರಯತ್ನದ ಗುರಿ. ಆದ್ದರಿಂದಲೇ ಗುರುಗಳ ಬಾಳು ಮತ್ತು ಬೋಧನೆಗಳು ಆ ಸಾಧನೆಯ ದಾರಿಯಲ್ಲಿ ನೆರವು ನೀಡುವಂಥವು.

'ಗ್ರಂಥಸಾಹಿಬಾ'ದ ಬಹಳಪಾಲು ಸಂಗ್ರಹಕಾರ್ಯ ಐದನೆಯ ಗುರು ಅರ್ಜುನ ಮತ್ತು ಅವನ ಶಿಷ್ಯ ಭಾಯಿ ಗುರುದಾಸ ಇವರಿಂದ ನಡೆಯಿತು. ಈ ಸಂಗ್ರಹ ಆದಿಗ್ರಂಥವೆಂದು ಹೆಸರಾಗಿದೆ. ಇದರಿಂದ ಬೇರೆಯಾಗಿ ಹತ್ತನೆಯ ಗುರು, ಗೋವಿಂದಸಿಂಗನ ಶಿಷ್ಯ ಭಾಯಿ ಮಣಿಸಿಂಗನಿಂದ ಸಂಗ್ರಹಿತವಾದ ದಶಮಗ್ರಂಥವೊಂದಿದೆ.

ಗುರು ಗೋವಿಂದಸಿಂಗನ ಆಶಯದಂತೆ, ಆದಿ ಗ್ರಂಥ ಒಂದೇ ಒಂದು ಹತ್ತು ಜನ ಗುರುಗಳ ಸಾಂಕೇತಿಕ ಪ್ರತಿನಿಧಿಯಾಗಿ, ಪವಿತ್ರಮತಗ್ರಂಥವಾಗಿ ಉಳಿಯುವ ಗೌರವ ಪಡೆಯಿತು. ಅವನ ಸ್ವಂತ ದಶಮಗ್ರಂಥವನ್ನೂ ಭಯಭಕ್ತಿಗಳಿಂದ ಓದುತ್ತಾರೆ.

ಆದಿಗ್ರಂಥ ಅಥವಾ 'ಗ್ರಂಥಸಾಹಿಬಾ' ಮೊದಲೈದು ಗುರುಗಳ ಮತ್ತು ಒಂಬತ್ತನೆಯ ಗುರು ತೇಜಬಹದ್ದೂರನ ಬರವಣಿಗೆಗಳಿಂದಲೂ, ಗುರು ಗೋವಿಂದನ ಒಂದು ದ್ವಿಪದಿಯಿಂದಲೂ ಕೂಡಿದೆ. ಪುಸ್ತಕದ ಬಹುಭಾಗ ಆ ಕಾಲದ ಹಿಂದೂ, ಮುಸ್ಲಿಂ ಸಂತರ ಮುಖ್ಯವಾಗಿ ಮುಸ್ಲಿಂ ಕಬೀರರ ಬರವಣಿಗೆಗಳಿಂದ ತುಂಬಿದೆ. ಬೇರೆ ಬೇರೆ ಗುರುಗಳೊಡನಿದ್ದ ಚಾರಣರು ಬರೆದ ಹಾಡುಗಳೂ ಅದರಲ್ಲಿವೆ.

ಸಿಕ್‌ಗುರುಗಳು ಹದಿನೈದು ಮತ್ತು ಹದಿನಾರನೆಯ ಶತಮಾನಗಳ ಪಂಜಾಬಿ ಭಾಷೆಯನ್ನು ಉಪಯೋಗಿಸಿದ್ದಾರೆ. ಇನ್ನಿತರ ಬರಹಗಳು ಹಳೆಯ ಹಿಂದಿ, ಪರ್ಷಿಯನ್, ಗುಜರಾತಿ, ಮರಾಟಿ ಇನ್ನಿತರ ಉತ್ತರಭಾರತದ ಮಿಶ್ರಭಾಷೆಗಳಲ್ಲಿವೆ. ಇಡೀ ಕೃತಿ ಭಾರತೀಯ ಶಾಸ್ತ್ರೀಯ ಸಂಗೀತದ ಲಯ, ತಾಳಗಳಿಗನುಗುಣವಾಗಿ ರಚಿತವಾಗಿ, ಮೊದಲು ಲೇಖಕರಾದ ಗುರುಗಳ ಸಂಖ್ಯೆಯಿಂದ ಕೂಡಿದೆ. ಎಲ್ಲ ಗುರುಗಳೂ ಪ್ರತಿಯೊಂದು ಪದ್ಯದ ಅಂತ್ಯದಲ್ಲೂ 'ನಾನಕ್' ಎಂದು ಸೂಚಿಸಿ ಮುಗಿಸುತ್ತಾರೆ.

ಪ್ರತಿಯೊಂದು ಸಾಲಿನಲ್ಲಿಯೂ ಎಲ್ಲ ಶಬ್ದಗಳೂ ಒಂದೇ ಆಗಿ ಬೆರೆತು ಪಾಠವ ಅರ್ಥ ಹೇಳಬೇಕಾದರೆ ಕಣ್ಣುಕಟ್ಟಿದಂತಾಗುತ್ತದೆ. ಕೆಲವು ವೇಳೆ ಇದು ಒಂದು ಶಬ್ದವೆ ಅಥವಾ ಎರಡು ಶಬ್ದಗಳು ಕೂಡಿವೆಯೆ ಎಂದು ಹೇಳು

ವುದಕ್ಕೆ ಸಾಧ್ಯವಾಗುವುದಿಲ್ಲ. ಇದೆಲ್ಲವನ್ನು ಕಡೆಗಾಣಿಸಿವರೂ ಈ ಗ್ರಂಥವು ಒಂದು ಅದ್ವಿತೀಯ ಚಾರಿತ್ರಿಕ ದಾಖಲೆ.

ಮತೀಯ ಮುಂದಾಳುಗಳ ಮೂಲಬರವಣಿಗೆಯನ್ನು ಅಲಂಕಾರಮಾಡಿ, ತಪ್ಪುತಪ್ಪಾಗಿ ಹೆಣೆಯದೆ ಉಳಿಸಿಕೊಂಡು ಬಂದಿರುವ ಧರ್ಮ ಗ್ರಂಥವೆಂದರೆ ಇದೊಂದೇ ಎನ್ನಬಹುದು. ಆ ಕಾಲದ ಇನ್ನಿತರ ಕವಿಗಳ ಕೃತಿಗಳನ್ನೂ, ಮಾನವನ ಸ್ಮೃತಿಫಲಕದ ಮೇಲೆ, ಈ ಗ್ರಂಥ ಉಳಿಸಿಕೊಂಡು ಬಂದಿದೆ.

'ಗ್ರಂಥಸಾಹಿಬಾ' ಸಿಕ್ಕರ ಭಕ್ತಿ, ಭಾವನೆಗಳ ಪ್ರಮುಖ ಲಕ್ಷಣಗ್ರಂಥ. ಎಲ್ಲ ದೇವಾಲಯುಗಳಲ್ಲಿಯೂ ಇದರ ಪ್ರತಿಯನ್ನು ಪೀಠದ ಕೆಳಗಡೆ ಇಡುತ್ತಾರೆ. ಬೆಲೆ ಬಾಳುವ ನೇಯ್ಗೆ ಕೆಲಸದ ಬಟ್ಟೆಯಿಂದ ಪುಸ್ತಕವನ್ನು ಸುತ್ತಲಾಗುತ್ತದೆ. ಅದನ್ನು, ಮತೀಯ ಸಂಸ್ಕಾರಗಳಿಂದ, ಪ್ರಾರ್ಥನೆಯ ಅನಂತರ ಬಿಚ್ಚಿ, ಸಂಜೆಗೆ ಮುಚ್ಚುತ್ತಾರೆ. ಭಕ್ತರು ತಲೆಯನ್ನು ಮುಚ್ಚಿಕೊಂಡು, ಬರಿಗಾಲಿನಿಂದ ಅದರ ಎದುರು ಬರುತ್ತಾರೆ. ಗ್ರಂಥದೆದುರಿನ ನೆಲಕ್ಕೆ ತಮ್ಮ ಹಣೆಯನ್ನು ತಾಗಿಸುವುದರ ಮೂಲಕ ಅವರು ಅದಕ್ಕೆ ಗೌರವ ಸಲ್ಲಿಸುತ್ತಾರೆ. ಹಣ ಅಥವಾ ದುಡ್ಡಿನ ಕಾಣಿಕೆಯನ್ನು, ಗ್ರಂಥವನ್ನು ಸುತ್ತಿರುವ ಬಟ್ಟೆಯ ಮೇಲಿರಿಸುತ್ತಾರೆ.

ಭಕ್ತರ ಬೇರೆ ಬೇರೆ ಪಡೆಗಳಿಂದ 'ಗ್ರಂಥಸಾಹಿಬಾ'ವನ್ನು ನಿಲ್ಲಿಸದೆ ಓದುವ ಕೆಲಸ ನಡೆಯುತ್ತದೆ. ಎರಡು ಹಗಲು, ಎರಡು ರಾತ್ರಿ ನಡೆಯುವ ಈ ಕೆಲಸಕ್ಕೆ ಅಖಂಡಪಥ ಎಂದು ಹೆಸರು. ಇದು ಮುಖ್ಯವಾದ ಹಬ್ಬ ಹರಿದಿನಗಳಲ್ಲಿಯೂ ಖಾಸಗಿ ಸಮಾರಂಭಗಳಲ್ಲಿಯೂ ನಡೆಯುತ್ತದೆ. ಸಂಪತ್‌ಪಥ ಒಂದು ಸಾಮಾನ್ಯ ಸಮಾರಂಭ. ಖಂಡಖಂಡವಾಗಿ ಏಳು ದಿನ ಓದುತ್ತಾರೆ. ಹೊರಗಿನಿಂದ ಸುಲಭವಾಗಿ ಸಹಾಯ ದೊರಕದ ಮನೆಯವರು ಖಾಸಗಿಯಾಗಿ ಈ ಸಮಾರಂಭ ನಡೆಸುತ್ತಾರೆ.

ಗ್ರಂಥವನ್ನು ಬಿಡಿಸಿದಾಗ ಬರುವ ಪುಟದ ಮೊದಲ ಅಕ್ಷರದಿಂದ ಆರಂಭವಾಗುವ ಹೆಸರನ್ನು ಸಿಕ್ಕರು ತಮ್ಮ ಮಕ್ಕಳಿಗೆ ಇಡುತ್ತಾರೆ. ಗ್ರಂಥದೆದುರಿನಲ್ಲಿ ಸಿಕ್ ತರುಣರು ಪ್ರಾರ್ಥನೆಯ ಪಠನಮಾಡಿ ದೀಕ್ಷೆ ವಹಿಸುತ್ತಾರೆ. ಸಿಕ್ ವಧೂವರರು 'ಗ್ರಂಥಸಾಹಿಬಾ'ವನ್ನು ನಾಲ್ಕು ಸುತ್ತು ಸುತ್ತಿ ಸುತ್ತುವಾಗ ಅದರೊಳಗಿನ ಮಂತ್ರಗಳನ್ನುಚ್ಚರಿಸುತ್ತಾ ಮದುವೆಯಾಗುತ್ತಾರೆ. ಸಾವಿನ

ಸಮಯದಲ್ಲಿ ಇದರ ಮಂತ್ರಗಳನ್ನು ಸಾಯುತ್ತಿರುವವನ ಕಿವಿಯಲ್ಲಿ ಘಟ್ಟಿಯಾಗಿ ಪಠಿಸುತ್ತಾರೆ. ದಹನಕ್ರಿಯೆಯ ಸಮಯದಲ್ಲಿ ಜ್ವಾಲೆ ದೇಹವನ್ನು ಸುಡುತ್ತಿದೆಯೆಂಬುದಾಗಿ ಮಂತ್ರೋಚ್ಚಾರಣೆ ಮಾಡುತ್ತಾರೆ. ಹೀಗೆಲ್ಲ ಇದ್ದೂ 'ಗ್ರಂಥಸಾಹಿಬಾ' ಹಿಂದೂ ದೇವಾಲಯಗಳ ವಿಗ್ರಹದಂತಲ್ಲ; ಕ್ಯಾಥೋಲಿಕ್ ಚರ್ಚುಗಳ 'ಕ್ರಾಸ್'ನಂತಲ್ಲ. ಅದು ಪೂಜೆ, ಪ್ರಾರ್ಥನೆಗಳ ಮೂಲವಲ್ಲ; ಮೂರ್ತಿಯಲ್ಲ. ಅದು ತಮ್ಮ ಗುರುಗಳ ಬೋಧೆಯಿಂದ ತುಂಬಿರುವುದರಿಂದ ಸಿಕ್ಕರು ಅದನ್ನು ಗೌರವಿಸುತ್ತಾರೆ. ಅದು ದೇವರ ಆಜ್ಞೆ ಎಂಬುದಕ್ಕಿಂತ ಮಿಗಿಲಾಗಿ, ದೈವತ್ವದ ಪ್ರಜ್ಞೆ.

ಸಿಕ್ಕರಿಗೆ 'ಪುಣ್ಯ'ನದಿಗಳಲ್ಲೂ ಬೆಟ್ಟಗಳಲ್ಲೂ ನಂಬಿಕೆಯಿಲ್ಲ; ಕಲ್ಲು ಮೂರ್ತಿಗಳಿಗೆ ಪ್ರಾರ್ಥನೆ ಸಲ್ಲಿಸುವುದಿಲ್ಲ. "ಮೂರ್ತಿಪೂಜೆ ಮಾಡುವುದು, ಪುಣ್ಯಸ್ಥಳಗಳಿಗೆ ಯಾತ್ರೆ ಹೋಗುವುದು, ಮರುಭೂಮಿಗಳಲ್ಲಿರುವುದು, ಇಷ್ಟು ಮಾಡಿಯೂ ಮನಸ್ಸನ್ನು ಪರಿಶುದ್ಧವಾಗಿಟ್ಟುಕೊಳ್ಳದಿರುವುದು, ಇದೆಲ್ಲ ಶುದ್ಧ ವ್ಯರ್ಥ. ಉಳಿಯಲು ಒಂದೇ ದಾರಿ—ಸತ್ಯದ ಆರಾಧನೆ" (ನಾನಕ್).

ಗುರುನಾನಕ್ಕನ ಜೀವನದಲ್ಲಿನ ಎರಡು ಘಟನೆಗಳು ತೀರ್ಥಯಾತ್ರೆ ಪುಣ್ಯಸ್ಥಳಗಳ ಬಗ್ಗೆ ಅವನ ಮನೋಭಾವವನ್ನು ಚಿತ್ರಿಸುತ್ತವೆ. ಒಂದು ದಿನ ಪ್ರಾತಃಕಾಲ ನಾನಕ್ ಗಂಗಾನದಿಯ ತೀರಕ್ಕೆ ಹೋದನು. ಅಲ್ಲಿ ಹಿಂದೂ ಭಕ್ತರು ಸ್ನಾನಮಾಡುತ್ತ, ಸೂರ್ಯನ ಕಡೆ ಮುಖಮಾಡಿ ಸತ್ತ ಹಿರಿಯರಿಗೆ ನೀರನ್ನು ಸಂಪ್ರೋಕ್ಷಿಸುತ್ತಿದ್ದರು. ಇದನ್ನು ಕಂಡು ನಾನಕ್ ಇನ್ನೊಂದು ಕಡೆ ಮುಖಮಾಡಿಕೊಂಡು ವ್ಯತಿರಿಕ್ತವಾಗಿ ನೀರನ್ನು ಪ್ರೋಕ್ಷಿಸತೊಡಗಿದನು. 'ಹಾಗೇಕೆ?' ಎಂದು ಪ್ರಶ್ನಿಸಿದಾಗ ಅವನು ಉತ್ತರಕೊಟ್ಟನು: "ನಾನು ನನ್ನ ಪಂಜಾಬಿನ ಹೊಲಗಳಿಗೆ ನೀರೆರೆಯುತ್ತಿದ್ದೇನೆ. ನೀವು ಸತ್ತು ಸ್ವರ್ಗದಲ್ಲಿರುವವರಿಗೆ ನೀರು ಕಳಿಸಬಲ್ಲಿರಾದರೆ, ಭೂಮಿಯ ಮೇಲೆ ಇನ್ನೊಂದೆಡೆಗೆ ನೀರು ಕಳಿಸುವುದು ಇನ್ನೂ ಸುಲಭದ ಕೆಲಸ."

ಇನ್ನೊಂದು ಸಂದರ್ಭದಲ್ಲಿ ಅವನು ಮುಸ್ಲಿಮರ ಪುಣ್ಯಸ್ಥಳದ ಕಡೆ ಕಾಲುಚಾಚಿ ಮಲಗಿ ನಿದ್ರಿಸುತ್ತಿದ್ದನು. ಇದನ್ನು ಕಂಡು ರೇಗಿದ ಮುಸ್ಲಿಂ ಗುರುವೊಬ್ಬನು ಅವನನ್ನು ಎಬ್ಬಿಸಿ, ವಿಷಯವನ್ನು ಗಮನಕ್ಕೆ ತಂದನು. ಆಗ ನಾನಕ್ ಸುಮ್ಮನೆ ಉತ್ತರಿಸಿದ: "ದೇವರ ಸ್ಥಳದೆಡೆಗೆ ನಾನು ಕಾಲುಚಾಚಿ

ಅವನಿಗೆ ಅಗೌರವ ತೋರಿಸುತ್ತಿರುವೆನೆಂದು ನೀನು ತಿಳಿದಿರುವೆಯಾದರೆ, ಅವುಗಳನ್ನು ದೇವರಿಲ್ಲದ ಬೇರೆಕಡೆಗೆ ತಿರುಗಿಸು."

ಒಟ್ಟಿನಲ್ಲಿ ಸಿಕ್ಕರಿಗೆ ನಿರ್ದಿಷ್ಟವಾದ ತೀರ್ಥಯಾತ್ರೆಯ ಜಾಗ, ಸಂದರ್ಭಗಳು ಇಲ್ಲದಿದ್ದರೂ ತಮ್ಮ ಗುರುಗಳು ಜನ್ಮವೆತ್ತಿದ ದಿನ ಆ ಗುರುಗಳು ಹುಟ್ಟಿದ ಜಾಗದಲ್ಲಿ ಸಿಕ್ಕರೆಲ್ಲರೂ ಸೇರುತ್ತಾರೆ. ಧರ್ಮವೀರರಾಗಿ ತೀರಿಹೋದ ಐದನೆಯ ಗುರು ಅರ್ಜುನನ ದಿನವನ್ನು ಲಾಹೋರಿನಲ್ಲಿಯೂ, ತೇಜ್‌ಬಹದ್ದೂರನ ದಿನವನ್ನು ದೆಹಲಿಯಲ್ಲಿಯೂ ಸಿಕ್ಕರು ಬಹು ದೊಡ್ಡ ಪ್ರಮಾಣದಲ್ಲಿ ನಡೆಸುತ್ತಾರೆ. ಗುರುನಾನಕ್ಕರ ಜನ್ಮಸ್ಥಳ, ಲಾಹೋರಿನಲ್ಲಿ ಗುರು ಅರ್ಜುನನ ಶಿರಚ್ಛೇದನ ಮಾಡಿದ ಸ್ಥಳ, ಅಮೃತಸರ ಮತ್ತು ತರನ ತಾರನದ ದೇವಾಲಯಗಳು, ಪಾಟ್ನಾದಲ್ಲಿ ಗುರುಗೋವಿಂದನ ಜನ್ಮಸ್ಥಳ, ಮತ್ತು ಹೈದರಾಬಾದ್ ದಖನ್ನಿನಲ್ಲಿ ಅವನು ಸತ್ತ ಸ್ಥಳ ಇವುಗಳಿಗೆಲ್ಲ ಸಿಕ್ಕರು ತಮ್ಮಿಂದ ಸಾಧ್ಯವಾದಾಗಲೆಲ್ಲ ಭೇಟಿಕೊಡುತ್ತಾರೆ.

ಕರ್ಮ ಮತ್ತು ಪರಲೋಕದ ಜೀವನ ವಿಚಾರಗಳಲ್ಲಿ ಸಿಕ್‌ಧರ್ಮವು ಹಿಂದೂಧರ್ಮದ ಸಿದ್ಧಾಂತವನ್ನು ಒಪ್ಪುತ್ತದೆ. ಸಾವಿನ ಅನಂತರ ಮತ್ತೆ ಹುಟ್ಟಿದೆ; ಆ ಹುಟ್ಟು ತನ್ನ ಹಿಂದಿನ ಜೀವನದ ನಡವಳಿಕೆಗಳನ್ನು ಅವಲಂಬಿಸಿಕೊಂಡಿದೆ, ಎಂದು ಅದು ಹೇಳುತ್ತದೆ. ಋಜುಮಾರ್ಗದಲ್ಲಿ ನಡೆದು ಮನುಷ್ಯ ಹುಟ್ಟುಸಾವುಗಳ ವಿಷವ್ಯೂಹದಿಂದ ತಪ್ಪಿಸಿಕೊಂಡು ಮುಕ್ತಿಯನ್ನು ಸಾಧಿಸಬಹುದು. ಅದನ್ನು ಕುರಿತು ನಾನಕ್ ಹೇಳಿದ್ದಾನೆ :

> ಹಗಲು, ರಾತ್ರಿಗಳನ್ನು ಅವನು (ದೇವರು) ಸೃಷ್ಟಿಸಿದ್ದಾನೆ;
> ದಿನ, ವಾರ, ಋತುಗಳೂ, ತಂಗಾಳಿ, ತೊರೆಗಳೂ ಅವನ ಸೃಷ್ಟಿಯ ಕೈವಾಡ.
> ಉರಿಯುವ ಬೆಂಕಿ, ರೌದ್ರನರಕ, ಈ ಭೂಮಿ ಎಲ್ಲ ಅವನಿಂದಲೇ ಆದುವು.
> ನೂರು ಹೆಸರಿಟ್ಟು, ಬಗೆಬಗೆಯ ಪ್ರಾಣಿಗಳಿಗೆ ಜೀವ ತುಂಬಿದ್ದಾನೆ.
> ದೇವರು ಸತ್ಯ; ಮೋಕ್ಷವೂ ಸತ್ಯ.
> ಅವರವರ ನಡೆನುಡಿಗಳಿಂದ ಅವರವರ ಪರೀಕ್ಷೆ ನಡೆಯುತ್ತದೆಂಬ ಕಾನೂನು
> ಮಾಡಿದ್ದಾನೆ. ಅವನ ಘನ ಸನ್ನಿಧಿಯಲ್ಲಿ ಈ ಪರೀಕ್ಷೆ ನಡೆಯುತ್ತದೆ.
> ಅವರವರ ನಡವಳಿಕೆಗಳಿಗೆ ಅವನೇ ತಕ್ಕ ಗೌರವ ಸಲ್ಲಿಸುತ್ತಾನೆ.
> ಕಾಯಕಗಳು ನೂರಾರು–ಹಣ್ಣಾದವು ಕೆಲವು; ಎಂದೂ ಹೀಚಾಗಿ ಉಳಿಯುವವು
> ಹಲವು. ಓ! ನಾನಕ್, ಹೀಗೆಯೇ ಪರಲೋಕಪ್ರಾಪ್ತಿ.

ಕಾನೂನನ್ನು ಸೃಷ್ಟಿಸುವ, ನ್ಯಾಯತೀರ್ಮಾನ ಮಾಡುವ ಅಧಿಕಾರವನ್ನು ಸಿಕ್ ಸಂಪ್ರದಾಯ ತನ್ನ ಸಮಾಜಕ್ಕೆ ನೀಡಿದೆ. ಸಮಾಜ ವಿಧಿಸುವ ಕಟ್ಟಳೆಗಳಿಗೆ ಗೌರವ ಸಲ್ಲಿಸಬೇಕೆಂದು ಕೊನೆಯ ಗುರು ಹೇಳಿ ತೀರ್ಮಾನಿಸಿದ. ಚುನಾಯಿತ ಗುಂಪಿ (ಸಂಗಾತ್) ನಿಂದಾದ ತೀರ್ಮಾನ (ಮತ) 'ಗುರುಮತ' (ಗುರುವಿನ ಆಜ್ಞೆ) ವಾಗುತ್ತದೆ. ಗುರುಗಳಿಂದಲೇ ವಿಧಾಯಕವಾದ ಕಟ್ಟು ನಿಟ್ಟುಗಳಿಗೆ ಬೇಕಾದರೂ 'ಗುರುಮತ' ಬದಲಾಗಿ ನಡೆಯಬಹುದು.

ಸಿಕ್ಕರಲ್ಲಿ ಪುರೋಹಿತರಿಲ್ಲ. ವಯಸ್ಕರಾದವರೆಲ್ಲರೂ—ಬಡವ ಬಲ್ಲಿದರೆನ್ನದೆ, ಗಂಡುಹೆಣ್ಣೆನ್ನದೆ—ತಮ್ಮ ಧರ್ಮಕಾರ್ಯಗಳನ್ನು ನಡೆಸಿಕೊಳ್ಳಲು ಅರ್ಹರಾಗುತ್ತಾರೆ. ಧರ್ಮಗ್ರಂಥವನ್ನು ಓದುವ ('ಗ್ರಂಥಿ'ಗಳು) ಹಾಡುವ ('ರಾಗಿ'ಗಳು) ಕೆಲಸವನ್ನೇ ಉದ್ಯೋಗವಾಗಿಟ್ಟುಕೊಂಡ ಒಂದು ವಿಧದ ಜನರ ಗುಂಪು ಪ್ರಚಾರದಲ್ಲಿದೆ. ಆದರೆ ಅವರ ಕೆಲಸ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮಾತ್ರ. ಏಕೆಂದರೆ ಅಲ್ಲಿನ ಎಲ್ಲ ಕೆಲಸಗಳೂ ಸಮುದಾಯದಿಂದಲೇ ಆಗಬೇಕಾದಂಥವು!

ಸಿಕ್‌ಧರ್ಮ ಮತಪದ್ಧತಿಯನ್ನು ಗಣಿಸುವುದಿಲ್ಲ. ಜಾತಿ, ಮತಪದ್ಧತಿಗಳನ್ನು ಲಕ್ಷಿಸದೆ ಗುರುನಾನಕ್ ಒಬ್ಬ ಮುಸ್ಲಿಂ ಸಂಗೀತಗಾರನನ್ನು ತನ್ನ ಜೊತೆಗೆ ಆರಿಸಿಕೊಂಡನು. ದೇವರು ಸೃಷ್ಟಿಸಿದವರನ್ನು ಅಸ್ಪೃಶ್ಯರೆಂದು ಕಡೆಗಾಣಿಸುವವರ ಮನೋಧರ್ಮವನ್ನು ತನ್ನ ಬರೆಹಗಳಲ್ಲಿ ನಾನಕ್ ಖಂಡಿಸಿದ್ದಾನೆ:

ಉತ್ತಮರಲ್ಲಿ ಅಧಮರಿದ್ದಾರೆ; ಹೀನರಲ್ಲಿ ಘನಮಹಿಮರಿದ್ದಾರೆ.
ಅಂಥವರು ನಿರ್ಲಕ್ಷಿತರಾಗಿ, ಇನ್ನೊಬ್ಬರ ಕಾಲಡಿಯ ಕಣವಾಗಿದ್ದಾರೆ.

ಮೂರನೆಯ ಗುರು, ಅರ್ಜುನ ಹೇಳಿದ :

ಹಿಂದೂಗಳು ತಮ್ಮಲ್ಲಿ ನಾಲ್ಕು ಮತವೆನ್ನುತ್ತಾರೆ;
ಆದರೆ ಅವೆಲ್ಲ ಒಂದೆ!
ಇದು ಮಣ್ಣಿನಿಂದ ಮಾಡಿದ ಮಡಕೆಯಂತೆ;
ನೂರು ವಿಧ, ನೂರು ರೂಪ—ಮಣ್ಣು ಒಂದೆ!
ಮನುಷ್ಯರೆಲ್ಲರ ದೇಹ ಪಂಚಭೂತಗಳಿಂದಾಗಿದೆ.
ಅವರಲ್ಲಿ ಒಬ್ಬ ಮೇಲು, ಇನ್ನೊಬ್ಬ ಕೀಳು ಹೇಗಾದಾನು?

ಗುರುಗೋವಿಂದನ ಮೊದಲಿನೈದು ಶಿಷ್ಯರಲ್ಲಿ ಮೂವರು ಅಸ್ಪೃಶ್ಯರಾಗಿದ್ದರು. ನಾಲ್ಕರ ಮಿಶ್ರಣವಾದ ವೀಳ್ಯ ಅಗಿದಮೇಲೆ ಒಂದೇ ಬಣ್ಣದ್ದಾಗು

ವಂತೆ, ತಾನು ನಾಲ್ಕು ಜಾತಿಗಳನ್ನೂ ಒಂದು ಮಾಡುವುದಾಗಿ ಅವನು ದೃಢವಾಗಿ ಹೇಳಿದನು.

ಪ್ರಾರ್ಥನೆಯ ಪ್ರಾಮುಖ್ಯತೆಯೇ ಸಿಕ್ ಧರ್ಮದ ಒಂದು ಹೆಗ್ಗುರುತು. ಈ ಪ್ರಾರ್ಥನೆ ಸಾಮಾನ್ಯವಾಗಿ ದೇವರ ನಾಮೋಚ್ಚಾರಣೆ ಹಾಗೂ ಅವನ ಗುಣಗಾನದ ಮಂತ್ರೋಚ್ಚಾರಣೆ. ಇದು ಭಕ್ತಿಪಂಥದಿಂದ ಜಾರಿಗೆ ಬಂತು. ಈಗ ಸಿಕ್ ಧರ್ಮ ಇದನ್ನು ಪರಿಪಾಲಿಸುತ್ತಿದೆ. ಹೀನ, ಅಶುದ್ಧ ಮತ್ತು ಪಾಪಾತ್ಮಕ ಚಿಂತನೆಗಳಿಂದ ಮುಕ್ತರಾಗಲು 'ನಿಜನಾಮ' ಜಪವನ್ನು ಮಾಡಲು ಸಿಕ್ ಧರ್ಮಗ್ರಂಥಗಳು ಪದೇಪದೇ ಎಚ್ಚರಕೊಡುತ್ತವೆ:

ಮೈ ಕೊಳೆಯಾದಾಗ, ನೀರು ಶುದ್ಧಿ ಮಾಡುತ್ತದೆ.
ಬಟ್ಟೆ ಮಾಸಿದಾಗ ಸಾಬೂನು ನೀರಿನಲ್ಲಿ ಜಾಲಿಸಿದರೆ ಶುಭ್ರವಾಗುತ್ತದೆ.
ಪಾಪಾತ್ಮವನ್ನು ಪ್ರಾರ್ಥನೆ ಪರಿಶುದ್ಧವಾಗಿರಿಸುತ್ತದೆ.
ನುಡಿಯಿಂದ ಪಾಪ-ಪುಣ್ಯಗಳ ಸೋಂಕಿಲ್ಲ ;
ನಡೆಯೊಂದೆ ನಮ್ಮ ಅದೃಷ್ಟದ ಬರವಣಿಗೆ.
ನಾವು ಬೆಳೆದಷ್ಟೇ ನಮ್ಮ ಕೈಸೇರುತ್ತದೆ.
ಓ ! ನಾನಕ್, ಪುನರ್ಜನ್ಮದಿಂದ ಎಂದೆಂದಿಗೂ ಮುಕ್ತನಾಗಿರು.

ಬ್ರಹ್ಮಚರ್ಯ, ಪ್ರಾಯಶ್ಚಿತ್ತ, ಸನ್ಯಾಸ ಮುಂತಾದ ಕಠಿಣ ನಿಯಮಗಳಲ್ಲಿ ಸಿಕ್ಕಿಕೊಳ್ಳದಿರಬಹುದಾದ ನಿಶ್ಚಯ ವಿಚಾರಗಳೂ ಇವೆ; ಎಲ್ಲ ಗುರುಗಳೂ ಆದರ್ಶಪೂರ್ಣ ಸಂಸಾರ ನಡಸಿದರು. ತಮ್ಮ ಜನತೆಯ ಧಾರ್ಮಿಕ ಮುಂದಾಳುಗಳಾದಂತೆಯೇ, ಗೃಹಸ್ಥರಾಗಿಯೂ ಲೌಕಿಕ ವ್ಯವಹಾರವನ್ನು ನಡೆಸಿದರು.

ಸಮಾಜ ಸ್ನೇಹವಿಲ್ಲದ ಋಜುಜೀವನ, ಅರ್ಥಹೀನವಾದುದು. ಪ್ರಪಂಚದಲ್ಲಿದ್ದೂ ಪ್ರಾಪಂಚಿಕವಾಗಿರದಿರಬಲ್ಲ ಉಲ್ಲೇಖನೆಯಿದೆ. ಸಮಾಜದಲ್ಲಿದ್ದೂ ಸನ್ಯಾಸತನ ಗಳಿಸುವುದೂ, ಭೌತಿಕ ಸುಖಗಳನ್ನು ಲಕ್ಷಿಸಿಯೂ ದೈವಿಕ ಶಕ್ತಿಯನ್ನು ಸಂಪಾದಿಸುವುದೂ ದೊಡ್ಡ ಆದರ್ಶ! "ರಾಜ್ ಮೇನ್ ಜೋಗ್ ಕಾಮಾಯೋ." ನಾನಕ್ ಹೇಳುತ್ತಾನೆ:

ಧರ್ಮ, ಯೋಗಿ ಧರಿಸುವ ಹರಕು ಅರಿವೆಯಲ್ಲಿಲ್ಲ ;
ಓಡಿಪ ದಂಡ, ಬಳಿವ ವಿಭೂತಿಗಳಲ್ಲಿಲ್ಲ ; ಕುಂಡಲದೊಳಿಲ್ಲ.
ಬೋಳುತಲೆ, ಶಂಖ ನಿನಾದಗಳೊಳಿಲ್ಲ.

ನಿಜಧರ್ಮ ನಿನ್ನ ದಾರಿಯಾದರೆ—
ಜನಕೋಟಿಯೊಳಗಿರುವ ಮಲಿನರನು ನೋಡು ;
ಅವರ ಉದ್ಧಾರಕರ್ತನಾಗು !

ಸಿಕ್ ಧರ್ಮದಲ್ಲಿನ ಶಾಂತಿ, ಸಮಾಧಾನ ಇಂದು ಬೆಳೆದಿರುವ ಹೋರಾಟ ಮನೋಧರ್ಮ ಎರಡೂ ಪರಸ್ಪರ ವಿರೋಧಿಗಳು. ಅದನ್ನು ವಿವರಿಸಬೇಕಾದರೆ ಇತಿಹಾಸದ ದಾಖಲೆಗಳನ್ನು ತಿರುಹಬೇಕಾಗುತ್ತದೆ. ಕ್ರೂರಶಕ್ತಿಯೊಡನೆ, ಮೃದುಸ್ವಭಾವ ಹೊಂದಿಕೊಳ್ಳುವುದು ಕಷ್ಟ. ಶಾಂತಿನಿಷ್ಠೆಯೇ ನಿರ್ಮೂಲ ಗೊಳ್ಳುವ ಭಯ ತೋರಿದಾಗ, ಅದನ್ನುಳಿಸಲಾದರೂ ಹೋರಾಟ ನಡಸ ಬೇಕಾಗುತ್ತದೆ ! ತಾನು ತೆಗೆದುಕೊಂಡ ಕ್ರಮಗಳಿಗೆ ಸ್ವತಃ ಗುರುಗೋವಿಂದ ಸಿಂಗನ ವಿವರಣೆ ಇದು. ಒಂದು ಪರ್ಷಿಯನ್ ಪದ್ಯದಲ್ಲಿ ಅವನು ಹೇಳಿದ್ದಾನೆ:

"ಚುಕರ್ ಅಜ್ ಹಮಾ ಹರ್ ಹೀಲ್ ತೆ ದರ್ ಗುಜಷ್ತ್
ಹಲಾಲ್ ಉಸ್ತ್ ಬರ್‌ದಾಸ್ ಬ ಷಂಷೀರ್ ದಸ್ತ್"
[ಎಲ್ಲ ಮಾರ್ಗಗಳೂ ವಿಫಲಗೊಂಡಾಗ ಕತ್ತಿ ಹಿರಿಯುವುದು ನ್ಯಾಯಸಮ್ಮತ]

ಪಂಜಾಬಿನ ರಾಜಕೀಯ ವ್ಯವಹಾರಗಳು ಪೂರ್ವಸ್ಥಿತಿಗೆ ಬಂದು ಶಾಂತಿ ಯುತವಾಗಿದ್ದಿದ್ದರೆ ಸಿಕ್ಕರ ಕತ್ತಿ ಒರೆಯಿಂದ ಹೊರಬರಬೇಕಾದ ಪ್ರಮೇಯ ವಿರಲಿಲ್ಲ. ಮಾನವತೆ, ಶಾಂತಿಗಳನ್ನು ಬೋಧಿಸಿದ ಗುರುನಾನಕ್ಕನ ತತ್ತ್ವ ಸಿಕ್ ನಂಬುಗೆಯ ಮೂರ್ತಸ್ವರೂಪವಾಗಿ ಉಳಿಯುತ್ತಿತ್ತು. ಗುರುಗೋವಿಂದ ಸಿಂಗನ ಅನಂತರದ ಕಾಲವೆಲ್ಲ ಪ್ರಕ್ಷುಬ್ಧವಾಗಿದ್ದುದು ಭಾರತದ ಇತಿಹಾಸಕ್ಕೆ ತಿಳಿದಿರುವ ವಿಚಾರವೇ ಆಗಿದೆ. ಮೊಗಲ್ ಸಾಮ್ರಾಜ್ಯ ಕ್ಷಯಿಸುತ್ತಿದ್ದುದರ ಕಾರಣಗಳನ್ನು ಅಲ್ಪಸಂಖ್ಯಾತರ ತಲೆಯ ಮೇಲೆ ಹೊರಿಸಿ, ಪಾಪಕುರಿ ಗಳಾಗಿದ್ದ ಸಿಕ್ಕರ ವಂಶವನ್ನು ನಿರ್ಮೂಲಮಾಡುವ ದೃಷ್ಟಿಯಿಂದ ಅವರನ್ನು ಕೊಲ್ಲುತ್ತ ನಡೆಯುವ ಕ್ರೌರ್ಯ ತೋರಿಸಿದರು. ಅದೇ ವೇಳೆಗೆ, ಉತ್ತರ ದೇಶದಿಂದ ದಂಡೆತ್ತಿ ಬಂದ ಮುಸ್ಲಿಮರು ಮುಸ್ಲಿಮೇತರರಾಗಿ ತಮಗೆ ತೋರಿದ ವರನ್ನೆಲ್ಲ ನಾಶಮಾಡಲಾರಂಭಿಸಿದರು. ಇಂಥ ಪರಿಸ್ಥಿತಿಯಲ್ಲಿ ಯುದ್ಧೋಚಿತ ಸಂಪ್ರದಾಯಗಳು ಸಿಕ್ ಧರ್ಮದಲ್ಲಿ ನುಗ್ಗಿಬಂದುವು. ಆ ಗುಣಗಳೇ ಸಿಕ್ಕರ ಬಾಳು-ಬದುಕಿನ ತುಂಬ ಪ್ರಸರಿಸಿಕೊಂಡು ಅವರಿಗೆ "ರಣೋತ್ಸಾಹಿ"ಗಳೆಂಬ ಹೆಸರು ತಂದುವು !

---

# ಅನುಬಂಧ ೧

## ೧೯೬೫-೬೬ರಲ್ಲಿ ಪ್ರಕಟವಾದ ಕಾದಂಬರಿಗಳು

ಅಣ್ಣಾರಾಯ, ಮಿರ್ಜಿ : ಹದಗೆಟ್ಟ ಹಳ್ಳಿ
ಅನಂತಮೂರ್ತಿ, ಯು. ಆರ್ : ಸಂಸ್ಕಾರ
ಅನುಪಮಾ ನಿರಂಜನ : ಹಿಮದ ಹೂ
ಆರ್ಯಾಂಬ ಪಟ್ಟಾಭಿ : ಎರಡು ಮುಖ, ಮರಳಿ ಗೂಡಿಗೆ
ಇನಾಂದಾರ್, ವಿ. ಎಂ : ಮಂಜುಮುಸುಕಿದ ದಾರಿ
ಇಂದಿರಾ, ಎಂ. ಕೆ : ಸದಾನಂದ, ಗೆಜ್ಜೆಪೂಜೆ, ಹೆಣ್ಣಿನ ಆಕಾಂಕ್ಷೆ
ಉಷಾದೇವಿ : ಮುರಿದ ಸರಪಳಿ, ನೀರಮೇಲಣ ಗುಳ್ಳೆ
ಎನ್ಕೆ : ಗೌರೀಶಂಕರ
ಕಾವೇರಿತನಯ : ಸಾವುಬರಲಿಲ್ಲ
ಕುಸುಮಾಕರ ದೇವರಗೆಣ್ಣೂರ : ಮುಗಿಯದ ಕಥೆ, ನಾಲ್ಕನೆಯ ಆಯಾಮ
ಕೃಷ್ಣಮೂರ್ತಿ, ವಿ. ಜಿ : *ರಾಣಾಸಂಗ್ರಾಮಸಿಂಹ
ಕೃಷ್ಣಮೂರ್ತಿ ಪುರಾಣಿಕ : ಹಿಮಗಿರಿಯ ಗೌರಿ, ರಮಾರಮಣ, ಮಾವುಮಲ್ಲಿಗೆ, ವಿದ್ಯಾಸುಂದರಿ, *ಚಂದ್ರಸುಧಾ, ಕಾಂಚನ ಕಸ್ತೂರಿ, ಕಲಿತವಳು, *ವಸುಂಧರಾ
ಕೃಷ್ಣರಾಯ, ಅ. ನ : ನರಬಲಿ, ಅಣ್ಣತಂಗಿ, ಕಣ್ಣಿನ ಗೊಂಬೆ, ಜನತಾ ಜನಾರ್ಧನ, ದಾದಿಯ ಮಗ, ಅಕ್ಕಯ್ಯ, *ಹೊನ್ನೆ ಮೊದಲು, *ಮೋಸದ ತೆರೆ
ಕೃಷ್ಣರಾವ್, ನಾಡಿಗೇರ : ಬೆಂಕಿಯ ಹೂ, ಜಾನಕಿ, ವಯಸ್ಸಿಗೆ ಬಂದವಳು, ಕಾಂತಿ ಮತಿ, ಕಮಲೆಯ ಕನಸು, ಕೈಹಿಡಿದವಳ ಪುಣ್ಯ, ಗಾನ ನಂದಿನಿ, ಬಂಗಾರದ ಬಳ್ಳಿ
ಜಯಲಕ್ಷ್ಮಿ, ಎಂ. ಕೆ : ಕನಸು–ನನಸು ೧–೨
ತಪಸ್ವಿನಿ : ಮೆಚ್ಚಿನ ಸೊಸೆ
ತ. ರಾ. ಸು : ಹಾವು ಹಿಡಿದವರು, ಕಸ್ತೂರಿ ಕಂಕಣ, ರಾಜ್ಯದಾಹ, ಅಗ್ನಿರಥ–ಮುಕ್ತಿಪಥ
ತ್ರಿವೇಣಿ : ಅವಳ ಮಗಳು
ದಕ್ಷಿಣಾಮೂರ್ತಿ, ಬಿ. ವಿ : ಹೊಸವಸಂತ
ದಯಾನಂದ ತೊರ್ಕೆ : ವಿಮುಕ್ತಿ
ದಾಶರಥಿ ದೀಕ್ಷಿತ್ : ಗಂಡಾಗಿ ಕಾಡಿದ್ದ ಗುಂಡ
ದೇವೇಂದ್ರಕುಮಾರ ಹಕಾರಿ : ಚೆಲ್ವಕೋಗಿಲೆ

ನಚಿಕೇತ : ಬಣ್ಣದ ನೆರಳು
ನರಸು : ಹರಿಯದ ನದಿ
ನಾಗರಾಜಯ್ಯ, ಹಂಪ : ನಾಗಶ್ರೀ
ನಾಯಕ್, ಎಂ. ಜಿ : ತುಟಿ ಮೀರಿದ ಹಲ್ಲು, ಆ ತೀರ ಬಲು ದೂರ
ನಾರಾಯಣ ಮಾಳಕೋಡ : ಬಿಚ್ಚಿದ ಗಂಟು
ನಿರಂಜನ : ಸ್ವಾಮಿ ಅಪರಂಪಾರ, ನೂರು ಜುಟ್ಟು ಮೂರು ಜಡೆ
ನೀಳಾದೇವಿ : ಕಣ್ಣು ಮುಚ್ಚಾಲೆ
ಪದ್ಮಾ : ಸಂಧಿಕಾಲ
ಪದ್ಮಾ, ಎಂ. ಸಿ : ಸನತಿ–ಕಸ್ತೂರಿ
ಪರಂಜ್ಯೋತಿ : ಒಲವು ಚೆಲುವಲ್ಲ
ಪುಟ್ಟಸ್ವಾಮಯ್ಯ, ಬಿ : ಅರ್ಧಾಂಗಿ
ಪೂರ್ಣಚಂದ್ರ ತೇಜಸ್ವಿ : ಸ್ವರೂಪ
ಪ್ರಕಾಶ್ : ಆಹ ಈ ಬದುಕು
ಬಸವರಾಜ ಕಟ್ಟೀಮನಿ : ಪ್ರಪಾತ
ಬೀಚಿ : ಸಕ್ಕರೆ ಮೂಟೆ, ಆರಿದ ಚಹಾ, ಸಾಹುಕಾರ ಸುಬ್ಬಮ್ಮ
ಬ್ರಹ್ಮಪ್ಪ, ಜಿ : ದಾನ ಚಿಂತಾಮಣಿ, ಚಕ್ರೇಶ್ವರಿ
ಭಟ್ಟ, ಪ. ಸು : ಆತ್ಮಾರ್ಪಣೆ
ಭಾರತೀಸುತ : ಗಿರಿಕನ್ಯೆ
ಭೈರಪ್ಪ, ಎಸ್. ಎಲ್ : ಜಲಪಾತ, ಮತದಾನ, ವಂಶವೃಕ್ಷ
ಮಣಿ, ರಾ. ಸು : ಕೆಸರಿನ ತಾವರೆ
ಮಲ್ಲರಾಜ ಅರಸು, ಬಿ : ಗ್ರಾಮಸೇವಕ ರಾಮಚಂದ್ರ, ರಾಮನಹಳ್ಳಿಯ ಹೊಸ ಬಾಳು
ಮಲ್ಲಿಕಾ : ಜೀವನಗಂಗಾ
ಮಂಜಪ್ಪ, ಕಡಿದಾಳ್ : ನಾಳೆಯ ನೆಳಲು
ಮುನಿನಂಜಪ್ಪ, ಮು : ಮರಳಿ ಮುತ್ತೈದೆಯಾದಾಗ
ಮೂರ್ತಿ, ಎ. ಎಸ್ : ನಾನೂ ನೀನೂ ಜೋಡಿ, ಕಳ್ಳರಸಂತೆ
ಮೂರ್ತಿ, ಮ. ನ : ದೇವರಹಸ್ಯ, ವಸುಂಧರೆ, ಕಾಲಸರ್ಪಿಣಿ
ಮೊಗಸಾಲೆ, ಎನ್. ಬಿ : *ಮಣ್ಣಿನ ಮಕ್ಕಳು
ರಘುರಾಮ ಹೆಗ್ಡೆ : *ಅರಳಿದ ಬಾಳು, ಪುಣ್ಯ ಪ್ರಭಾವ
ರಾಜಣ್ಣ, ನಾ : ಮುಗಿಲಮಾಲೆ
ರಾಮರಾವ್, ಟಿ. ಕೆ : *ದೂರಗಗನ

ರೆಡ್ಡಿ, ಜಿ. ಎ : ಹೊಯಿಸಳ ವೀರಬಲ್ಲಾಳ
ಲಿಂಗಣ್ಣಯ್ಯ, ಓ. ಎನ್ : ಕಲ್ಲುಗಾಣ
ವಾಣಿ : ಕಾವೇರಿಯ ಮಡಿಲಲ್ಲಿ
ವಿಶುಕುಮಾರ್ : ನೆತ್ತರಗಾನ, ಗಗನಗಾಮಿಗಳು
ವೆಂಕಟಯ್ಯ, ಜಿ : ಚಂದನದ ಕೊರಡು
ವೆಂಕಟರಾಮ್, ತ. ಪು : ಹರಿಯಳಾದೇವಿ
ವೆಂಕೋಬರಾವ್, ಪಿ. : ಚಂಬಲಕಣಿವೆಯ ಚಮತ್ಕಾರ
ಶಂಕರಮೂರ್ತಿ ಪಾನ್ಯಂ : ಸ್ವಪ್ನಸೌಧ
ಶಾರದೆ : ಜೋಡಿಹಕ್ಕಿ
ಶಾಸ್ತ್ರಿ, ಪಿ. ವಿ : *ಪ್ರಥಮ ಸಾಮ್ರಾಟ
ಶಿವರಾಮ ಕಾರಂತ : ಒಂಟಿದನಿ, ಸ್ವಪ್ನದ ಹೊಳೆ
ಶಿವಾಜಿರಾವ್, ಎಂ : ದೇವಾಲಯದಲ್ಲಿ, ವೀಣೆ ನುಡಿಯಿತು
ಶೇಷಗಿರಿರಾವ್, ಮ್ಯ. ಸು : ಹೆಳವನಕಟ್ಟೆ ಗಿರಿಯಮ್ಮ
ಶ್ರೀನಿವಾಸ ಉಡುಪ : ಪ್ರೇಮಸಮರ, ಜೀವನದ ಜೊತೆಗಾರ, *ಬಾಳಿನ ವೈಭವ, ಪ್ರೇಮದ ಮನೆ
ಶ್ರೀನಿವಾಸರಾವ್ ಕೊರಟಿ : ಉಭಯ ಲೋಕೇಶ್ವರ, *ರಾಜ್ಯಕ್ಷಯ
ಶ್ರೀರಂಗ : ಸೌಜನ್ಯದ ಬೆಲೆ
ಸತ್ಯಮೂರ್ತಿ, ಬಿ. ಜಿ : ಒಲವಿನ ಒಸರು
ಸೂರ್ಯನಾಥ ಕಾಮತ್ : ಥೇಂಸ್‌ನಿಂದ ಗಂಗೆಗೆ
ಸೂರ್ಯನಾರಾಯಣ ಚಡಗ : ದೇವರ ಹೆಂಡತಿ, ಪದ್ಮ ಸರೋವರ, ಸೀಮಂತಿನಿ, ಗಂಗಾಭವಾನಿ, *ನಂದಾದೀಪ

# ಅನುಬಂಧ ೨

## ೧೯೬೫-೬೬ರಲ್ಲಿ ಪ್ರಕಟವಾದ ಕಥಾಸಂಗ್ರಹಗಳು

ಅನುಪಮಾ ನಿರಂಜನ : ಏಳುಸುತ್ತಿನ ಮಲ್ಲಿಗೆ
ಅನ್ನದಾನಿ, ಜಿ. ಎಸ್ : ಬೆಳಕು ಬೆಳಕನೆ ಕೂಡಿತು
ಅಶ್ವತ್ಥ : ನೋವು ನಲಿವು
ಉಮಾಶಂಕರ : ಸತ್ತವನ ಹಿಂದೆ
ಕಾಮತ್, ಎಲ್. ಎಂ : ಆಶಾ-ಲತಾ
ಕೋಡು ಭೋಜಶೆಟ್ಟಿ : *ಬಯಸದೆ ಬಂದಾಕೆ
ಕೃಷ್ಣಮೂರ್ತಿ ಪುರಾಣಿಕ : ಜೀವರಸ, *ಸೌಭಾಗ್ಯದೃಷ್ಟಿ
ಕೃಷ್ಣರಾಯ, ಅ. ನ : ಅನಕೃ ಅವರ ಆಯ್ದ ಕಥೆಗಳು
ಗೋಪಿನಾಥರಾವ್, ಸರ್ವದೆ : ಮಾರಿ ಬಲೆ ಎಳೆದಾಗ
ಚಂಪಾವತಿ ಮಹಿಷಿ : *ಗುರುದಕ್ಷಿಣೆ
ಜನಾರ್ದನ ಗುರ್ಕಾರ : ಕಂಬದ ಹುಚ್ಚು
ಟಿ. ಕೆ. ಆರ್ : *ಹಂಬಲ ಚಿಗುರಿತು
ತ. ರಾ. ಸು : ಇದೇ ನಿಜವಾದ ಸಂಪತ್ತು, ದಶಮಂಜರಿ
ದಯಾನಂದ ತೊರ್ಕೆ : *ಪರ್ಣಕುಟಿ
ನಮಿರಾಜಮಲ್ಲ, ಸೇವ : *ಮರದ ಮರೆಯಲ್ಲಿ
ನಾಗಭೂಷಣರಾವ್ ಸಿಂಧೆ : ನೈಲಾನ್ ಸಾಕ್ಸ್
ನಂಜರಾಜ ಅರಸು ಪಿ. ವಿ : ಅದೃಶ್ಯಪಥ
ನಾಯಕ, ಹಾ. ಮಾ. : ಹಾವು ಮತ್ತು ಹೆಣ್ಣು
ನಾಯ್ಕ, ಎಚ್. ಡಿ : *ತರಂಗ
ನಾರಾಯಣ ಬಲ್ಲಾಳ, ಎನ್ : ಕೆಂಪುದೀಪ
ನಾರಾಯಣ ಭಟ್ಟ ಮಡಿಯಾಲ : *ಹೃದಯ ಕುಸುಮ
ನಿರಂಜನ : ನಾಸ್ತಿಕ ಕೊಟ್ಟ ದೇವರು
ಪರಂಜ್ಯೋತಿ : ಕತ್ತಲಲ್ಲಿ ಹುಟ್ಟಿತೊಂದು ಕಥೆ
ಪ್ರಿಯತಮಾ : ಸಮರ್ಪಯಾಮಿ, ಭಾವಭಂಗ
ಪ್ರೇಮಾಭಟ್ : *ಮನಮೆಚ್ಚಿದವಳು
ಬಸವರಾಜ ಕಟ್ಟೀಮನಿ : ಸೈನಿಕನ ಹೆಂಡತಿ

ಬಸವರಾಜ್, ಆರ್ : ಕುರಿಗಳು ಸಾಕಿದ ತೋಳ
ಭಾರತೀಸುತ : ಕರೆಗೆ ಓಗೊಟ್ಟ ಕಾರ್ಡೀಲಿಯಾ
ಭುವನೇಶ್ವರಿ ಸಿಂಪಿ : ಕರುಳಿನ ಕರೆ
ಮುಕುಂದ : ಮಧುಚಂದ್ರ
ರಘುರಾಮರೆಡ್ಡಿ, ವಿ. : *ಬಾಸಿಂಗಬಲ
ರಮಾತನಯ : ಶಾರದೆ ಶಾಮಲೆ
ರವೀಂದ್ರನಾಥ, ಎಂ. ಕೆ : *ನನ್ನ ಮಗಳು ಸರಸು ಮತ್ತು ಇತರ ಕಥೆಗಳು
ರಾಜಗೋಪಾಲ, ಕ. ವೆಂ : ಅರ್ಧತೆರೆದ ಬಾಗಿಲು
ರಾಜಶೇಖರ್ ಚಿ. ಸ. ಮತ್ತು ದ್ವಾ. ಶ್ರೀ. ವೆಂಕಟೇಶ್ : ಬೊಂಬೆಯ ಮದುವೆ
ರಾಮಸ್ವಾಮಿ ಅಯ್ಯಂಗಾರ್, ಗೊರೂರು : ಕನ್ಯಾಕುಮಾರಿ ಮತ್ತು ಇತರ ಕತೆಗಳು
ರಂಗನಾಥನ್ ಮಾವಿನಕೆರೆ : ರುಕ್ಮಿಣಿ
ಲಲಿತಾಂಬಾ ಚಂದ್ರಶೇಖರ್ : ಬಿಡಿಹೂಗಳು
ಲಿಂಗಯ್ಯ, ಡಿ : ಆಟಿಕೆ
ವರದರಾಜ ಹುಯಿಲಗೋಳ : ದೀಪವೊಂದು
ವಿಜಯಕುಮಾರ್, ಪಿ : *ದೇವಮಂದಿರದಲ್ಲಿ
ವಿಶುಕುಮಾರ್ : ಕುಸುಮ ಕೀರ್ತನ
ವ್ಯಾಸ, ಎಂ : ಕಂಬನಿ
ಶೆಟ್ಟಿ, ಕೆ. ಜಿ : ಬೊಂಬಾಯಿಯ ವರ
ಶಾಂತಿನಾಥ ದೇಸಾಯಿ : ಕ್ಷಿತಿಜ
ಶೇಷನಾರಾಯಣ : ಮೊಲ್ಲೆ–ಮಲ್ಲಿಗೆ
ಶ್ರೀನಿವಾಸ ಉಡುಪ : ಹೆಗ್ಗಡ್ತಿ ಹೆತ್ತ ದೆವ್ವ, *ಬದುಕು, *ಹೊಸ ಕಥೆಗಳು
ಶ್ರೀನಿವಾಸರಾವ್ ಕೊರಟಿ : ಭದ್ರಾಂಬೆ, *ರಾಮರಾಯನ ತಲೆ
ಶ್ರೀಕಾಂತ : ಪಾಪು–ಪುಟ್ಟು
ಶ್ರೀಮಿತ್ರೂರ್ : ನಿಮ್ಮಂಥವರೇ ಹೆಚ್ಚು ಮಂದಿ, ನನ್ನ ಮದುವೆ ನಿಮ್ಮೊಂದಿಗೇ, ಕೊನೆಯ ಬಯಕೆ
ಸದಾಶಿವರಾವ್, ಎಸ್ : ಮೇರಿಕೊಟ್ಟ ಬೆಂಡೋಲೆ
ಸಾವಿತ್ರಮ್ಮ ಎಚ್. ವಿ : ಸರಿದ ಬೆರಳು
ಸುಧಾಕರ : ಕಣ್ಣಿ ಕಿತ್ತ ಹಸು
ಸಂಕಲನಗಳು : ಹೊಸ ಕ್ಷಿತಿಜ, ಎಂಟು ಕಥೆಗಳು, ಇಂದಿನ ಕಥೆಗಳು, ನಗೆ ತಂದ ಸಂದೇಶ, ತ್ರಿವೇಣಿ, ಪ್ರೇಮಸುಧಾ, ಹೊಸಗೊಂಚಲ

*ಈ ಗುರುತಿನ ಪುಸ್ತಕಗಳನ್ನು ಈ ಲೇಖಕ ನೋಡಿಲ್ಲ.

## ಡಾ. ಹಾ. ಮಾ. ನಾಯಕರ ಕೃತಿಗಳು

ಬಾಳ್ನೋಟಗಳು
ರವೀಂದ್ರನಾಥ ಠಾಕೂರ್
ನಮ್ಮ ಮನೆಯ ದೀಪ
ಸಂಕೀರ್ಣ
ಸಮೀಕ್ಷೆ
ಸಂಚಯ
ಹಾವು ಮತ್ತು ಹೆಣ್ಣು
ಮಹಮ್ಮದ್ ಪೈಗಂಬರ್
ಗುರುದೇವ ರವೀಂದ್ರರು
Kannada : Literary and Colloquial
Kannada Literature : A Decade

**ಸಂಪಾದಿತ :**

ರೂಪಾರಾಧಕ
ಬಾಗಿನ (ಬೇರೆಯವರೊಡನೆ)
ನಿಸರ್ಗದುಡಿಯಲ್ಲಿ
ಜೀವಂಧರ ಚರಿತೆಯ ಸಂಗ್ರಹ (ಬೇರೆಯವರೊಡನೆ)
ದೇಜಗೌ : ವ್ಯಕ್ತಿ ಮತ್ತು ಸಾಹಿತ್ಯ

**ಅನುವಾದ :**

ಶಾಂತಿಸ್ವರೂಪ ಭಟ್ನಾಗರ್
ಭಾರತದ ಹಳ್ಳಿಗಳು (ಬರಲಿದೆ)

# ನಮ್ಮ ಕೆಲವು ಪ್ರಕಟನೆಗಳು

## ಹಳಗನ್ನಡ ನಡುಗನ್ನಡ ಕವಿತೆಗಳು

ಲೀಲಾವತೀ ಪ್ರಬಂಧಂ (ನೇಮಿಚಂದ್ರ)
—ಸಂ. ಕೆ. ವೆಂಕಟರಾಮಪ್ಪ, ದೇ. ಜವರೇಗೌಡ ೧೫ ೦೦

ಕಬ್ಬಿಗರಕಾವಂ (ಆಂಡಯ್ಯ)—ದೇ. ಜವರೇಗೌಡ ೪ ೦೦

ಯಶೋಧರ ಚರಿತೆ (ಜನ್ನ)—ಸಂ. ಕೆ. ವಿ. ರಾಘವಾಚಾರ್ ೪ ೦೦

ಹರಿಶ್ಚಂದ್ರ ಕಾವ್ಯ (ರಾಘವಾಂಕ)—ಸಂ. ಎನ್. ಬಸವಾರಾಧ್ಯ,
ಎಂ. ಡಿ. ಬಸಪ್ಪ ೮ ೦೦

ಸಿದ್ಧರಾಮ ಚರಿತ್ರೆಯ ಸಂಗ್ರಹ ( ,, )
—ಸಂ. ಡಿ. ಎಲ್. ನರಸಿಂಹಾಚಾರ್ ೨ ೫೦

ನಳಚರಿತ್ರೆಯಸಂಗ್ರಹ (ಕನಕದಾಸ)
—ಸಂ. ಎಚ್. ಎಂ. ಎಸ್. ರಾವ್ ೨ ೦೦

ಕನ್ನಡ ಭಾಗವತ I (ಚಾಟು ವಿಠಲನಾಥ)
—ಸಂ. ಕೆ. ವೆಂಕಟರಾಮಪ್ಪ ೩ ೦೦

ಕನ್ನಡ ಭಾಗವತ V ,, ೧೫ ೦೦

ಕುಮಾರರಾಮ ಸಾಂಗತ್ಯ ಸಂಗ್ರಹ (ರತ್ನಾಕರವರ್ಣಿ)
—ಸಂ. ಎನ್. ಅನಂತರಂಗಾಚಾರ್ ೩ ೦೦

ಚಿಕ್ಕದೇವರಾಯ ಸಪ್ತಪದಿ (ತಿರುಮಲಾರ್ಯ)
—ಸಂ. ಎಚ್. ಎಸ್. ಹರಿಶಂಕರ್ ೩ ೭೫

## ಹೊಸಗನ್ನಡ ಕವಿತೆಗಳು

ಕನ್ನಡ ಕುಮಾರ ಸಂಭವ—ಎಸ್. ವಿ. ಪರಮೇಶ್ವರಭಟ್ಟ ೨ ೫೦

ಕನ್ನಡ ಗಾಥಾ ಸಪ್ತಶತಿ, ಭಾಗ I—ಅನು: ,, ೦ ೫೦

ಪರಂಪರೆ—ಡಾ. ಜಿ. ವರದರಾಜರಾವ್ ೨ ೨೫

ನೆಲಮುಗಿಲು—ಚನ್ನವೀರಕಣವಿ ೩ ೦೦

ಒಲುಮೆ—ತೀ. ನಂ. ಶ್ರೀಕಂಠಯ್ಯ ೨ ೨೫

ಬೆಳಗಾಯಿತು—ಗುಂಡ್ಮಿ ಚಂದ್ರಶೇಖರ ಐತಾಳ್ ೨ ೦೦

ಮಹಾಪ್ರಸ್ಥಾನ—ಪು. ತಿ. ನರಸಿಂಹಾಚಾರ್ ೧ ೫೦

ಹಣತೆ—ಪು. ತಿ. ನರಸಿಂಹಾಚಾರ್ ೨ ೫೦

| | | |
|---|---|---|
| ಮುಂದಳಿರು—ಪು. ತಿ. ನರಸಿಂಹಾಚಾರ್ | ೧ | ೫೦ |

**ನಾಟಕಗಳು**

| | | |
|---|---|---|
| ಅಹಲ್ಯೋದ್ಧಾರ —ಶ್ರೀರಂಗ | ೧ | ೫೦ |
| ಪೂರ್ವರಂಗ ,, | ೧ | ೫೦ |
| ಮುಹೂರ್ತ ,, | ೧ | ೫೦ |
| ಸರ್ಕಸ್ಸಿನ ಸರಸ್ವತಿ ,, | ೧ | ೫೦ |
| ದಾಂಪತ್ಯದ ದೊಂಬೆ ,, | ೨ | ೫೦ |
| ಪ್ರಪಂಚ ಪ್ರವಾಹ ,, | ೨ | ೫೦ |
| ಭೂತಕನ್ನಡಿ ,, | ೨ | ೦೦ |
| ತಾರಕಸಂಹಾರ ,, | ೨ | ೦೦ |
| ಪರಮೇಶ್ವರ ಪುಲಿಕೇಶಿ ,, | ೨ | ೨೫ |
| ಶ್ರೀರಂಗನಾಟ್ಯತರಂಗ I ,, | ೧೨ | ೦೦ |
| ಶ್ರೀರಂಗನಾಟ್ಯತರಂಗ II ,, | ೧೫ | ೦೦ |
| ಶಬರಿ—ಪು. ತಿ. ನರಸಿಂಹಾಚಾರ್ | ೧ | ೦೦ |
| ಹರಿಶ್ಚಂದ್ರ ,, | ೩ | ೭೫ |
| ಹರಿಶ್ಚಂದ್ರ—ಎಸ್. ವಿ. ರಂಗಣ್ಣ | ೨ | ೨೫ |
| ಏಕಾಂಕ ಸಂಗ್ರಹ (ದೆಹಲಿ ಸಾಹಿತ್ಯ ಅಕಾಡೆಮಿಯ ಪರವಾಗಿ) | ೫ | ೦೦ |
| ಚಂದ್ರಗುಪ್ತ ( ,, ) | ೪ | ೫೦ |
| ಮೇಜರ್‌ಬಾರ್ಬರ (ಬರ್ನಾಡ್‌ಷಾ) ಅನು—ವಿ. ಸೀತಾರಾಮಯ್ಯ | ೮ | ೦೦ |
| ವಸಂತಚಂದನ—ಪು. ತಿ. ನರಸಿಂಹಾಚಾರ್ | ೧ | ೦೦ |
| ಸುಧಾ—ಸಾಹಸಿ | ೨ | ೫೦ |
| ಹಂಸದಮಯಂತಿ ಮತ್ತು ಇತರ ರೂಪಕಗಳು—ಪು. ತಿ. ನ. | ೧೦ | ೦೦ |
| ಹರಿಣಾಭಿಸರಣ—ಪು. ತಿ. ನರಸಿಂಹಾಚಾರ್ | ೧ | ೨೫ |
| ಕನ್ನಡಮಾಳವಿಕಾಗ್ನಿಮಿತ್ರ ೩-೫೦ (ಕ್ಯಾ) | ೧ | ೫೦ |
| ಕನ್ನಡ ಮೃಚ್ಛಕಟಿಕ (ಶೂದ್ರಕ) ಅನು—ಡಾ. ಕೆ. ಕೃಷ್ಣಮೂರ್ತಿ | ೪ | ೦೦ |
| ಕನ್ನಡ ಉತ್ತರರಾಮಚರಿತ್ರೆ (ಭವಭೂತಿ) ಅನು: ,, | ೩ | ೦೦ |
| ಕನ್ನಡ ಪ್ರತಿಮಾನಾಟಕ (ಭಾಸ) ಅನು: ,, | ೨ | ೨೫ |
| ಕನ್ನಡ ಯಜ್ಞಫಲ (ಭಾಸ) ಅನು: ,, | ೨ | ೦೦ |
| ಕರ್ಣಾಟ ಪ್ರತಿಮಾನಾಟಕ (ಭಾಸ) ಅನು—ಮೈ. ಸೀತಾರಾಮಶಾಸ್ತ್ರೀ | ೨ | ೨೫ |
| ವೇಣೀಸಂಹಾರನಾಟಕ ಪ್ರತಿಕೃತಿ (ಭಟ್ಟನಾರಾಯಣ) ಅನು: ಮೈ.ಸೀ. | ೨ | ೨೫ |

**ಸಣ್ಣ ಕಥೆಗಳು**

| | |
|---|---|
| ಜಯಂತಿ—ಎಂ. ಎಸ್. ಸುಲೋಚನ | ೨ ೨೫ |
| ಅರ್ಧತೆರೆದ ಬಾಗಿಲು—ಕ. ವೆಂ. ರಾಜಗೋಪಾಲ | ೨ ೨೫ |
| ಕತ್ತಲಲ್ಲಿ ಬೆಳಕು (ಶರತ್‌ಚಂದ್ರ) ಅನು : ಕೆ. ವೀರಭದ್ರ | ೧ ೦೦ |
| ವೈಯ್ಯಾರಿ—ಗೊರೂರು ರಾಮಸ್ವಾಮಿ ಐಯಂಗಾರ್ | ೬ ೦೦ |
| ಚಿಟ್ಟೆಯಾಗಿ ಹಾರಿತು—ಎಂ. ಸಿ. ಪದ್ಮ | ೩ ೦೦ |
| ಕುಮುದ—ಶೇಷನಾರಾಯಣ | ೩ ೦೦ |
| ಶ್ರೀಪತಿಯ ಕಥೆಗಳು—ಡಾ. ಎ. ಆರ್. ಕೃಷ್ಣಶಾಸ್ತ್ರೀ | ೪ ೦೦ |
| ಶಿಲ್ಪಿಸಂಕುಲ—ಆನಂದ | ೨ ೨೫ |
| ದೂರದ ಕಾಶಿಯಲ್ಲಿ—ಅಶ್ವತ್ಥ | ೫ ೦೦ |
| ಕನ್ಯಾಕುಮಾರಿ ಮತ್ತು ಇತರ ಕಥೆಗಳು—ಗೊರೂರು ರಾಮಸ್ವಾಮಿ ಐಯಂಗಾರ್ | ೨ ೫೦ |

**ಕಾದಂಬರಿಗಳು**

| | |
|---|---|
| ರಕ್ಷಾಕವಚ (Talisman)—ಸ್ಕಾಟ್ : ಅನು : ಆನಂದ | ೩ ೦೦ |
| ಐವನ್‌ಹೊ (Ivonhoe) ,, ಅನು : ,, | ೩ ೬೦ |
| ಕೆನಿಲ್‌ವರ್ತ್ (Kenilworth)—ಅನು : ಎಚ್. ಎಲ್. ನಾಗೇಗೌಡ | ೪ ೫೦ |
| ಹಮ್ಮು-ಬಿಮ್ಮು (Pride and Prejudice)—ಜೇನ್ ಆಸ್ಟಿನ್ : ಅನು. ದೇ. ಜವರೇಗೌಡ | ೩ ೬೦ |
| ಪುನರುತ್ಥಾನ (Resurrection)—ಟಾಲ್‌ಸ್ಟಾಯ್ ಅನು : ದೇ. ಜವರೇಗೌಡ | ೧೫ ೦೦ |
| ಮೃಗನಯನೆ (ವೃಂದಾವನಲಾಲ್‌ವರ್ಮ) ಅನು : ಡಾ. ಎಂ. ಎಸ್. ಕೃಷ್ಣಮೂರ್ತಿ | ೭ ೫೦ |
| ಜೈ ಸೋಮನಾಥ (ಕೆ. ಎಂ. ಮುನಷಿ) —ಅನು : ಡಾ. ಎಂ. ಎಸ್. ಕೃಷ್ಣಮೂರ್ತಿ | ೪ ೫೦ |
| ದೇವದಾಸ (ಶರತ್‌ಚಂದ್ರ)—ಅನು : ಕೆ. ವೀರಭದ್ರ | ೨ ೨೫ |
| ನಾನು ಮಾಧವಿ ,, ,, | ೧ ೫೦ |
| ಮನೆ ಸುಟ್ಟಿತು ,, ,, | ೭ ೫೦ |
| ರಾಮನ ಬುದ್ಧಿವಂತಿಕೆ ,, | ೧ ೫೦ |
| ಆಷಾ I (ರೈಡರ್ ಹೆಗಾರ್ಡ್)—ಅನು : ಎ. ಮೈಲಾರಿರಾವ್ | ೩ ೭೫ |
| ಆಷಾ II ,, ,, | ೪ ೫೦ |
| ಮುದ್ರೆಯುಂಗುರ—ಎಚ್. ಎಂ. ಶಂಕರನಾರಾಯಣರಾವ್ | ೪ ೦೦ |

ಮುರುಕುಮಂಟಪ—ಎಸ್. ಅನಂತನಾರಾಯಣ ೧ ೫೦
ಹೇಮಾವತಿ—ಗೊರೂರು ರಾಮಸ್ವಾಮಿ ಐಯಂಗಾರ್ ೪ ೫೦

ಜೀವನ ಚರಿತ್ರೆಗಳು

ಚಾರಲ್ಸ್ ಡಾರ್ವಿನ್ (ಡಾರ್ವಿನ್)
—ಅನು: ಜೆ. ಎಲ್. ಜೀವೂಬಾಯಿ ೨ ೦೦
ಜಾನ್ ಸ್ಟೂವರ್ಟ್‌ಮಿಲ್—ಎಚ್. ಕೃಷ್ಣರಾವ್ ೨ ೨೫
ರವೀಂದ್ರನಾಥಠಾಕೂರ್—ಡಾ. ಹಾ. ಮಾ. ನಾಯಕ ೩ ೭೫
ಕರ್ಮಯೋಗಿ—ಡಾ. ಜಿ. ಎಸ್. ಶಿವರುದ್ರಪ್ಪ ೨ ೨೫

ಪ್ರಬಂಧಗಳು

ಮಿನುಗು ಮಿಂಚು—ಎ. ಎನ್. ಮೂರ್ತಿರಾವ್ ೨ ೨೫
ಕೆಲವು ಇಂಗ್ಲಿಷ್ ಪ್ರಬಂಧಗಳು—ಎಸ್. ವಿ. ಪರಮೇಶ್ವರಭಟ್ಟ ೧ ೫೦
ಸಂಟರು—ತೀ. ನಂ. ಶ್ರೀಕಂಠಯ್ಯ ೩ ೦೦
ಪುಸ್ತಕವನ್ನು ಬಿಡು—ಎಸ್. ಮಂಜುನಾಥ್ ೧ ೫೦
ರಾಮಾಚಾರಿಯ ನೆನಪು—ಪು. ತಿ. ನರಸಿಂಹಾಚಾರ್ ೨ ೦೦
ಧೇನುಕಪುರಾಣ— ,, ೩ ೦೦
ಹೊಸಗನ್ನಡ ಪ್ರಬಂಧ ಸಂಕಲನ (ಸಾಹಿತ್ಯ ಅಕಾಡೆಮಿ, ದೆಹಲಿ) ೪ ೫೦
ಅಭ್ಯುದಯದ ಹಾದಿಯಲ್ಲಿ—ಹಾರ್ಡೀಕರ್ ಮಂಜಪ್ಪ ೨ ೦೦
ಹೇಮಾವತಿಯ ತೀರದಲ್ಲಿ—ಗೊರೂರು ರಾಮಸ್ವಾಮಿ ಐಯಂಗಾರ್ ೨ ೨೫
ಬೆಳುದಿಂಗಳು—ವಿ. ಸೀತಾರಾಮಯ್ಯ ೩ ೦೦
ನಮ್ಮ ಮನೆಯ ದೀಪ—ಡಾ. ಹಾ. ಮಾ. ನಾಯಕ ೨ ೦೦

ಅಲಂಕಾರ ಗ್ರಂಥಗಳು

ಕನ್ನಡ ಕಾವ್ಯಾಲಂಕಾರ (ಭಾಮಹ) ೬ ೦೦
ಕನ್ನಡ ಕಾವ್ಯಾಲಂಕಾರ ಸೂತ್ರವೃತ್ತಿ (ವಾಮನ) ೬ ೦೦
ಕನ್ನಡ ಔಚಿತ್ಯ ವಿಚಾರಚರ್ಚೆ (ಕ್ಷೇಮೇಂದ್ರ) ೩ ೦೦
ಕನ್ನಡ ಕಾವ್ಯ ಮೀಮಾಂಸೆ (ರಾಜಶೇಖರ)
ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ
(ಆನಂದವರ್ಧನ ಮತ್ತು ಅಭಿನವಗುಪ್ತ) ೮ ೦೦
ಕನ್ನಡ ವಕ್ರೋಕ್ತಿ ಜೀವಿತ (ಕುಂತಕ)
ಕನ್ನಡ ಕಾವ್ಯಪ್ರಕಾಶ (ಮಮ್ಮಟ) ಭಾಗ I ೬ ೦೦
,, ಭಾಗ II ೧೦ ೦೦
ಆನಂದವರ್ಧನನ ಕಾವ್ಯ ಮೀಮಾಂಸೆ
ಕನ್ನಡದಲ್ಲಿ ಕಾವ್ಯತತ್ತ್ವ ೨ ೨೫

---

ಕನ್ನಡ ಕವಿ ಕಾವ್ಯಮಾಲೆ
ಶಾರದಾ ಮಂದಿರ
ರಾಮಯ್ಯರ್ ರಸ್ತೆ : : ಮೈಸೂರು-4
ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು
ಎಚ್. ಎಂ. ಶಂಕರನಾರಾಯಣ ರಾವ್, ಎಂ.ಎ.
ಕನ್ನಡ ಪ್ರಾಧ್ಯಾಪಕರು ಮತ್ತು ಇಲಾಖೆಯ ಮುಖ್ಯಾಧಿಕಾರಗಳು
ಶಾರದಾವಿಲಾಸ ಕಾಲೇಜು, ಮೈಸೂರು

# ಬೆಳ್ಳಿಯ ಹಬ್ಬ

ಕನ್ನಡ ನುಡಿಯಲ್ಲಿ ವಿದ್ವತ್ತು, ಸಾಹಿತ್ಯದ ವಿಷಯಕ್ಕೆ ಜನರಲ್ಲಿ ಸದಭಿರುಚಿ—ಇವುಗಳನ್ನು ಬೆಳೆಯಿಸುವ ಸಲುವಾಗಿ ಒಳ್ಳೆಯ ಗ್ರಂಥಗಳನ್ನು ಪ್ರಕಟಿಸಲು ಈ ಮಾಲೆಯನ್ನು ಪ್ರಾರಂಭಿಸಲಾಯಿತು. ಇಪ್ಪತ್ತೈದು ವರ್ಷಗಳ ಈ ಅವಧಿಯಲ್ಲಿ ಸಂಸ್ಕೃತ ಅಲಂಕಾರಶಾಸ್ತ್ರ ಗ್ರಂಥಗಳ ಅನುವಾದಗಳು, ವ್ಯಾಕರಣ, ವಿಮರ್ಶೆ, ಇಂಗ್ಲಿಷ್ ಭಾಷೆಯ ಸುಪ್ರಸಿದ್ಧ ಕೃತಿಗಳ ಭಾಷಾಂತರಗಳು, ಸುಸಂಪಾದಿತವಾದ ಹಳಗನ್ನಡ ನಡುಗನ್ನಡ ಕಾವ್ಯಗಳು, ನಾಟಕ, ಪ್ರಬಂಧ, ಜೀವನಚರಿತ್ರೆ, ಕಥೆ. ಕಾದಂಬರಿ—ಇವೇ ಮೊದಲಾದ ಸಾಹಿತ್ಯ ಪ್ರಕಾರಗಳ ಇನ್ನೂರು ಗ್ರಂಥಗಳನ್ನು ಈ ಮಾಲೆಯಲ್ಲಿ ಪ್ರಕಟಿಸಲಾಗಿದೆ. ಮಕ್ಕಳನ್ನೂ ಈ ಮಾಲೆ ಮರೆತಿಲ್ಲ. ನನ್ನ ಗುರುಗಳೂ ಗೆಳೆಯರೂ ಆದ ಪ್ರಸಿದ್ಧ ವಿದ್ವಾಂಸರು ತಮ್ಮ ಕೃತಿಗಳನ್ನು ಪ್ರಕಟನೆಗೆ ಕೊಟ್ಟು ಈ ಮಾಲೆಯನ್ನು ಬೆಳೆಸಿದ್ದಾರೆ. ಈ ಮಹನೀಯರ ಸಹಾಯವನ್ನು ಕೃತಜ್ಞತೆಯಿಂದ ನೆನೆಯುತ್ತ ಅವರೆಲ್ಲರ ವಿಶ್ವಾಸದ ಕುರುಹಾಗಿ ಈ ಮಾಲೆಯ ಬೆಳ್ಳಿಯ ಹಬ್ಬವನ್ನು ಆಚರಿಸಲು ಸಂಕಲ್ಪಿಸಿದೆ. ಈ ಉತ್ಸವದ ಸವಿನೆನಪಿಗಾಗಿ ಒಂದು ಸಂಪುಟವನ್ನೂ ಇಪ್ಪತ್ತೈದು ಪ್ರಕಟನೆಗಳನ್ನೂ ಹೊರತರಲು ಪ್ರಯತ್ನಗಳು ನಡೆಯುತ್ತಿವೆ. ಆ ಪ್ರಯತ್ನದ ಒಂದು ಫಲವೇ ಆಪ್ತಮಿತ್ರರಾದ ಡಾ. ಹ. ಮಾ. ನಾಯಕರ ಈ ಪ್ರಬಂಧ ಸಂಕಲನ.